# ನಮ್ಮ ಮಾನಸ

**ಮಾರ್ಚ್ 2009**

ಸಂಪುಟ : 2 ಸಂಚಿಕೆ : 11



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*





*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8-00 ರೂ.** |
| **ವಾರ್ಷಿಕ ಚಂದಾ** (ವಿಶೇಷ ಸಂಚಿಕೆಯೊಂದಿಗೆ) | **100-00 ರೂ.** |
| **ಸಂಸ್ಥೆಗಳಿಗೆ** | **150-00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*




ಸಂಪಾದಕೀಯ

# ತಾತ್ತ್ವಿಕತೆ ಮತ್ತು ಪ್ರತಿಭಟನೆಯ ಹೊಸಮಾರ್ಗ

**ಮಾ**ರ್ಚ್ 8, ಅಂತರರಾಷ್ಟ್ರೀಯ ಮಹಿಳಾದಿನ, ನಡೆದು ಬಂದ ಹಾದಿಯ ಪುನರವಲೋಕನ ಮತ್ತು ಮುಂದಿನ ನಡೆಯನ್ನು ಗುರುತಿಸಿಕೊಳ್ಳಲು ಸಕಾಲ ಎಂದು ಭಾವಿಸುತ್ತೇವೆ. ಈ ಹೊತ್ತಿನ ಚಾರಿತ್ರಿಕ ಘಟ್ಟದಲ್ಲಿ ಮಹಿಳಾ ಚಳವಳಿ ಅನೇಕ ಸವಾಲು, ಸಂಕೀರ್ಣತೆಗಳನ್ನು ಎದುರಿಸುತ್ತಿದೆ. ಕೋಮುವಾದ, ಜಾಗತೀಕರಣ ಹಾಗೂ ಹೊಸ ಬಗೆಯ ಹಿಂಸೆಗಳು ಮಹಿಳೆಯ ಬದುಕನ್ನು ಇನ್ನಷ್ಟು ಅಸಹನೀಯಗೊಳಿಸುವುದರ ಜೊತೆಗೆ ಮಹಿಳಾ ಚಳವಳಿಯ ತಾತ್ತ್ವಿಕತೆ ಹಾಗೂ ಹೋರಾಟದ ತಂತ್ರಗಳು ಪುನರ್‌ರೂಪಿತಗೊಳ್ಳಬೇಕಾದ ಒತ್ತಡವನ್ನು ಹೇರುತ್ತಿವೆ. ಈ ಹಿನ್ನೆಲೆಯಲ್ಲಿ ಮಾರ್ಚ್ 8, 2009ರ ಸಂಚಿಕೆಯನ್ನು ಅಂತರರಾಷ್ಟ್ರೀಯ ಮಹಿಳಾ ದಿನದ ಚಾರಿತ್ರಿಕ ಮಹತ್ವವನ್ನು ಸಂಕೇತಿಸುತ್ತಾ ಮಹಿಳಾ ಚಳವಳಿಯ ಗಂಭೀರ ಮರುಚಿಂತನೆಗೆ ಒದಗಬಲ್ಲ ವಿಶೇಷಾಂಕವನ್ನಾಗಿಸಲು ನಮ್ಮ ಮಾನಸ ಬಳಗವು ಯತ್ನಿಸಿದೆ.

ಸ್ವಾಯತ್ತ ಮಹಿಳಾ ಚಳವಳಿ ಮಹಿಳೆಯನ್ನು 'ಬಲಿಪಶು'ವಾಗಿ ಮಾತ್ರ ನೋಡದೇ ಆಕೆಯ ಆತ್ಮಶಕ್ತಿಯ ಕಡೆ ಪ್ರಚೋದನೆ ನೀಡಿ ಆಕೆಯ ಸ್ವತಂತ್ರ ಬದುಕಿನ ಹರವನ್ನು ಇನ್ನಷ್ಟು ವಿಸ್ತಾರಗೊಳಿಸುತ್ತಲೇ ಸಾಮೂಹಿಕ ಚಿಂತನೆಗೆ ಹೆಚ್ಚು ಒತ್ತು ನೀಡುತ್ತಿರುವುದು ಸ್ವಾಗತಾರ್ಹವಾಗಿದೆ. ಅಂದರೆ ವೈಯಕ್ತಿಕ ಸಮಸ್ಯೆಗೆ ಹೋರಾಡುತ್ತಲೇ ಅಂತರಂಗದ ಸಾಮರ್ಥ್ಯಗಳನ್ನು ಗುರುತಿಸಿಕೊಳ್ಳುವುದು, ಅದರಿಂದ ಒಂದು ಅಸ್ತಿತ್ವವನ್ನು ಗುರುತಿಸಿಕೊಳ್ಳುವತ್ತ ಬದುಕಿನ ನೆಲೆಗಳನ್ನು ವಿಸ್ತರಿಸಿಕೊಳ್ಳುವುದಾಗಿದೆ.

ಕೋಮುವಾದದ ಹಿಂಸೆಯ ವಿರುದ್ಧ ಮಹಿಳಾ ಚಳವಳಿ 80ರ ದಶಕದಿಂದಲೂ ಹೋರಾಡುತ್ತಲೇ ಬಂದಿದೆ. ಇತ್ತೀಚೆಗೆ ಮಂಗಳೂರಿನಲ್ಲಿ ನಡೆದ ಘಟನಾವಳಿಗಳನ್ನು ಬಿಡಿ ಬಿಡಿಯಾಗಿ ನೋಡದೇ ಒಟ್ಟು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಚೌಕಟ್ಟಿನಲ್ಲಿ ನೋಡಬೇಕಿದೆ. ಕೋಮುವಾದದ ಚಿಂತನೆ ಹಾಗೂ ಅದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು, ಸಾಂಸ್ಕೃತಿಕ ಅಡ್ಡಗೋಡೆಗಳನ್ನು ಹಿಡಿದು ಮಹಿಳೆಯರನ್ನು ವಾಪಸ್ಸು ಮನೆಗೆ ಕಳುಹಿಸುವ ಹುನ್ನಾರವನ್ನು ಮಾಡುತ್ತಿವೆ . ಈ ಹುನ್ನಾರಗಳನ್ನು ವಿವಿಧ ರೀತಿಯ ಪ್ರತಿರೋಧಗಳ ಮೂಲಕ ಬಯಲುಗೊಳಿಸುವ ಯತ್ನವನ್ನು ನಾವು ನೋಡ ಬಹುದು.

ಪಿಂಕ್ ಚಡ್ಡಿ, ಪಬ್‌ಭರೋ, ಪ್ರೇಮಿಸೋಣ ಬನ್ನಿ – ಈ ರೀತಿಯ ಪ್ರತಿರೋಧಗಳು ಮೇಲ್‌ಸ್ತರದ ಕ್ರಿಯೆ–ಪ್ರತಿಕ್ರಿಯೆಗಳಾಗಿ ಕಾಣಿಸುತ್ತವೆ. ಆದಾಗ್ಯೂ ಪ್ರತಿರೋಧಕದ ಆಳದಲ್ಲಿನ ಮಹಿಳೆಯರ ಕೋಪ–ಹತಾಶೆಗಳನ್ನು ಒಟ್ಟು ಆರ್ಥಿಕ, ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಸ್ತ್ರೀವಾದಿ ತಾತ್ತ್ವಿಕ ದೃಷ್ಟಿಕೋನದಿಂದ ವಿಶ್ಲೇಷಿಸುವ ಸವಾಲು ನಮ್ಮ ಮುಂದಿದೆ.

## ಒಳಗಿನ ಪುಟಗಳಲ್ಲಿ....





ಸ್ವಾಯತ್ತ ಮಹಿಳಾ ಚಳವಳಿಯು ಶ್ರೇಣೀಕೃತ ವ್ಯವಸ್ಥೆ, ಅಧಿಕಾರಗಳನ್ನು ನಿರಾಕರಿಸುತ್ತಾ ಸಾಮೂಹಿಕ ಚಿಂತನೆ, ಸಾಂಘಿಕ ಪ್ರಯತ್ನಗಳನ್ನು ಪ್ರತಿಪಾದಿಸುತ್ತಲೇ ಬಂದಿದೆ. ಇಂದು ಜಾಗತೀಕರಣದ ಸ್ಪರ್ಧಾತ್ಮಕ ಬದುಕಿನ ಹಿನ್ನೆಲೆಯಲ್ಲಿ ಸಾಮೂಹಿಕ ಚಿಂತನೆ, ಒಗ್ಗೂಡಿದ ಪ್ರಯತ್ನಗಳು ಹಾಗೂ ಶ್ರೇಣಿರಹಿತ ಪರಿಕಲ್ಪನೆಗಳನ್ನು ಯುವ ಜನಾಂಗದಲ್ಲಿ ಮೂಡಿಸುವ ಪ್ರಯತ್ನಗಳನ್ನೂ ಸಹ ನಾವು ಇಂದು ಹೆಚ್ಚು ಕ್ರಿಯಾತ್ಮಕವಾಗಿ ನಡೆಸಬೇಕಾಗಿದೆ.

70ರ ದಶಕದಿಂದ ಮಹಿಳಾ ಚಳವಳಿ ಎತ್ತಿದ ಪ್ರಶ್ನೆಗಳನ್ನು ಮಹಿಳಾ ಸಬಲೀಕರಣದ ಹೆಸರಿನಲ್ಲಿ ಸರ್ಕಾರ co-opt ಮಾಡಿಕೊಂಡು ಚಳವಳಿಯ ಪರಿಭಾಷೆಯಲ್ಲಿಯೇ ಕಾರ್ಯಕ್ರಮಗಳನ್ನು ರೂಪಿಸುತ್ತವೆ. ಆದರೆ ಇಂತಹ ಕಾರ್ಯಕ್ರಮಗಳ ಪರಿಮಿತಿಗಳನ್ನು ವಿಶ್ಲೇಷಿಸಿ, ಸ್ಪಷ್ಟಪಡಿಸಿಕೊಳ್ಳುವ ಮೂಲಕ ಸ್ವಾಯತ್ತ ಮಹಿಳಾ ಚಳವಳಿ ಅದರ ಬದ್ಧತೆ ಹಾಗೂ ಸೈದ್ಧಾಂತಿಕ ನಿಲುವುಗಳನ್ನು ಕಾಪಾಡಿಕೊಳ್ಳುವ ಅಗತ್ಯವಿದೆ.

ಜಾಗತೀಕರಣ ಇಂದು ಅಂಚಿಗೆ ತಳ್ಳುತ್ತಿರುವ ಮಹಿಳಾ ಉದ್ಯೋಗಿಗಳ ಬದುಕನ್ನು ಸಹನೀಯವಾಗಿಸುವ ಹೋರಾಟದ ತಂತ್ರಗಳಿಗೆ ಮಹಿಳಾ ಚಳವಳಿ ಹೊಸದೊಂದು ದೃಷ್ಟಿಕೋನ ನೀಡಬೇಕಾದ ಅಗತ್ಯವನ್ನು ನಾವು ಮನಗಾಣಬೇಕಿದೆ. ಪಿತೃ ಪ್ರಾಧಾನ್ಯ, ಜಾಗತೀಕರಣವನ್ನು ಒಳಗೊಂಡಂತೆ ಕೋಮುವಾದಿ ಚಿಂತನೆಗಳು ಲಿಂಗತ್ವದ ಮೇಲೆ ನಡೆಸುತ್ತಿರುವ ಅವ್ಯಾಹತ ದಾಳಿಗೆ ತಾತ್ತ್ವಿಕತೆಯ ಜೊತೆಗೆ ಪ್ರತಿಭಟನೆಯ ಹೊಸ ಮಾರ್ಗಗಳನ್ನು ರೂಪಿಸಿಕೊಳ್ಳುವ ಒತ್ತಡ ಸ್ವಾಯತ್ತ ಚಳವಳಿಯ ಮೇಲಿದೆ. ಇಂತಹ ಮರುಚಿಂತನೆಗೆ ಪ್ರೇರಣೆ ನೀಡಬಲ್ಲ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿ ಸುಮಾರು 35 ಜನರಿಗೆ ಕಳುಹಿಸಿ ಅವರ ಪ್ರತಿಕ್ರಿಯೆಗಳನ್ನು ಒಗ್ಗೂಡಿಸಲು ಯತ್ನಿಸಲಾಯಿತು. ನಾವು ಪ್ರಶ್ನೆಗಳನ್ನು ಕಳುಹಿಸಿದವರೆಲ್ಲ ಸಮಾಜದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರು. ಮಹಿಳಾ ಚಳವಳಿಗಾರರು, ಸಾಮಾಜಿಕ ಕಾರ್ಯಕರ್ತೆಯರು, ಮಹಿಳಾ ಅಧ್ಯಯನಗಳಲ್ಲಿ ತೊಡಗಿದವರು, ಚಿಂತನಶೀಲರು, ಸಾಹಿತಿಗಳು, ವಿಮರ್ಶಕರು, ಕಲೆಗಾರರು... ಇತ್ಯಾದಿ. ಆದರೆ ನಮಗೆ ಪ್ರತಿಸ್ಪಂದಿಸಿದವರು ಕೇವಲ ಒಂಬತ್ತು ಮಂದಿ ಮಾತ್ರ. ಹೀಗಾಗಿ ಸಮಕಾಲೀನವಾಗಿ ಮಹಿಳಾ ಚಳವಳಿ ಕುರಿತಂತೆ ವ್ಯಾಪಕವಾದ ನೋಟಗಳನ್ನು ಒದಗಿಸುವ ನಮ್ಮ ಆಸೆ ನಾವು ಬಯಸಿದ್ದಷ್ಟು ಸಫಲವಾಗಿಲ್ಲ. ಕಾರಣಗಳು ಏನೇ ಇರಲಿ, ಹೀಗೆ ಸ್ಪಂದಿಸಿರುವ ಸಾರಾ ಅಬೂಬಕ್ಕರ್, ಡಾ॥ ಎನ್. ಗಾಯತ್ರಿ, ಚಂದ್ರಕಲಾ ನಂದಾವರ, ಮೀರಾನಾಯಕ್, ಡಾ॥ ವಿನಯಾ, ಸವಿತಾ ನಾಗಭೂಷಣ, ಸಿ.ಜಿ. ಮಂಜುಳ, ಕೆ.ಎಸ್. ವಿಮಲಾ ಹಾಗೂ ಮಲ್ಲಿಗೆ ಮತ್ತು ಇವರೆಲ್ಲರ ಸೌಹಾರ್ದತೆಗೆ 'ನಮ್ಮ ಮಾನಸ' ಗೌರವಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತದೆ.

ಬೇರೆ ಬೇರೆ ಕ್ಷೇತ್ರಗಳಲ್ಲಿ ಕಳೆದ ಮೂರು ದಶಕಗಳಲ್ಲಿ ನಡೆದಿರುವ ಮಹಿಳಾ ಅಧ್ಯಯನಗಳು, ಚಿಂತನೆಗಳು ಮತ್ತು ಮಹಿಳೆಯರ ಅನುಭವಲೋಕವನ್ನು ಈ ಸಂಚಿಕೆ ಒಳಗೊಳ್ಳಬೇಕು ಎಂಬುದು ಇನ್ನೊಂದು ಆಶಯ. ಈ ನಿಟ್ಟಿನಲ್ಲಿ ನಮಗೆ ನಿರೀಕ್ಷಿಸಿದ್ದಷ್ಟು ವಿಪುಲ ಪ್ರತಿಕ್ರಿಯೆ ಬಾರದಿದ್ದರೂ ಅರ್ಥಪೂರ್ಣ ಚರ್ಚೆಗಳನ್ನು ಹುಟ್ಟುಹಾಕುವಂಥ ಸಶಕ್ತವಾದ ಬರಹಗಳೇ ಬಂದಿವೆ ಎಂಬುದು ಸ್ವಲ್ಪ ಸಮಾಧಾನದ ಸಂಗತಿ. ಇಂಥ ವಿಚಾರ ಪ್ರಚೋದಕ ಲೇಖನಗಳ ಬಗ್ಗೆ ಕೆಲವು ಮಾತುಗಳನ್ನಿಲ್ಲಿ ಹೇಳುವುದು ಉಚಿತ.

ಮನೋರಂಜಿನಿ ಥಾಮಸ್ ಕುಂಬ್ದಳ್ ಅವರು ಬರೆದಿರುವ "ದಲಿತ ಮಹಿಳೆ ಮತ್ತು ಕಾನೂನು" ತುಂಬ ವಿಚಾರಾರ್ಹ ಚಿಂತನೆಗಳುಳ್ಳದ್ದು. ಲಿಂಗ, ವರ್ಗ ಮತ್ತು ಜಾತಿ-ಈ ಮೂರೂ ಬಗೆಯ ತಾರತಮ್ಯಗಳನ್ನು ದಲಿತ ಮಹಿಳೆಯರು ಎದುರಿಸುತ್ತಿದ್ದಾರೆ. ಜಾತಿಯಿಂದಲೂ ಹೆಣ್ಣಾದ್ದರಿಂದಲೂ ಅವರನ್ನು 'ಕೀಳು' ಎಂದು, ಅವರು ಮಾಡುವ ಕೆಲಸವನ್ನೂ 'ಕೀಳು' ಎಂದೂ ಕಾಣುವುದರಿಂದ ಕೋಟ್ಯಂತರ ಟನ್ನುಗಳಷ್ಟು ಮಾನವ ಶ್ರಮವನ್ನು ಕೌಶಲ್ಯಹೀನ ಕೀಳು ಕೆಲಸ ಎಂದು ನಿರ್ಲಕ್ಷಿಸಲಾಗಿದೆ. ಪ್ರಭುತ್ವ, ಕಾನೂನು ಮತ್ತು ನ್ಯಾಯಾಂಗಗಳು ದಲಿತ ಮಹಿಳೆಯರ ವಾಸ್ತವ

ಸ್ಥಿತಿಗತಿಗಳನ್ನು ಗ್ರಹಿಸುವತ್ತ ಯತ್ನ ಮಾಡಿಯೇ ಇಲ್ಲ. ಇದರಿಂದಾಗಿ ದಲಿತ ಮಹಿಳೆಯರ ಶ್ರಮಕ್ಕೆ ಬೆಲೆ ಕಟ್ಟಿಲ್ಲ; ಅವರದು ಪುಗಸಟ್ಟೆ ಶ್ರಮ, ಯಾರಾದರೂ ಅದನ್ನು ಬಳಸಿಕೊಳ್ಳಬಹುದು. ದಲಿತ ಮಹಿಳೆಯರ ದೇಹ ಯಾರಾದರೂ ಭೋಗಿಸಬಹುದಾದ್ದು ಎಂದೇ ಭಾವಿಸಲಾಗಿದೆ. ತಮ್ಮ ಶ್ರಮಕ್ಕೆ ತಕ್ಕ ಬೆಲೆ, ತಮ್ಮ ಬದುಕಿಗೆ ಘನತೆ ತಂದುಕೊಳ್ಳಲು ಅವರು ಅನ್ಯಾಯದ ವಿರುದ್ಧ ಪ್ರತಿಭಟಿಸಿದರೆ ಕಿರುಕುಳ, ಅತ್ಯಾಚಾರ, ಅವಮಾನ, ಕೊಲೆ ಇಲ್ಲವೇ ಉಪವಾಸ ಬಿದ್ದು ಸಾಯುವದಕ್ಕೆ ಅವರು ಬಲಿಯಾಗುತ್ತಾರೆ. ಮಹಿಳೆಯರ ಪರಿಸ್ಥಿತಿ ಸುಧಾರಣೆಗೆ, ಶೋಷಣೆಯ ನಿವಾರಣೆಗೆ, ಹಕ್ಕುಗಳ ಸ್ಥಾಪನೆಗೆ ಲಭ್ಯವಿರುವ ಎಲ್ಲಾ ನಿಟ್ಟಿನ ಕಾನೂನುಗಳೂ ದಲಿತ ಮಹಿಳೆಯರ ವಸ್ತುಸ್ಥಿತಿ, ಸಂಕಟ ಯಾತನೆಗಳನ್ನು ಗ್ರಹಿಸುವಲ್ಲಿ ಹೇಗೆ ದೂರವೇ ಉಳಿದಿವೆ ಎಂಬುದನ್ನು ತುಂಬ ಸೂಕ್ಷ್ಮವಾಗಿ ಮನೋರಂಜಿನಿ ವಿಶ್ಲೇಷಿಸಿದ್ದಾರೆ.

'ದಲಿತ ಮಹಿಳಾ ಸಂವೇದನೆ' ಎಂಬ ದು. ಸರಸ್ವತಿಯವರ ಲೇಖನದಲ್ಲಿ ಮಹಿಳಾಭಿವ್ಯಕ್ತಿಯನ್ನು ಕುರಿತ ಸಾಹಿತ್ಯ ವಿಮರ್ಶೆಗೆ ಸೇರಬಹುದಾದ ಅನೇಕ ಹೊಸ ಹೊಳಹುಗಳಿವೆ. ದಲಿತ ಮಹಿಳೆಯರ ಅಭಿವ್ಯಕ್ತಿ ಎಂಬುದನ್ನು ಸಾಮಾನ್ಯತಿ ಸಾಮಾನ್ಯ, ನಿರಕ್ಷರಸ್ತ, ಗ್ರಾಮೀಣ/ನಗರಗಳ ದಲಿತ ಮಹಿಳೆಯರ ಮಾತು, ದೇಹಾಭಿನಯ, ಕೊರಳ ಧ್ವನಿಯ ಏರಿಳಿತಗಳುಳ್ಳ ವಿಶಿಷ್ಟ ಕಲೆಗಾರಿಕೆಯುಳ್ಳದ್ದೆಂದು ಗುರುತಿಸುವ ಲೇಖಕಿಯ ಪ್ರಕಾರ ಪ್ರೀತಿ, ಕೋಪ, ಸ್ವಾಭಿಮಾನ, ಪ್ರತಿಭಟನೆಗಳನ್ನು ವ್ಯಕ್ತಪಡಿಸುವ ದಲಿತ ಮಹಿಳಾಕ್ರಮವು ಮೇಲ್ಜಾತಿ ವರ್ಗಗಳ ಶಿಷ್ಟ ಅಭಿವ್ಯಕ್ತಿಯ ನಿರ್ಬಂಧಿತ ಮಾದರಿಗಳಿಗೆ ಸವಾಲೊಡ್ಡಬಲ್ಲದು, ಎಲ್ಲಕ್ಕಿಂತ ಮುಖ್ಯವಾಗಿ ಪ್ರೀತಿ ಮತ್ತು ಜೀವನ ಪ್ರೇಮಗಳೇ ದಲಿತ ಮಹಿಳೆಯರ ಸಂವೇದನೆಯ ವಿಶಿಷ್ಟ ಲಕ್ಷಣಗಳು ಎಂದು ಈ ಲೇಖಕಿ ಹೇಳುತ್ತಾರೆ.

"ಅಕ್ಕನ ವಚನಗಳಲ್ಲಿ ದೇಹ ಮತ್ತು ಲೈಂಗಿಕತೆ; ಮುಂದುವರೆದ ಆಲೋಚನೆಗಳು" ಎಂಬುದು ಡಾ॥ ಸುಧಾ ಸೀತಾರಾಮನ್ ಅವರು ಮಾಡಿರುವ ಅಕ್ಕಮಹಾದೇವಿಯ ವಚನಗಳ ಸಮಾಜಶಾಸ್ತ್ರೀಯ ಅಧ್ಯಯನದ ಅಂಶವುಳ್ಳ ಲೇಖನ. ಸ್ತ್ರೀವಾದಿ ವಿಮರ್ಶೆ, ಸಾಹಿತ್ಯಾಂಶಗಳ ವಿಮರ್ಶೆ ಮುಂತಾದ ಅಧ್ಯಯನ ಯತ್ನಗಳು ನಿರ್ದಿಷ್ಟ ಸಿದ್ಧಾಂತಗಳ ಮೂಲಕ ಅಕ್ಕನ ವಚನಗಳನ್ನು ಅರ್ಥೈಸಿಕೊಳ್ಳುವ ಪರಿಮಿತ ಯತ್ನಗಳೆನ್ನುವ ಲೇಖಕಿ, ಹನ್ನೆರಡನೆಯ ಶತಮಾನದ ಸಮಾಜದ ಅನೇಕ ಪರಿಕಲ್ಪನೆ, ನಂಬಿಕೆಗಳನ್ನು ಗ್ರಹಿಸಲು ಅಕ್ಕನ ವಚನಗಳು ನೆರವಾಗಬಲ್ಲವು; ಉಡುಗೆ, ತೊಡುಗೆ, ವೇಷ ಭೂಷಣಗಳ ಬಗ್ಗೆ ಅಕ್ಕನು ವ್ಯಕ್ತಪಡಿಸುವ ವಿಚಾರಗಳು ವಿಭಿನ್ನ ಸ್ತರಗಳನ್ನು ಹೊಂದಿರುತ್ತವೆ. ಪತಿಯನ್ನು ಬರಮಾಡಿಕೊಳ್ಳುವ ಪ್ರಿಯೆ/ಸಾಧ್ವಿ ಗೃಹಿಣಿಯಾಗಿ ದೇಹದ ಸ್ತ್ರೀತ್ವದ ಲಕ್ಷಣಕ್ಕೆ ಒತ್ತುಕೊಡುವ ದೇಹಸಿಂಗಾರದ ಮಾತನ್ನಾಡುವ ಅಕ್ಕ ಮತ್ತೊಂದೆಡೆ ಯೋಧನ ಉಡುಗೆ ತೊಡುಗೆ ಧರಿಸುವ ಮೂಲಕ ಪುರುಷನ ಸ್ಥೈರ್ಯ, ದೃಢತೆ, ಶಕ್ತಿಗಳನ್ನೂ ಆರೋಪಿಸಿಕೊಳ್ಳುವ ಮಾತನ್ನಾಡುತ್ತಾಳೆ. ಸಮರ್ಪಣಾಭಾವದ ಸ್ತ್ರೀತ್ವದ ಪರಿಕಲ್ಪನೆಯನ್ನು ಪುರುಷ ತನಕ್ಕೆ ಆರೋಪಿಸಿ, ಭವಿ ತನವನ್ನು ಮೀರಲು ಯತ್ನಿಸುವ ಮೂಲಕ ಅಕ್ಕ ಶರಣಸತಿ-ಲಿಂಗಪತಿ ತತ್ವವನ್ನೂ ಲಿಂಗತ್ವದ ಪರಂಪರಾಗತ ಪರಿಕಲ್ಪನೆಯನ್ನೂ ಬುಡಮೇಲು ಮಾಡುತ್ತಾಳೆಂದು ಸುಧಾ ಗುರುತಿಸಲೆತ್ನಿಸಿದ್ದಾರೆ.

ಪ್ರತಿಭಾ ನಂದಕುಮಾರ್ ಅವರ 'ಪಿಂಕ್ ಚಡ್ಡಿ ಪ್ರಲಾಪ' ಘನ ಗಂಭೀರವಾದ ಏಕಸೂತ್ರದ ಚಿಂತನೆ/ಅಭಿವ್ಯಕ್ತಿ ಕ್ರಮವನ್ನು ಉದ್ದೇಶಪೂರ್ವಕ ವಾಗಿಯೇ ಪರಿಹರಿಸುವ ಬಹು ಆಯಾಮಿಕ ಮಹಿಳಾಭಿವ್ಯಕ್ತಿಯ ಸ್ವಯಂ ಮಾದರಿ ಲೇಖನವೆನ್ನಬಹುದಾಗಿದೆ. ಇದು ಪದ್ಯ, ಗದ್ಯ, ಗಂಭೀರ ಚರಿತ್ರೆಯ ವಿವೇಚನೆ, ವರ್ತಮಾನದ ಪಬ್ ಪ್ರಕರಣದಂಥ ಅವಮಾನಕರ ಸನ್ನಿವೇಶಗಳನ್ನು ಹಾಸ್ಯ, ವಿಡಂಬನೆ, ಕೀಟಲೆಗಳಿಂದ ವ್ಯಂಗ್ಯವಾಗಿ ನೋಡುವ ಯತ್ನ ಮಾಡುತ್ತದೆ. ಲೇಖನದಲ್ಲಿ ಹೊಮ್ಮಿ ಬರುವ ಹಲವು ಕಾಳಜಿಗಳಲ್ಲಿ ಒಂದು ಮಹಿಳಾ ಅಭಿವ್ಯಕ್ತಿಗೂ ಸಂಬಂಧಿಸಿದ್ದಾಗಿದೆ. ಮಹಿಳೆಯರು ಎಲ್ಲ ದಮನಕಾರಿ ಚರಿತ್ರೆಯೊಳಗೂ ತಮ್ಮದೇ ಆದ ಉಳಿವಿನ ಆರಂಭದಲ್ಲಿರುವ ದೇವಿಯನ್ನು ಕುರಿತ ಕವನದ ತುಂಬ ಲಲಿತಾಸಹಸ್ರನಾಮದ ವಿಶೇಷಣಗಳನ್ನು ಧಾರಾಳವಾಗಿ ಬಳಸಿದ್ದು, ಆ ಸಂಸ್ಕೃತ ಶಬ್ದಗಳು ಸಂಸ್ಕೃತಿ ರಕ್ಷಣೆಗೆ ಹೆಣ್ಣನ್ನು ಬಡಿಯುವ ಬಡಿಗೆದಾರರಿಗೆ ಅರ್ಥವಾಗಿದೆಯೇ ಎಂಬ ಕೀಟಲೆ ವ್ಯಂಗ್ಯ, ಲೇವಡಿಯುಳ್ಳ ಅನನ್ಯ ರಚನೆ ಈ ಲೇಖನ.

ಈ ಸಂಚಿಕೆಯಲ್ಲಿ ಚಿತ್ರಕಲೆಯ ಕ್ಷೇತ್ರದ ಮಹಿಳಾ ಸಾಧನೆಗೆ ಸಂಬಂಧಿಸಿದ ಎರಡು ಲೇಖನಗಳಿದ್ದು ಅದರಲ್ಲಿ ಚಿ.ಸು. ಕೃಷ್ಣಸೆಟ್ಟಿಯವರ ಲೇಖನ "ದಿಟ್ಟಿಸಿ ನೋಡುವ 'ವಸ್ತು'ಗಳಿಂದ ಮರು ದಿಟ್ಟ ನೋಟ"ವು ಪಾಶ್ಚಾತ್ಯ ಸ್ತ್ರೀವಾದಿ ಚಳವಳಿಯು ಅಲ್ಲಿನ ಚಿತ್ರಕಲೆಯ ಸ್ವರೂಪ, ದಿಕ್ಕು, ದೆಸೆಗಳ ಮೇಲೆ ಬೀರಿದ ಪರಿಣಾಮಗಳ ಸಂಕ್ಷಿಪ್ತ ನೋಟವನ್ನು ಒಳಗೊಂಡಿದ್ದರೆ, ಮಮತಾ ಜಿ.ಸಾಗರ ಅವರ ಲೇಖನ "ಕಲೆ ಕಟ್ಟಿಕೊಟ್ಟ ಆಯಾಮ"ವು ಸಮಕಾಲೀನ ಕನ್ನಡ ಮಹಿಳಾ ಚಿತ್ರಗಾರರ ಅಭಿವ್ಯಕ್ತಿಯ ಸ್ವರೂಪವನ್ನು ಪರಿಚಯಿಸುತ್ತದೆ.

ನಾಲ್ವರು ಪ್ರತಿಷ್ಠಿತ ಮಹಿಳಾ ಕವಿಗಳು – ಲಲಿತಾ ಸಿದ್ಧಬಸವಯ್ಯ [ಪಂಕ್ತಿಭೇದ], ಎಚ್.ಎಲ್. ಪುಷ್ಪ [ಒಂದು ದಿನದ ಕಥೆ], ಸವಿತಾ ನಾಗಭೂಷಣ [ಏನಾಗುವೆ?] ಹಾಗೂ ಪ್ರತಿಭಾ ನಂದಕುಮಾರ ಅವರ [ಲೇಖನದ ಆರಂಭ ದ 'ದೇವಿ'] ಕವಿತೆಗಳಿಂದ ನಿಜವಾಗಿ ಸಮಕಾಲೀನ ಮಹಿಳಾ ಕವಿಮನದ ಮಿಡಿತಗಳ ಮಿಂಚಿನೆಳೆಗಳನ್ನು ಹಿಡಿಯುವ ಅವಕಾಶ ಈ ವಿಶೇಷ ಸಂಚಿಕೆಗೆ ಲಭ್ಯವಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ವಿಷಮವಾಗುತ್ತಿರುವ ಕೋಮುಸೌಹಾರ್ದಭಾವವನ್ನು ಮಾನವ – ದೈವ ಪ್ರೇಮ ತತ್ವದ ಮೂಲಕ ಎತ್ತಿಹಿಡಿದಂಥ ಸೂಫಿ ಮಹಿಳೆಯರ ಒಂದು ಕಿರು ಪರಿಚಯವುಳ್ಳ ಲೇಖನವನ್ನು ಯುವ ಪೀಳಿಗೆಯ ವಿದ್ವಾಂಸರಾದ ರಹಮತ್ ತರೀಕೆರೆಯವರು ನಮಗಾಗಿ ಒದಗಿಸಿಕೊಟ್ಟಿದ್ದಾರೆ. ಈ ಎಲ್ಲ ಬರಹಗಾರರಿಗೂ 'ನಮ್ಮ ಮಾನಸ'ದ ಅನಂತ ಕೃತಜ್ಞತೆಗಳು ಸಲ್ಲುತ್ತವೆ.

ಈ ವಿಶೇಷ ಸಂಚಿಕೆಗೆ ಈ ಹೊತ್ತಿನ ಆರ್ಥಿಕ ಬಿಕ್ಕಟ್ಟಿನ ನಡುವೆಯೂ ಜಾಹಿರಾತು ನೀಡಿದ, ಲೇಖನ, ವರ್ಣಚಿತ್ರ ಮುದ್ರಣಗಳಿಗೆ ಪ್ರಾಯೋಜನ ಮಾಡಿದವರಿಗೂ ಮಾನಸದ ಕೃತಜ್ಞತೆಗಳು ಸಲ್ಲುತ್ತವೆ.

ವಿಶೇಷ ಸಂಚಿಕೆ ನಿಮ್ಮ ಕೈಯಲ್ಲಿದೆ. ಅಭಿಪ್ರಾಯ ತಿಳಿಸಿ. ಚಂದಾಕಳಿಸಿ, ಹೊಸ ಚಂದಾದಾರರನ್ನು ಪರಿಚಯಿಸುವ ಮೂಲಕ ಓದುಗ ಬಳಗವನ್ನು ಹೆಚ್ಚಿಸಿರಿ, ಬರಹಗಳನ್ನು ಕಳುಹಿಸಿ ಎಂದು ಪ್ರಾರ್ಥಿಸುತ್ತಾ ಮತ್ತೊಮ್ಮೆ ಎಲ್ಲರಿಗೂ ಅಂತಾರಾಷ್ಟ್ರೀಯ ಮಹಿಳಾ ದಿನದ ಶುಭಾಶಂಸನೆಗಳನ್ನು ಹೇಳುತ್ತೇವೆ.

❑



# ಭಾರತದಲ್ಲಿ ಮಹಿಳಾ ಚಳವಳಿ: ರೂಪಿಸಿದ ಒತ್ತಡಗಳು, ಸಾಂಕೇತಿಕ ದಿಗಂತಗಳು

*ಮೂಲ:*
***ಕುಂಕುಮ್ ಸಂಗಾರಿ***

*ಸಾರಾನುವಾದ :*
***ಬಿ.ಎನ್. ಸುಮಿತ್ರಾಬಾಯಿ***

**ಭಾ**ರತದಲ್ಲಿ ಮಹಿಳಾ ಚಳವಳಿ ಸಾಗಿ ಬಂದಿರುವತ್ತ ಈ ಹಿನ್ನೋಟ ಹರಿಸಲು ಶಾಂತಿಕಾಲದ ಚಿಂತನಶೀಲ ವಾತಾವರಣವಾಗಲಿ, ಹೋರಾಟಪ್ರಕ್ರಿಯೆಯ ಭಾಗವಾಗಿ ಆಗಿಂದಾಗ್ಗೆ ನಡೆಯುವ ಮರುಮೌಲ್ಯಮಾಪನ ಪ್ರಸಂಗವಾಗಲಿ ನನಗೆ ಪ್ರೇರಣೆ ನೀಡಿಲ್ಲ. ಮಹಿಳಾ ಚಳವಳಿ ಈಗ ಕವಲುದಾರಿಯಲ್ಲಿದೆ. ಲಾಬಿ ಮಾಡುವವರ ಒಂದೇ ಗುರಿಯತ್ತ ಸಾಗುವ ವಿಚಾರಗಳು, (ರಾಜಕೀಯದ ಹಾಗೆಯೇ ತೋರಿಸಿಕೊಳ್ಳುವ) ಸ್ವ-ಸಹಾಯಕಾ ವಾದ, ಸ್ಥಳೀಯತಾವಾದಗಳಂಥ ಹೊಸ ವ್ಯಾಕರಣಗಳು, ವೃತ್ತಿಪರತೆಯ ನೀತಿಗಳೂ ಮಹಿಳಾ ಚಳವಳಿಯನ್ನು ಕರೆಯುತ್ತಿವೆ. ನವ ಉದಾರವಾದಿ ಆರ್ಥಿಕ ನೀತಿಯ ಫಲವಾದ ಈ ಬೆಳವಣಿಗೆಗಳ ಸಂದಿಗ್ಧ ಕಾಲದಲ್ಲಿ ಭಾವನಾತ್ಮಕವಾಗಿ ಮಹಿಳಾ ಚಳವಳಿಯ ಬಗೆಗಿನ ಕಾಳಜಿ ನನ್ನನ್ನು ಈ ರೀತಿಯಲ್ಲಿ ಹಿಂದಿರುಗಿ ನೋಡಲು ಪ್ರೇರಿಸಿದೆ.

ಮೂರು ದಶಕಗಳಷ್ಟು ದೀರ್ಘಕಾಲದಿಂದ ಭಾರತದಲ್ಲಿ ಮಹಿಳಾ ಚಳವಳಿ ಬೆಳೆದು ಬಂದಿರುವಾಗ ಅದನ್ನು ಚುಟುಕಾಗಿ ಪರೀಕ್ಷಿಸುವುದರಲ್ಲಿ ತೊಡಕುಗಳಿವೆ. ಜಾತಿ/ವರ್ಗಗಳ ವಿಭಜನೆಗಳುಳ್ಳ ನಮ್ಮ ರಾಜಕೀಯ, ಪ್ರಾದೇಶಿಕ ಡೈನಮಿಕ್ಸ್, ವಿಭಿನ್ನ ತಾತ್ತ್ವಿಕ ನಿಲುವುಗಳು, ವಿವಿಧ ಧೋರಣೆಗಳೆಲ್ಲವನ್ನೂ ಮಸುಕಾಗಿಸಿ ಎಲ್ಲವೂ 'ಮಹಿಳಾ ಚಳವಳಿ'ಯೇ ಎಂದು ನೋಡುವುದು ಮೊದಲನೆಯ ತೊಡಕು.

ಮಹಿಳಾ ಚಳವಳಿಯನ್ನು ಕಟ್ಟಿದಂಥ ಶಕ್ತಿಗಳು ತುಂಬ ವೈವಿಧ್ಯಮಯವಾಗಿವೆ. ಔಪಚಾರಿಕ ಸಂಘಟನೆಗಳು, ಅನೌಪಚಾರಿಕ ಗುಂಪುಗಳು, ಬಿಡಿ ವ್ಯಕ್ತಿಗಳು, ಸಮಸ್ಯೆ ಆಧರಿಸಿ ಒಗ್ಗೂಡುವ ರಾಜಕೀಯ ಪಕ್ಷಗಳು - ಪಕ್ಷೇತರರು, ರೈತವರ್ಗ - ಕಾರ್ಮಿಕವರ್ಗ, ವಿದ್ಯಾರ್ಥಿವೃಂದ, ನಾಗರಿಕ ಸ್ವಾತಂತ್ರ್ಯವಾದಿಗಳು, ಜನತಾಂತ್ರಿಕ ಹಕ್ಕು ವಾದಿಗಳು, ಸಾಮಾಜಿಕ ಕಾರ್ಯಕರ್ತರ ಗುಂಪುಗಳೇ ಮುಂತಾಗಿ ಸಾವಿರಾರು ಬಗೆಯಲ್ಲಿ ಸಂವಾದ ನಿರತವಾದ ಶಕ್ತಿಗಳು ಮಹಿಳಾ ಚಳವಳಿಯನ್ನು ರೂಪಿಸಿದವು. ಈ ಎಲ್ಲ ಚಿಂತನಧಾರೆಗಳನ್ನು ಒಂದೇ ಅಚ್ಚಿನಲ್ಲಿ ಎರಕಹೊಯ್ದು ನೋಡುವುದು ಅಸಾಧ್ಯ ಎಂಬುದು ಎರಡನೆಯ ತೊಡಕು.

ಮೂರನೆಯ ಕಷ್ಟವೆಂದರೆ ಕಳೆದ ಮೂರು ದಶಕಗಳಿಂದಲೂ ಮಹಿಳೆಯರ ಸಮಸ್ಯೆಗಳ ಮತ್ತು ಮಹಿಳಾ ಗುಂಪುಗಳೊಂದಿಗೆ ಗಾಢವಾಗಿ ತೊಡಗಿಕೊಂಡಿರುವ ನನ್ನದೇ ಸ್ವಂತ ರಾಜಕೀಯ ನಿಲುವುಗಳೂ ಈ ಸ್ವಯಂ ಮೌಲ್ಯಮಾಪನದ ಭಾರವನ್ನು ಹೆಚ್ಚಿಸಿವೆ. ರಾಜಕೀಯ ಒಲವುಗಳ ರೇಖೆಗಳ ಮೇಲೆ ಘರ್ಷಣೆ, ಬಿರುಕುಗಳು ಸಾಂಸ್ಥಿಕ ನಿಯಮಗಳು, ತಾತ್ತ್ವಿಕ ಭಿನ್ನತೆಗಳು, ಸಮಸ್ಯೆಯ ವಿಶ್ಲೇಷಣೆಯಲ್ಲಿ ಭಿನ್ನಮತಗಳು ಯಾವಾಗಲೂ ಇದ್ದದ್ದೇ. ನಾನು ಇಲ್ಲಿ ಗುರುತಿಸಿದ್ದೇ

*ಪ್ರಸ್ತುತ ಲೇಖನ ಶ್ರೀಮತಿ ಕುಂಕುಮ್ ಸಂಗಾರಿ ಅವರು ಕುಮಾರಿ ಜಯವರ್ಧನಾ ಅವರ ಸಂಭಾವನಾ ಗ್ರಂಥವಾದ "At the cutting Edge Essays in honour of Kumari Jayavardena" ಕ್ಕಾಗಿ ಬರೆದಿರುವ ' Shaping pressures and symbolic Horizens women's movement in India' ಎಂಬ ಲೇಖನದ ಸಾರಾನುವಾದ. ಈ ಅನುವಾದ ಮೂಲ ಲೇಖನದ ಮೊದಲನೆಯ ಭಾಗ ಮಾತ್ರ. ಇದರ ಇನ್ನೊಂದು ಭಾಗವನ್ನು 'ನಮ್ಮ ಮಾನಸ'ದಲ್ಲಿ ಮುಂದೆ ಪ್ರಕಟಿಸಲಾಗುವುದು.*

*ಶ್ರೀಮತಿ ಕುಂಕುಮ್ ಸಂಗಾರಿ ಅವರು ಲಿಟರೇಚರ್‌ನಲ್ಲಿ ಲೀಡ್ಸ್ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಹೊಂದಿದ್ದು, ಪ್ರಸ್ತುತ ವಿಸ್‌ಕಾನ್ಸಿನ್ ಯೂನಿವರ್ಸಿಟಿ, Milvaukee ಯ ಇಂಗ್ಲಿಷ್ ವಿಭಾಗದಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ.*

*ಸಾಂಸ್ಕೃತಿಕ ಮತ್ತು ಸಾಹಿತ್ಯ ಅಧ್ಯಯನಗಳು, ಮಹಿಳಾ ಅಧ್ಯಯನ ಹಾಗೂ ಸ್ತ್ರೀವಾದ ಅವರ ಮುಖ್ಯ ಆಸಕ್ತಿಯ ಕ್ಷೇತ್ರಗಳು.*

*ಅವರ ಕೆಲವು ಮುಖ್ಯ ಪ್ರಕಟಿತ ಕೃತಿಗಳು.*

1. *Politics of Possible : Essays on Gender, History, Narratives; Colonial English, Anthem Press, 2002.*
2. *From 'Myths' to 'Markets' : Essays on Gender, Co-edited with U.Chakravarti, Manohar, 1999.*
3. *Recasting women : Essays in Colonial History Co-edited with S. vaid, Rutgers University Press, 1990.*
4. *Women and culture : Co-edited with S. Vaid, NDT University 1985.*

ಆಮೂಲಾಗ್ರವಾದ, ಎಲ್ಲರೂ ಹೋಗಬೇಕಾದ, ಎಲ್ಲರೂ ಸಹಮತ ತೋರಿರುವ ದಾರಿ ಎಂದೇನಲ್ಲ. ಇಂಥ ವೈದೃಶ್ಯಗಳೇನೇ ಇದ್ದರೂ ಇವೆಲ್ಲವನ್ನು ಒಂದು ವಿಶಾಲ ಚಳವಳಿಯಲ್ಲಿ ಕಂಡುಬರುವ ಕಿರಿದಾದರೂ ಸಶಕ್ತವಾದ ಒತ್ತಡಗಳು, ಪ್ರಮುಖ ಧೋರಣೆಗಳೆಂದು ನಾನು ನೋಡುತ್ತೇನೆ. ಭಾರತದ ಮಹಿಳಾ ಚಳವಳಿಯ ಮುಂಚೂಣಿಯಲ್ಲಿ ತೊಡಗಿಕೊಂಡವರಲ್ಲಿ ಬಹುಪಾಲು ಜನರು ಒಟ್ಟಿಗೇ ಸಾಮಾಜಿಕ ಕಾರ್ಯಕರ್ತೆಯರೂ, ವಿಶ್ವವಿದ್ಯಾಲಯಗಳ ವಿದುಷಿಯರೂ ಆಗಿರುವುದು ಒಂದು ವಿಶೇಷ. ಹೋರಾಟಗಾರರೇ ಬೇರೆ, ಅಕಾಡೆಮಿಕ್‌ಗಳೇ ಬೇರೆ ಎಂಬ ಪ್ರಸಂಗಗಳು ನಮ್ಮಲ್ಲಿ ವಿರಳ. ಈ ದೃಷ್ಟಿಯಿಂದ ನೋಡಿದರೆ ಇಲ್ಲಿ ನಾನು 'ಮಹಿಳಾ ಚಳವಳಿ' ಎಂದು ಕರೆದಿರುವುದು ಒಂದು ರೀತಿಯಲ್ಲಿ "ಸಾರ್ವಜನಿಕ ಸಾಮಾಜಿಕ ಹೋರಾಟಗಾರರಾದ ವಿದ್ವಾಂಸರ ಸಮಾವೇಶ" ಎನ್ನಬಹುದಾಗಿದೆ. ಇದರಲ್ಲಿ ಚರ್ಚಿತವಾದ ವಿಷಯಗಳು ದಾಖಲಾಗದ ಭಾಷಣಗಳಲ್ಲಿ, ನೆನಪುಗಳಲ್ಲಿ ಮಾಹಿತಿ ಉಳಿಸಿರುವಷ್ಟು ಲಿಖಿತ/ಮುದ್ರಿತ ರೂಪದಲ್ಲಿಲ್ಲ.

1940, 1950ರ ದಶಕಗಳಲ್ಲಿ ವಸಾಹತುಶಾಹಿಯ ವಿರೋಧ, ರಾಷ್ಟ್ರೀಯವಾದಿ ಸಮಾಜಸುಧಾರಣೆಗಳು, ಸೆಕ್ಯುಲರ್ ಆದ ಹೊಸ ದೇಶಕಟ್ಟುವ ಆಕಾಂಕ್ಷೆಗಳಿಂದ ಹುಟ್ಟಿದ ಮಹಿಳಾಜಾಗೃತಿಯ ಅವಧಿಯನ್ನು ಭಾರತೀಯ ಮಹಿಳಾ ಚಳವಳಿಯ ಮೊದಲ ಹಂತವೆಂದು ಗುರುತಿಸಲಾಗುತ್ತದೆ.

ಎರಡನೆಯ ಹಂತ ಹೊಮ್ಮಿ ಬಂದದ್ದು 1970ರ ದಶಕದಲ್ಲಿ. ಅಧಿಕಾರದ ಮೇಲಿನ ಶ್ರೇಣಿಯವರಿಂದ ಮಹಿಳೆಯರ ಮೇಲೆ ನಡೆವ ಹಿಂಸಾಚಾರದ ವಿರುದ್ಧವಾದ ಪ್ರತಿಭಟನೆ ಮಹಿಳಾ ಚಳವಳಿಯು ಹೊಮ್ಮಿ ಬರಲು ಕೇಂದ್ರ ವಿಷಯವಾಗಿತ್ತು. ಬಡ ಹಾಗೂ ಕೆಳಜಾತಿ ಮಹಿಳೆಯರ ಮಾನಭಂಗ, ಕಸ್ಟೋಡಿಯಲ್ ರೇಪ್, ವರದಕ್ಷಿಣೆಗಾಗಿ ಮಹಿಳೆಯರ ದಹನ ಮುಂತಾದವು ಹೋರಾಟವನ್ನು ಪ್ರೇರಿಸಿದ್ದವು. ಆಮೇಲೆ ಇವೇ ಕಾಳಜಿಗಳು ವಿಸ್ತಾರಗೊಂಡು ಕೌಟುಂಬಿಕವಾದ ಹಿಂಸಾಚಾರ, ಪತ್ನಿಯರನ್ನು ಹೊಡೆಯುವುದು, ಚಿಕ್ಕ ಬಾಲಕಿಯರ ಲೈಂಗಿಕ ದುರ್ಬಳಕೆ, ಮದುವೆ ಎಂಬುದರಲ್ಲಿ ಆಯ್ಕೆಯ ನಿಷೇಧದಂಥ ಪ್ರಶ್ನೆಗಳಾದವು.

1980ರ ದಶಕದಲ್ಲಿ ಮಹಿಳೆಯರ ಆರೋಗ್ಯ ಮನೆಗೆಲಸದ ಶ್ರಮದ ಪ್ರಶ್ನೆ, ಲಿಂಗಾಧರಿತ ಭ್ರೂಣ ಪರೀಕ್ಷೆಯ ರದ್ದತಿಗಾಗಿ ಹಕ್ಕೊತ್ತಾಯ, ಹೆಣ್ಣುಭ್ರೂಣ ಹತ್ಯೆ, ಲಿಂಗತ್ವ ಆಯ್ಕೆಗಾಗಿ ಗರ್ಭಪಾತದ ವಿರೋಧ, ನಿರ್ಗತಿಕ ಮಹಿಳೆಯರು ಹಾಗೂ ಶ್ರಮಿಕ ಮಹಿಳೆಯರ ವಸತಿ ಪ್ರಶ್ನೆ, ಸಾಕ್ಷರತೆ, ಉದ್ಯೋಗ ತರಬೇತಿ, ಉದ್ಯೋಗಾವಕಾಶ, ಸಮಾನ ವೇತನ, ಮಹಿಳಾ ಶ್ರಮದ ಮರುನಿರ್ವಚನ ಅನೌಪಚಾರಿಕ ದುಡಿಮೆ ವಲಯಗಳು ಮಹಿಳಾ ಚಳವಳಿಗಾರರ ಮುಖ್ಯ ಕಾಳಜಿಗಳಾಗಿದ್ದವು. 'ಅಭಿವೃದ್ಧಿ' ಕುರಿತಂತೆ ಸರ್ಕಾರದ ನೀತಿಗಳು, ಯೋಜನೆಗಳ ವೈಫಲ್ಯ ಮತ್ತು ಮಹಿಳೆಯರ ಸಮಸ್ಯೆಗಳ ಉಲ್ಬಣಗಳ ಕಾರಣ ಶೋಧನೆಗೆ ಚಳವಳಿದಾರರ ಚರ್ಚೆಗಳು ತೀವ್ರ ಒತ್ತು ನೀಡಿದ್ದವು.

ಕೌಟುಂಬಿಕ ಹಾಗೂ ಲೈಂಗಿಕ ಹಿಂಸಾಚಾರಗಳು ಖಾಸಗಿಯ ವಿಷಯಗಳಲ್ಲ, ಲಿಂಗತ್ವ ಆಧರಿಸಿದ ಹಿಂಸಾಚಾರವು ಜಾತಿ, ವರ್ಗ ಅಸಮಾನತೆಗಳಲ್ಲಿ ನೇಯ್ದು ಕೊಂಡಿರುತ್ತವೆ. ವ್ಯವಸ್ಥೆಯ ಆರ್ಥಿಕ ಸ್ವರೂಪ, ಸಂಪನ್ಮೂಲಗಳ ಹಂಚಿಕೆಯ ಪ್ರಶ್ನೆಗಳಿಗೆ ಅವು ಸಂಬಂಧಿಸಿರುತ್ತವೆ ಎಂಬುದನ್ನು ತಾತ್ವಿಕವಾಗಿ ಗುರುತಿಸಿ ಮಹಿಳೆಯರ ಹಕ್ಕುಗಳಿಗಾಗಿ, ಸರ್ಕಾರದ ಕರ್ತವ್ಯದ ಬಗ್ಗೆ ಮನನ ಮಾಡಿಕೊಡುವ ಬಲವಾದ ಪ್ರಚಾರಗಳನ್ನು ನಡೆಸಲಾಯಿತು. ಮಹಿಳೆಯರ ಆರ್ಥಿಕ ಅಸ್ವಾತಂತ್ರ್ಯ, ಆಸ್ತಿಯ ಹಾಗೂ ವಸತಿಯ ಹಕ್ಕುಗಳು, ಸಾಮಾಜಿಕ, ಕೌಟುಂಬಿಕ ಸಂಪನ್ಮೂಲಗಳಿಗೆ ಇರುವ ಅಸಮಾನ ಅವಕಾಶದಂಥ ಸಂಗತಿಗಳು ವ್ಯಾಪಕ ಚರ್ಚೆಗೆ ಒಳಗಾದವು.

ಪಿತೃಪ್ರಧಾನ ವ್ಯವಸ್ಥೆಯ ಸಂರಚನೆಗಳು ಕುಟುಂಬದೊಳಗೆ ಮಾತ್ರವಲ್ಲ,

ಹೊರಗೆ ಸಾರ್ವಜನಿಕವಾಗಿಯು ಕೆಲಸಮಾಡುತ್ತವೆ. ಅವುಗಳ ಸ್ವಹಿತಾಸಕ್ತಿ ಪ್ರಭುತ್ವದಲ್ಲಿದ್ದು ವರ್ಗವಿಭಜನೆಯ ಮೂಲಕ ಪೀಳಿಗೆಯಿಂದ ಪೀಳಿಗೆಗೆ ಅವು ರವಾನೆಯಾಗುತ್ತವೆ. ಗ್ರಾಮೀಣ ಊಳಿಗಮಾನ್ಯ ಸಿರಿವಂತ ವರ್ಗ ಹಾಗೂ ಜಾತಿವಾದಿ ಸಮುದಾಯಗಳ ಸಂಪ್ರದಾಯನಿಷ್ಠೆ ಸ್ತ್ರೀವಾದಿಗಳ ಹೋರಾಟಕ್ಕೆ ಉದ್ದಕ್ಕೂ ನಿರ್ಬಂಧಗಳನ್ನು ಒಡ್ಡುತ್ತಲೇ ಇವೆ. ಹಳ್ಳಿಗಳ ಶೋಷಕ ವ್ಯವಸ್ಥೆ ಬದಲಾಗದ ರೀತಿ ಮುಂದುವರೆದಿದ್ದರೂ ಸರ್ಕಾರ ಮಾತ್ರ ಅಭಿವೃದ್ಧಿಯ ಮಿಥ್‌ಅನ್ನು ಬೆಳೆಸುತ್ತ ಹೋಗುವುದರ ವಿರುದ್ಧ ಹೋರಾಡುವ ಮೂಲಕ ಗ್ರಾಮ–ನಗರಗಳ ಈ nexus ಬಂಡವಾಳ ಶಾಹಿ ಅಸಮಾನತೆ ಆಧರಿತ ಆರ್ಥಿಕ ವ್ಯವಸ್ಥೆಯೇ ಕಾರಣವೆಂಬುದನ್ನು ಮಹಿಳಾ ಚಳವಳಿ ಬೆಳಕಿಗೆ ತಂದಿತು.

### ವಿಸ್ತರಿಸಿದ ಹೋರಾಟದ ದಿಗಂತ

ಕುಟುಂಬದೊಳಗಿನ ಲಿಂಗತ್ವಕೇಂದ್ರಿತ ಸಮಸ್ಯೆಗಳಿಗೆ ಮಾತ್ರವೇ ತನ್ನ ಗಮನವನ್ನು ಮಹಿಳಾಚಳವಳಿ ಸೀಮಿತಗೊಳಿಸಿಕೊಳ್ಳಲಿಲ್ಲ. ಕುಟುಂಬ ಎಂಬುದು ಒಂದು ಭೌತಿಕ/ತಾತ್ತ್ವಿಕ ಜಾಗ. ಸಾಮಾಜಿಕ ಸಂಬಂಧಗಳು ಸಂಸ್ಥೀಕರಗೊಳ್ಳುವುದು ಕುಟುಂಬದಿಂದಲೇ ಎಂದು ಗುರುತಿಸಿದ್ದು ಮಹಿಳಾ ಚಳವಳಿಯ ಸಶಕ್ತ ಸಾಧನೆಗಳಲ್ಲೊಂದು. ಜಾತಿ, ವರ್ಗಗಳು ಮಹಿಳೆಯರನ್ನು ಪ್ರತ್ಯೇಕಗೊಳಿಸಿರುವ ವಿಷಯವೂ ಆಗಾಗ್ಗೆ ಚರ್ಚೆಗೊಂಡರೂ ಆ ಚರ್ಚೆಗಳು ಅಸಮಗ್ರವಾಗಿದ್ದವು. ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಸ್ಥೆಯೇ ಮಹಿಳಾ ಸಮಸ್ಯೆಗಳ ತಳಹದಿಯೆಂದು ಆ ಇಡೀ ವ್ಯವಸ್ಥೆಯ ವಿರುದ್ಧ ವಿಶಾಲವಾದ ಹೋರಾಟಕ್ಕೆ ತೊಡಗಬಲ್ಲ ಇಚ್ಛಾಶಕ್ತಿ ಹೋರಾಟದ ಮುಂದಾಳುಗಳಿಗೆ ಮಾತ್ರ ಸೀಮಿತವಾಗಿತ್ತು. ಎಲ್ಲಾ ಬಗೆಯ ಸಾಮಾಜಿಕ ಅಸಮಾನತೆಗಳ ವಿರುದ್ಧವಾದ ಚಳವಳಿಗಳನ್ನು ಮಹಿಳಾ ಚಳವಳಿಯಲ್ಲೂ ಬೆಂಬಲಿಸ ಬೇಕು ಎಂಬ ಚರ್ಚೆ 1970ರ ದಶಕದಷ್ಟು ಹಿಂದೆಯೇ ಆಗಿತ್ತು. ಸ್ವಾಯತ್ತ ಮಹಿಳಾ ಗುಂಪುಗಳೂ ಈ ವಿಷಯವನ್ನು ಒಪ್ಪಿದ್ದವು. ಮಹಿಳೆಯರು ಟ್ರೇಡ್ ಯೂನಿಯನ್‌ಗಳಲ್ಲಿ, (ರೈತ, ದಲಿತ ಮುಂತಾದ) ಸಮೂಹ ಚಳವಳಿಗಳಲ್ಲೂ ದೊಡ್ಡ ಪ್ರಮಾಣಗಳಲ್ಲಿ ಪಾಲ್ಗೊಂಡಿದ್ದರು. ಇದರ ಪರಿಣಾಮ ಎಂದರೆ ಸಮೂಹ ಚಳವಳಿಗಳ ಒಳಗೂ ಜೆಂಡರ್ ದೃಷ್ಟಿಕೋನಕ್ಕೆ ಸ್ಪೇಸ್ ಸೃಷ್ಟಿಯಾಯಿತು. ಮಹಿಳೆಯರ interaction ಸಾಮೂಹಿಕ ಸಂಘಟನೆಗಳಲ್ಲಿ ಆಗ ಶುರುವಾಯಿತು. ಉದಾಹರಣೆಗೆ ರೈತ ಚಳವಳಿಯ ಜೊತೆಗೂಡಿದಾಗ ಮಹಿಳಾ ಚಳವಳಿಗಾರರು ಜೀತಪದ್ಧತಿ ವಿರೋಧ, ಕೂಲಿ ಹೆಚ್ಚಳ, ಸಮಾನ ಪ್ರವೇಶಾವಕಾಶ, ವೈಯಕ್ತಿಕ ಹಕ್ಕುಗಳು ಮತ್ತು ಕೃಷಿ ಭೂಮಿ ಒಡೆತನದ ಪಟ್ಟಾಗಳಲ್ಲಿ ಮಹಿಳೆಯರ ಹೆಸರೂ ಸೇರಬೇಕೆಂದು ಹೋರಾಟ ನಡೆಸಿದರು. ಇದೇ ರೀತಿ ಟ್ರೇಡ್ ಯೂನಿಯನ್ ಅಥವಾ ಆ ಸಂಘಟಿತ ವಲಯಗಳ ಸಾಮೂಹಿಕ ಚಳವಳಿಯಲ್ಲಿ ಮಹಿಳಾ ಸಂಘಟನೆಗಳು ಭಾಗವಹಿಸಿದ್ದವು. ಇಂಥ ಪಾಲ್ಗೊಳ್ಳುವಿಕೆಯ ಅನುಭವದಿಂದಾಗಿ ಉತ್ಪಾದನಾ ಸಾಮಗ್ರಿ, ಉತ್ಪಾದನಾ ಸಾಧನ, ಲಾಭದ ಹಂಚಿಕೆಗಳ ಮೇಲೆ ಮಹಿಳೆಯರ ಒಡೆತನದ ಪ್ರಶ್ನೆ ಹಾಗೂ ದುಡಿಮೆಗಾರ ಸಂಬಂಧಗಳ ಅರ್ಥೈಸುವಿಕೆ ಗಳಲ್ಲಿ ವ್ಯಾಪಕವಾಗಿ ಪರಿಣಾಮ ಬೀರುವಂತಾಯಿತು.

ಮಹಿಳಾ ಚಳವಳಿಯ ಬಲವಾದ ಹೋರಾಟದ ಮತ್ತೊಂದು ಕೇಂದ್ರ ಸಮಸ್ಯೆ ಮಹಿಳೆಯರ ಸಂತಾನೋತ್ಪಾದನೆ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ್ದಾಗಿದೆ. ಮಹಿಳೆಯರು ತಮ್ಮ ಫಲವಂತಿಕೆ ಮೇಲೆ ತಾವೇ ನಿಯಂತ್ರಣ ಹೊಂದಿರಬೇಕು. ಗಂಡು ಮಕ್ಕಳಿಗೆ ಆದ್ಯತೆ ಎಂಬ ದೃಷ್ಟಿ ಕೋನ ಹೆಣ್ಣು ಭ್ರೂಣವನ್ನು ಗುರುತಿಸಿ, ಗರ್ಭಪಾತ ಮಾಡಿಸುವ ಮೂಲಕ ಲಿಂಗಗಳ ಅನುಪಾತವನ್ನೇ ಏರುಪೇರುಮಾಡಿದೆ ಎಂಬುದು ಈ ಸಮಸ್ಯೆಯ ಒಂದು ಮಗ್ಗುಲು. ಇನ್ನೊಂದು ಮಗ್ಗುಲಲ್ಲಿ ಹೊರಗಿನಿಂದ ಆಮದಾಗಿ ಬರುವ ವೈದ್ಯಕೀಯ ತಂತ್ರಜ್ಞಾನ, ಔಷಧೀಯ ಕೈಗಾರಿಕೆ, ಸರ್ಕಾರ ಹೇರಿರುವ ಇಬ್ಬರೇ ಮಕ್ಕಳು ಇರಬೇಕೆಂಬ ನಿಯಮ, ಕೊಳ್ಳುಬಾಕ (consumerist) ಆರ್ಥಿಕ ವ್ಯವಸ್ಥೆಯಲ್ಲಿ ಸಂತಾನ ನಿಯಂತ್ರಣಕ್ಕೆ ಕ್ಷೇಮಕರ ಸಾಧನಗಳ ಅಭಾವ, ಇದರಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಮತ್ತು ದೇಶೀಯ ಸರ್ಕಾರಗಳು ನಡೆಸುವ ಅವ್ಯವಹಾರ ಮುಂತಾದವು ಮಹಿಳೆಯರ ಸಂತಾನೋತ್ಪಾದಕತೆ ಮತ್ತು ಆರೋಗ್ಯ ಗಳನ್ನು ಹೇಗೆ ಅವರ ವಿನಾಶಕ್ಕೆ ಬಳಸುತ್ತಿವೆ ಎಂಬುದನ್ನು ಗಂಭೀರವಾಗಿ ಚರ್ಚಿಸಿ, ಸತ್ಯಸಂಗತಿಗಳನ್ನು ಬೆಳಕಿಗೆ ತಂದದ್ದು 1990ರ ದಶಕದ ಒಂದು ಗಮನಾರ್ಹ ಸಾಧನೆಯಾಗಿತ್ತು.

ಮಾರ್ಕ್ಸ್‌ವಾದದ ಕ್ಲಾಸಿಕಲ್ ವಿಚಾರಧಾರೆ ದುಡಿಮೆ, ಜೀವನೋಪಾಯಗಳನ್ನು ರಾಜಕೀಯಾರ್ಥಿಕ ವ್ಯವಸ್ಥೆಯ ಸಾಂಪ್ರದಾಯಿಕ ಗ್ರಹಿಕೆಯ ಮೂಲಕ ವಿಶ್ಲೇಷಿಸಿತು. ಆದರೆ ಈಗಿರುವ ಪಿತೃಪ್ರಧಾನ ಸಂರಚನೆಗಳೂ ಭವಿಷ್ಯದಲ್ಲಿ ಅವು ತಳೆಯಬಹುದಾದ ಸ್ವರೂಪಗಳೂ ಬದಲಾಗುವ ಆರ್ಥಿಕ ವ್ಯವಸ್ಥೆಯೊಂದಿಗೆ ಸಂಬಂಧ ಹೊಂದಿರುತ್ತವೆ ಎಂಬುದನ್ನು ತೋರಿಸಿಕೊಡುವ ಮೂಲಕ ಮಹಿಳಾ ಚಳವಳಿ ಎಡಪಂಥೀಯ ಸೈದ್ಧಾಂತಿಕ ವಿಶ್ಲೇಷಣೆಯ ಪರಿಧಿಯನ್ನು ಹಿಗ್ಗಿಸಿತು. ಶ್ರಮ, ವರ್ಗ, ಪ್ರಭುತ್ವದಂಥ ಮೂಲಭೂತ ವಿಷಯಗಳಲ್ಲಿ ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದಗಳ ನಡುವೆ ಬೇಕಾದಷ್ಟು ಚರ್ಚೆ ವಾಗ್ವಾದ, ತಿಕ್ಕಾಟಗಳಿದ್ದವು. ಲಿಂಗತ್ವ ಮತ್ತು ಸಂಸ್ಕೃತಿಗಳ ಸಂಬಂಧದ ಅರ್ಥೈಸುವಿಕೆಯಲ್ಲೂ ಭಿನ್ನಾಭಿಪ್ರಾಯಗಳಿದ್ದುವು. ತುಂಬ ಗಂಭೀರ ಚರ್ಚೆಗಳಾದ ನಂತರವೂ ನಗರಗಳ ಸ್ವಾಯತ್ತ ಮಹಿಳಾ ಗುಂಪುಗಳು V/s ಪಕ್ಷಾಧರಿತ ಸಂಘಟನೆಗಳು ಅಥವಾ ವರ್ಗಾಧರಿತ ಗ್ರಾಮೀಣ ಚಳವಳಿಗಳು; ಸಾಮಾಜಿಕ ಚಳವಳಿ V/s ಬಿಡಿ ಮಹಿಳೆಯರಿಗೆ ನೆರವು; ಕ್ರಾಂತಿಕಾರಿ ಸಮಗ್ರ ಬದಲಾವಣೆ V/s ಬೂರ್ಜ್ವಾ ಸಂಧಾನ ತಂತ್ರಗಳು; ಸ್ವಯಂ ಹೋರಾಟ V/s ಫಂಡೆಡ್ ರಾಜಕೀಯ ಮುಂತಾದ ವಿರೋಧಗಳು ಇಂದಿಗೂ ಭಿನ್ನಮತಗಳಾಗಿಯೇ ಇವೆ.

### ಪಿತೃಪ್ರಾಧಾನ್ಯ ಲಕ್ಷಣ ನಿರ್ವಚನೆ

ಭಾರತದ ಮಹಿಳಾ ಚಳವಳಿಯ ಸಾಧನೆಯ ಸಾಂಕೇತಿಕ ದಿಗಂತ ಎನ್ನಬಹುದಾದ ಸಂಗತಿ ಪಿತೃಪ್ರಾಧಾನ್ಯದ ಲಕ್ಷಣ ನಿರ್ವಚನೆಗೆ ಸಂಬಂಧಿಸಿದ್ದಾಗಿದೆ. ಪಿತೃಪ್ರಾಧಾನ್ಯ ಊಳಿಗಮಾನ್ಯ ವ್ಯವಸ್ಥೆಯ ಒಂದು ಪಳೆಯುಳಿಕೆ ಮಾತ್ರ ಎಂಬುದು ಸಾಂಪ್ರದಾಯಿಕ ಎಡಪಂಥೀಯ ವ್ಯಾಖ್ಯಾನವಾಗಿತ್ತು. 1980ರಷ್ಟು ಹಿಂದೆಯೇ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಇದನ್ನು ಪ್ರಶ್ನೆಗೀಡುಮಾಡಿದ್ದರು. ಪಿತೃಪ್ರಾಧಾನ್ಯ ಒಂದು ಸ್ಥಾಯಿ ಲಕ್ಷಣವುಳ್ಳದ್ದು, ಜಾತಿ ವರ್ಗಗಳ ಶ್ರೇಣಿಗಳಿಂದ ಅದೇನೂ ಬದಲಾಗದು ಎಂದೇ ಹಿಂದೆ ತಿಳಿಯಲಾಗಿತ್ತು. ಆದರೆ ಈ ಪಿತೃಪ್ರಾಧಾನ್ಯ ಕೂಡ ಚಾರಿತ್ರಿಕವಾಗಿ ಬದಲಾವಣೆಗೆ ಒಳಗಾಗುತ್ತದೆ ಆರ್ಥಿಕ ವ್ಯವಸ್ಥೆ ಬದಲಾದಂತೆಲ್ಲ ಅದು ಮತ್ತೆ ಮತ್ತೆ ಸಂಯೋಜಿಸಿಕೊಳ್ಳುತ್ತ ಹೊಸ ಸಂವಿಧಾನ ರಚಿಸಿಕೊಳ್ಳುತ್ತಿರುತ್ತದೆ ಎಂಬುದನ್ನು ಪ್ರಜ್ಞಾಪೂರ್ವಕವಾಗಿ ಸ್ಪಷ್ಟವಾಗಿ ಸೈದ್ಧಾಂತಿಕವಾಗಿ ಮಹಿಳಾ ಚಳವಳಿ ಮರುನಿರ್ವಚನ ಮಾಡಿದ್ದರಿಂದ ಪಿತೃಪ್ರಾಧಾನ್ಯದ ಸಾರ್ವಕಾಲಿಕತೆ, ವರ್ಗ, ಜಾತಿಗಳ ರೂಪಣದಲ್ಲಿ ಅದು ಹೊಂದಿರುವ ಸಂಬಂಧಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಯಿತು. ಅಲ್ಲದೆ ಪಿತೃಪ್ರಾಧಾನ್ಯವೆಂಬುದು ಏಕಾಕಾರದ್ದೂ ಅಲ್ಲ. ವರ್ಗ, ಜಾತಿ, ಪ್ರದೇಶ, ಸಾಂಸ್ಕೃತಿಕ ಭಿನ್ನತೆ ಗಳೊಂದಿಗೆ ಅದು ಬೇರೆ ಬೇರೆ ರೂಪವುಳ್ಳದ್ದಾಗಿರುತ್ತದೆ. ವಸಾಹತು

ಪೂರ್ವದಲ್ಲಿದ್ದ ಧಾರ್ಮಿಕ ಕಾಯಿದೆಗಳು ರೂಪಿಸಿದ್ದ ಎಷ್ಟೋ ಪಿತೃ ಪ್ರಧಾನ ನಂಬಿಕೆಗಳು, ಆಚರಣೆಗಳು ವಸಾಹತೋತ್ತರ ಸಮಾಜ ಸುಧಾರಣೆಗಳ ನಂತರವಷ್ಟೇ ಅಲ್ಲ; ವರ್ತಮಾನದ ಕಾನೂನುಗಳ ಒಳಗೆ ಕೂಡ ಅಸ್ತಿತ್ವ ಉಳಿಸಿಕೊಂಡಿರುವುದನ್ನು ಸ್ತ್ರೀವಾದಿಗಳು ಬೆಳಕಿಗೆ ತಂದರು. ವರ್ಗಗಳನ್ನು ರೂಪಿಸುವಲ್ಲಿ, ಉತ್ಪಾದನೆ ಮತ್ತು ಸಂಪನ್ಮೂಲಗಳ ನಿಯಂತ್ರಣದಲ್ಲಿ, ಗೃಹಕೃತ್ಯ ಹಾಗೂ ವೇತನ ಸಹಿತ ದುಡಿಮೆ ವಲಯಗಳ ವಿಭಜನೆಯಲ್ಲಿ ನಿರ್ಣಯಾಧಿಕಾರವನ್ನು ಪಿತೃಪ್ರಾಧಾನ್ಯಗಳು ಹೊಂದಿರುತ್ತವೆ. ವರ್ಗಗಳ dynamics ಇವುಗಳದೇ ಒಂದು ಅತಿರೇಕದ ಬಿಂದುವಾಗಿದ್ದು ಪಿತೃಪ್ರಾಧಾನ್ಯವು ವಿಭಿನ್ನ ವಿನ್ಯಾಸಗಳಿಂದ ವರ್ಗ ಹಾಗೂ ಜಾತಿಗಳಲ್ಲಿ ತನ್ನ ಕ್ರಮವನ್ನು ಹೊಂದಿರುವುದರಿಂದ ವರ್ಗ, ಜಾತಿಗಳಿಗೆ ನಿರಕ್ಷರತೆ, ಅಜ್ಞಾನ, ಬಡತನ ಗಳಷ್ಟೇ ಕಾರಣಗಳಲ್ಲ ಎಂಬುದನ್ನು ಕಂಡುಕೊಳ್ಳುವುದು ಇದರಿಂದ ಸಾಧ್ಯವಾಯಿತು. ಪಿತೃಪ್ರಾಧಾನ್ಯ ಕೇವಲ ಪುರುಷಪ್ರಾಧಾನ್ಯವಲ್ಲ; ಅದೊಂದು ವ್ಯವಸ್ಥಿತ ಶೋಷಣಾಕ್ರಮ. ಸಂತಾನೋತ್ಪಾದನೆ, ಲೈಂಗಿಕತೆ ಮತ್ತು ಮಹಿಳೆಯರ ಮೇಲಿನ ವ್ಯವಸ್ಥಿತ ಹಿಂಸಾಚಾರಗಳ ಸಂರಚನಾತ್ಮಕ ಅಧಿಕಾರ ಅದು. ವ್ಯವಸ್ಥೆಯ ಕೆಳರಚನೆಯಲ್ಲಿ ಮೇಲುರಚನೆಯಲ್ಲೂ ಮತ್ತೆ ಮತ್ತೆ ನೆಲೆಗೊಳ್ಳುತ್ತಿರುತ್ತಲೇ ಬದಲಾಗುವ ಘಟಕ ಅದು ಎಂದು ವ್ಯಾಖ್ಯಾನಿಸಲಾಯಿತು. ಬೇರೆ ರೀತಿಯ ತಾತ್ವಿಕತೆಗಳು ಹೊರಗಿನಿಂದ ಬಂದಿದ್ದರೂ ಮಹಿಳಾ ಚಳವಳಿಯೊಳಗೆ ಮತ್ತೆ ಮತ್ತೆ ನಿರ್ವಚನಗೊಂಡು ಪಿತೃಪ್ರಾಧಾನ್ಯ ಎಂಬುದು ಹೆಚ್ಚು flexible ಆಯಿತು.

**ಕಾನೂನು ಸುಧಾರಣಾ ಹೋರಾಟ**

ಮಹಿಳಾ ಚಳವಳಿ ಕಾನೂನುಗಳ ಸುಧಾರಣೆಗಾಗಿ ನಡೆಸಿದ ಹೋರಾಟಗಳು ನ್ಯಾಯಾಂಗ ಮತ್ತು ಕಸ್ಟೋಡಿಯಲ್ ಪರಿಕರಗಳ ವಿಮರ್ಶೆಯಿಂದ ಶುರುವಾದವು. ವಸಾಹತುಶಾಹಿಯ ಕಾಲದಿಂದಲೂ ನ್ಯಾಯಾಂಗಕ್ಕೆ ಅತಿಯಾದ ಪ್ರಾಮುಖ್ಯ ದೊರಕಿತ್ತು. [ಕಸ್ಟೋಡಿಯಲ್ ರೇಪ್, ವರದಕ್ಷಿಣೆ – ವಧೂದಹನ, ಗರ್ಭಪಾತದ ಹಕ್ಕು, ವಿಚ್ಛೇದನ, ಆಸ್ತಿಹಕ್ಕು, ವೈಯಕ್ತಿಕ ಹಕ್ಕುಗಳ ರಕ್ಷಣೆ, ದುಡಿಮೆಯ ಜಾಗದಲ್ಲಿ ಲೈಂಗಿಕ ಕಿರುಕುಳಗಳು ಮುಂತಾದ ಸಮಸ್ಯೆಗಳ ಸಂಬಂಧದಲ್ಲಿ] ಈಗ ಪ್ರಚಲಿತವಿರುವ ಎಷ್ಟೋ ಕಾನೂನುಗಳನ್ನು ಸುಧಾರಿಸುವಲ್ಲಿ ಮಹಿಳಾ ಚಳವಳಿ ಬಲವಾಗಿ ತನ್ನ ಮುದ್ರೆಯೊತ್ತಿದೆ. ಆದರೆ ಈ ಕಾನೂನುಗಳು ಕಿಂಚಿತ್ತಾಗಿ ಜಾರಿಗೆ ಬರುವುದಕ್ಕೂ ಸರ್ಕಾರದ ಮೇಲೆ ಒತ್ತಡ ತರಬಲ್ಲ ಬೃಹತ್ ಪ್ರಮಾಣದ ಸಾಮಾಜಿಕ ರಾಜಕೀಯ ಹೋರಾಟಗಳನ್ನು ನಡೆಸಲೇಬೇಕಾಗುತ್ತದೆ. ಈ ಹೋರಾಟಗಳು ನಿಜವಾಗಿ ಆ ಕಾನೂನನ್ನು ಜಾರಿಗೊಳಿಸಲಿಕ್ಕೆ ಸಶಕ್ತವೆ? ಇಂಥ ಸಾಮೂಹಿಕ ಆಗ್ರಹವಿಲ್ಲದೆಯೂ ಸರ್ಕಾರ ತನ್ನಷ್ಟಕ್ಕೆ ನ್ಯಾಯವನ್ನು ಏಕೆ ಒದಗಿಸಲಾರದು? ಎಂಬ ಪ್ರಶ್ನೆಗಳು ಸದಾ ಇರುತ್ತವೆ. ಆದರೂ ಸ್ತ್ರೀವಾದಿಗಳು ಮತ್ತೆ ಮತ್ತೆ ಹೊಸ ಕಾನೂನುಗಳಿಗಾಗಿ ಸೂಚನೆ ನೀಡಿ ಹಕ್ಕೊತ್ತಾಯಿಸಿ ನಡುವೆ ಪ್ರವೇಶಿಸಿ ಆಗ್ರಹಿಸುವ ಪ್ರಕ್ರಿಯೆ ಮುಂದುವರಿಸಿಯೇ ಇದ್ದಾರೆ.

ಕಾನೂನುಗಳ ಸುಧಾರಣೆಗಾಗಿ ಸರ್ಕಾರವನ್ನು ಒತ್ತಾಯಿಸುವ ಕಾಳಜಿಯು ಎಲ್ಲ ಅಧಿಕಾರವನ್ನೂ ಸರ್ಕಾರಕ್ಕೆ ಒಪ್ಪಿಸಿಬಿಡುವ ಮುಗ್ಧ ಪ್ರಕ್ರಿಯೆಯಲ್ಲ. ಅಥವಾ ಸರ್ಕಾರವೆಂಬುದು ವರ್ಗನಿರಪೇಕ್ಷವಾಗಿ ನ್ಯಾಯ ಒದಗಿಸುವ ಯಂತ್ರವೆಂದು ತಿಳಿಯುವ ಭೋಳೆತನವೂ ಇಲ್ಲಿಲ್ಲ. ಜನತಾಂತ್ರಿಕ ಗುಂಪುಗಳು ಕಾನೂನು ಕುರಿತ ಚರ್ಚೆಗೆ ಯಾವಾಗಲೂ ಪ್ರಾಮುಖ್ಯ ನೀಡಿವೆ. ನಿರಂಕುಶ ಪ್ರಭುತ್ವದ ವಿರುದ್ಧವೂ ಅವು ಹೋರಾಟ ಮಾಡಿವೆ. ಸರ್ಕಾರವು ಸ್ಪಷ್ಟವಾದ ಫ್ಯಾಸಿಸ್ಟ್ ಲಕ್ಷಣಗಳನ್ನು ತೋರಿಸಿದಾಗೆಲ್ಲ, ಅದಕ್ಕೆ ತನ್ನ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಮತ್ತು ತನ್ನ ವಿಶ್ವಾಸಾರ್ಹತೆಯನ್ನು ಕಾಯ್ದುಕೊಳ್ಳಲು ಈ ಹೋರಾಟಗಳು ಅನಿವಾರ್ಯವೂ ಆಗಿರುತ್ತವೆ. ಆದ್ದರಿಂದ ಮಹಿಳಾ ಚಳವಳಿ ಕಾನೂನು ವ್ಯವಸ್ಥೆಯೊಂದಿಗೆ ನಡೆಸುತ್ತ ಬಂದಿರುವ interaction ಮಹಿಳೆಯರ ಜನತಾಂತ್ರಿಕ ಹಕ್ಕುಗಳ ದಿಗಂತಕ್ಕೆ ಒಂದು ಸಂಕೇತದಂತೆ ಕಾನೂನನ್ನು ಭಾವಿಸುತ್ತದೆ. ಮಹಿಳಾ ಹಕ್ಕುಗಳು ಮಾನವ ಹಕ್ಕುಗಳೇ ಎಂದು ಗುರುತಿಸುವ ಮೂಲಕ ಈ ಹೋರಾಟಕ್ಕೆ ಇನ್ನೊಂದು ಆಯಾಮ ದೊರೆಯಿತು.

**ಮಹಿಳಾ ಹಕ್ಕು; ಮಾನವ ಹಕ್ಕು:**

ಮಾನವ ಹಕ್ಕುಗಳು ಅಂತರರಾಷ್ಟ್ರೀಯವಾಗಿ ರಕ್ಷಣೆ ಪಡೆದಿವೆ. ಹಲವಾರು ದೇಶಗಳಲ್ಲಿ ಮಹಿಳೆಯರ ಮೇಲಿನ ಹಿಂಸಾಚಾರಗಳ ಪ್ರತಿಭಟನೆಗೆ ಅವು ಅವಕಾಶ ಒದಗಿಸಿವೆ. ಈ ಮಾನವ ಹಕ್ಕುಗಳ ನಿರೂಪಕ ದೇಶಗಳು ಮುಖ್ಯವಾಗಿ ಬಂಡವಾಳಶಾಹಿಗಳೇ ಆಗಿದ್ದು ಸಮಾಜವಾದಿ ದೇಶಗಳೊಂದಿಗೆ ಅವು ಆಂತರಿಕವಾಗಿ 'ಶೀತಲಯುದ್ಧ' ನಡೆಸುತ್ತಲೇ ಬಂದಿವೆ. ಭಾರತದಲ್ಲಿ ಜೆಂಡರ್ ಆಧರಿತ ಹಿಂಸೆಯ ಸ್ವರೂಪವನ್ನು ಮೊದಲು ಗುರುತಿಸಿದ್ದು ನಾಗರಿಕ ಸ್ವಾತಂತ್ರ್ಯಗಳ (Civil Liberties) ಮೂಲಕ. ಆಮೇಲೆ ಈ ಪ್ರಶ್ನೆ ಜನತಾಂತ್ರಿಕ ಹಕ್ಕುಗಳ ವಿಶಾಲ ಅಜೆಂಡಾದಲ್ಲಿ (Democratic Rights) ಸೇರಿತು. ವಿಶ್ವಸಂಸ್ಥೆ ಪ್ರತಿಪಾದಿಸುವ ಮಾನವ ಹಕ್ಕುಗಳೊಂದಿಗೆ ನಾವು ಕೈಜೋಡಿಸಿದಲ್ಲಿ ಸಮಾಜವಾದಿ ದೇಶಗಳ ವಿರುದ್ಧವಾದ 'ಶೀಲತಯುದ್ಧ'ದ ಕಳಂಕಕ್ಕೂ ಭಾಗಿಗಳಾದಂತೆಯೇ ಎಂದು ಜನತಾಂತ್ರಿಕ ಹಕ್ಕು ವಾದಿಗಳು ಮೊದಲು ಅನುಮಾನಿಸಿದ್ದೂ ಇದೆ.

ಅಲ್ಲದೆ 'ಸಾರ್ವತ್ರಿಕ' ನ್ಯಾಯದ ಮಾನದಂಡವೂ ಆಂತರಿಕ ದ್ವಿಮುಖ ನೀತಿಗಳನ್ನೇ ಪೇಟೆಂಟ್ ಆಗಿ ಹೊಂದಿರುತ್ತದೆ. ಅಂತರ ರಾಷ್ಟ್ರೀಯ ಕಾನೂನುಗಳ ಅಡಿಯಲ್ಲಿ ಸ್ಥಳೀಯ ಚರಿತ್ರೆಗಳು, ಹೋರಾಟ ಗಳೂ ಚಪ್ಪಟೆಯಾಗುವ ಸಾಧ್ಯತೆಯಿದೆ. ಆದ್ದರಿಂದ CEDAW [Convention on the Elimiration of Discriminations Against Women] ಗಳ ಮಾನದಂಡದಿಂದ ಸ್ಥಳೀಯ ಕಾನೂನು ಗಳನ್ನು ಅಳೆಯುವುದನ್ನು ಮಹಿಳಾ ಚಳವಳಿಯು ಪ್ರತಿಭಟಿಸಿತು. ಮಾನವಹಕ್ಕುಗಳ ಚರ್ಚೆಯಲ್ಲಿ ಸ್ತ್ರೀವಾದಿಗಳು ನಡುವೆ ಪ್ರವೇಶಿಸಿದ್ದರಿಂದ ಸ್ಥಳೀಯ ಹೋರಾಟಗಳನ್ನು ಅಂತರರಾಷ್ಟ್ರೀಯ ಕಾನೂನಿನ ಸುಧಾರಣೆಗೂ ಸಾಧನವಾಗುವಂತೆ ಮಾಡಬಲ್ಲ ಶಕ್ತಿಯನ್ನು ಆ ಚರ್ಚೆಗೆ ಒದಗಿಸಲು ಸಾಧ್ಯವಾಗಿದೆ. ದೇಶೀಯ ಸರ್ಕಾರ ನೇರವಾಗಿ ಪ್ರತಿಭಟಿಸ ಬಹುದಾದದ್ದು, ದೇಶದ ಸಂವಿಧಾನಾತ್ಮಕ ನಿಯಮಗಳ ರಕ್ಷಣೆಗೆ ಅದು ಬದ್ಧವಾಗಿರಲೇಬೇಕು. ಸರ್ಕಾರದ ಸ್ವೇಚ್ಛಾಚಾರ ಮಿತಿ ಮೀರದ ಹಾಗೆ ಅದನ್ನು ಪ್ರತಿಭಟಿಸುವ ಮೂಲಕ ಅಂತರ ರಾಷ್ಟ್ರೀಯ ಕಾನೂನುಗಳಿಗೆ ಬದ್ಧಗೊಳಿಸಲಿಕ್ಕೆ ಇದರಿಂದ ಸಾಧ್ಯ. ಅದೇ ವೇಳೆಗೆ ಅಂತರ ರಾಷ್ಟ್ರೀಯ ಕಾನೂನುಗಳ ದ್ವಾರಪಾಲಕರು ಮತ್ತು ಆ ನಿಯಮಗಳನ್ನು ರೂಪಿಸಿದವರನ್ನೂ ತಾತ್ವಿಕತೆ ದೃಷ್ಟಿಯಿಂದ ಪ್ರಶ್ನಿಸಲು ಇದರಿಂದ ಸಾಧ್ಯವಾಗುತ್ತದೆ. ಮಹಿಳಾ ಹಕ್ಕುಗಳ ಚರ್ಚೆಯು, ಮಹಿಳಾ ಹೋರಾಟಗಳನ್ನು ರೂಪಿಸಿ ಮುನ್ನಡೆಸಲು ವಿಶ್ವಸಂಸ್ಥೆ ನಿರ್ಮಿಸಿದ Legacy ಎಂದು, ಅದನ್ನು ನಿರ್ಲಕ್ಷ್ಯ ಇಲ್ಲವೆ ಅನುಮಾನದಿಂದಲೇ ನೋಡಿತು. ಅಂತರ ರಾಷ್ಟ್ರೀಯ ಸಂಸ್ಥೆಗಳು ಜಾಗತೀಕರಣವನ್ನು ಎಲ್ಲೆಡೆ ಸ್ಥಾಪಿಸಲು ಕೈಗೊಳ್ಳುವ ಯತ್ನಗಳಿಗೆ ಸ್ತ್ರೀವಾದವನ್ನು ಹೊಂದಿಸಲು ನಡೆದಿರುವ ಹುನ್ನಾರ ಇದು ಎಂದು ಭಾವಿಸಲಾಯಿತು. ಏಕೆಂದರೆ ವಿಶ್ವಸಂಸ್ಥೆಯು ದೇಶಗಳಿಗೆ ಧನಸಹಾಯ ಒದಗಿಸಲಿಕ್ಕೆ ಮಾನವ ಹಕ್ಕುಗಳ ರಕ್ಷಣೆಯನ್ನು ಒಂದು ಷರತ್ತನ್ನಾಗಿ ವಿಧಿಸಿತು. ಮಿಲಿಟರಿ ಒಳ ಪ್ರವೇಶ

ಕೂಡ ಇದರಿಂದ ನ್ಯಾಯಬದ್ಧವಾಗಿಬಿಡಬಹುದು. ಇದು ಹೊಸ ಸಾಮ್ರಾಜ್ಯವಾದದ ಎದ್ದು ತೋರುವ ವೈಲಕ್ಷಣ್ಯವೇ ಆಗಿದೆ.

**ಸರ್ಕಾರದ ಜೊತೆ ಸಹಕಾರ**

ಮಹಿಳಾ ಚಳವಳಿ ಸರ್ಕಾರವನ್ನು ತನ್ನ ವಿರೋಧಿ ಎಂದು ಪರಿಗಣಿಸಿ ಅದರ ಕರ್ತವ್ಯಗಳಿಗಾಗಿ ಆಗ್ರಹಿಸುತ್ತ ಬಂದಿದ್ದರೂ ಸಂಪೂರ್ಣವಾಗಿ ಸರ್ಕಾರಕ್ಕೆ ವಿರುದ್ಧವಾಗಿಲ್ಲ [ಪಾಕಿಸ್ತಾನದಲ್ಲಿ ಆದ ಹಾಗೆ] ಪಿತೃಪ್ರಾಧಾನ್ಯದ ವಿರುದ್ಧವಾದ ಹೋರಾಟ, ವಿಶ್ಲೇಷಣಾ ಶಕ್ತಿಗಳನ್ನು ಬಳಸುವಲ್ಲಿ ಸರ್ಕಾರದ ಸಹಯೋಗದೊಂದಿಗೂ ಹಲವು ಸಲ ಕೆಲಸಮಾಡಿದೆ. ಸಿವಿಲ್ ಲಿಬರ್ಟೀಸ್ ಹಾಗೂ ಡೆಮಾಕ್ರೆಟಿಕ್ ರೈಟ್ಸ್ ಗುಂಪುಗಳು ಖಚಿತವಾದ ಸರ್ಕಾರ ವಿರೋಧಿ ನಿಲುವು ತಳೆದಾಗ ಅನೇಕ ಸ್ತ್ರೀವಾದಿ ಗುಂಪುಗಳು ತಾತ್ತ್ವಿಕವಾಗಿ ಭಿನ್ನದಾರಿಯತ್ತ ಹೊರಳಿದವು (1980ರ ದಶಕ). ಸರ್ಕಾರ ಪಿತೃಪ್ರಾಧಾನ್ಯದ ರೀತಿಯನ್ನೇ ಪುನರುಚ್ಚರಿಸಿ ಹೇರಲೆತ್ನಿಸಿದ ವಾಸ್ತವಾಂಶವನ್ನು ಗುರುತಿಸಿದರೂ ಸುಮ್ಮನೆ ಸರ್ಕಾರವನ್ನು ಬದಿಗೆ ತಳ್ಳಿಹಾಕಲು ಸಾಧ್ಯವಾಗಿಲ್ಲ. ಏಕೆಂದರೆ ಕುಟುಂಬ ಮತ್ತು ಸಮುದಾಯಗಳ ಪಿತೃಪ್ರಾಧಾನ್ಯದ ಗೋಜಲುಗಳೊಳಗಿಂದ ಹೊರಬಂದು ಹೊಸ ಜೀವನ ಕಕ್ಷೆಯನ್ನು ರೂಪಿಸಿಕೊಳ್ಳಲು ಮಹಿಳೆಯರಿಗೆ ಸರ್ಕಾರವೂ ಬಲವಾದ ಆಧಾರಶಕ್ತಿಯಾಗಿದೆ. ಸ್ವಾತಂತ್ರ್ಯಾನಂತರದಲ್ಲಿ ಹೊಸದೇಶ ಕಟ್ಟುವ ಸಂದರ್ಭದಲ್ಲಿ ಜಾತಿ, ಲಿಂಗ, ಧಾರ್ಮಿಕಾದಿ ಭೇದವಿಲ್ಲದ ಸೆಕ್ಯುಲರಿಸಂ ಹಾಗೂ ಸರ್ವ ಸಮಾನತೆ ತತ್ವಕ್ಕೆ ಬದ್ಧವಾದ ಸಂವಿಧಾನವನ್ನು ಕೂಡಿಸಲಾಯಿತು. ಹೀಗೆ ಸಮಾಜ ಸುಧಾರಣೆಗೆ ಜನರೇ ತಯಾರಿಸಿದ ಒಂದು ಔಪಚಾರಿಕ ಉಪಕರಣವೆಂದು ಸರ್ಕಾರದ ಸಾಮಾಜಿಕ ಪರಿವರ್ತನಾ ಕಾರ್ಯಗಳಿಗೆ ಜನಸಹಕಾರ ಮೊದಲಿನಿಂದಲೂ ಬೆಳೆಯಿತು. ತುರ್ತು ಪರಿಸ್ಥಿತಿಯಿಂದ ಈ ಸಂಬಂಧಕ್ಕೆ ಧಕ್ಕೆ ಬಂದಾಗ ನಾಗರಿಕ ಸ್ವಾತಂತ್ರ್ಯ, ಜನತಾಂತ್ರಿಕ ಹಕ್ಕುಗಳ ಪರವಾದ ಸಂಘಟನೆಗಳಲ್ಲಿ ಮಹಿಳಾ ಚಳವಳಿಗಾರರೂ ಸರ್ಕಾರದ ದೌರ್ಜನ್ಯ, ದುಷ್ಕೃತ್ಯಗಳನ್ನು ಮಿಲಿಟರಿ ದಮನ ನೀತಿಯನ್ನು ತೀವ್ರವಾಗಿ ಪ್ರತಿಭಟಿಸಿದ್ದರು.

ಕಳೆದ ದಶಕದಲ್ಲಿ ಸರ್ಕಾರ ಹೆಚ್ಚಾಗಿ ಹಿಂದುತ್ವವಾದಿ ಶಕ್ತಿಗಳಿಂದ ಪೋಷಿತವಾಗತೊಡಗಿ ರಾಷ್ಟ್ರೀಯವಾದಿ ಸುಧಾರಣಾವಾದಕ್ಕೆ ಬದಲಾಗಿ ಉದಾರವಾದಿ ಆರ್ಥಿಕ ನೀತಿಯನ್ನು ಸ್ವೀಕರಿಸಿದ್ದು, ಮಹಿಳೆಯರು ಎತ್ತುತ್ತಿದ್ದ ಪ್ರಶ್ನೆಗಳು, ಬಯಸುತ್ತಿದ್ದ ಅಭಿವೃದ್ಧಿಗಳ ವಿಚಾರಗಳನ್ನು Co-Opt ಮಾಡಿಕೊಳ್ಳುವತ್ತ ಹೊರಳಿತು. ಬಲಪಂಥೀಯ ಹಿಂದು ವಾದಿಗಳ ನಿರಂಕುಶಾಧಿಕಾರದ ಹಿಡಿತದಲ್ಲಿ ಹಿಂದಿನಿಂದಲೂ ಉಳಿದು ಬಂದಿದ್ದ ಮಹಿಳಾ ಪ್ರಶ್ನೆಗಳನ್ನು ವಿರೋಧಿಸಿ ಹೋರಾಡುವ ಸತ್ವವನ್ನೇ ಇದು ದುರ್ಬಲಗೊಳಿಸಿತು. ಮಹಿಳೆಯರ ರಾಜಕೀಯ ಪ್ರಾತಿನಿಧ್ಯ ಕುರಿತಂತೆ ಮೀಸಲಾತಿ ಸ್ಥಾನಕ್ಕಾಗಿ ಮಹಿಳಾ ಚಳವಳಿ ನಡೆಸಿದ್ದ ಹಕ್ಕೊತ್ತಾಯಗಳು ಬಿಲ್ ಆಗುವಲ್ಲಿ ವಿಫಲವಾಗುತ್ತಿದ್ದ ಪರಿಸ್ಥಿತಿ ಒಂದು ಕಡೆ, ಮಹಿಳಾ ಮುಖ್ಯಮಂತ್ರಿಯೊಬ್ಬರು, ಬಲಪಂಥೀಯ ಪಕ್ಷದ ಉಪಾಧ್ಯಕ್ಷೆಯಾದ ಒಬ್ಬ ಮಹಿಳೆ, ಆ ಪಕ್ಷದ ಮಹಿಳಾ ಮುಖವಾಣಿ ಗಳೆನಿಸಿದ ಉಮಾಭಾರತಿ, ಸಾಧ್ವಿ ಋತಂಬರಾ ಮುಂತಾದವರು, ಮತೀಯವಾದಿ ಹಿಂದು ಸಂಘಟನೆಗಳು ಭಾರಿ ಸಂಖ್ಯೆಯಲ್ಲಿ ಮಹಿಳೆ ಯರನ್ನು ಸಂಘಟಿಸಿ ಗುಜರಾತ್‌ನಲ್ಲಿ ತೋರಿಸಿದ ಕೋಮುವಾದಿ ಸಾಮರ್ಥ್ಯ ಇನ್ನೊಂದು ಕಡೆ: ಇವುಗಳಿಂದ ಹುಟ್ಟಿರುವ ವಿಷಮ ಸ್ಥಿತಿಯಲ್ಲಿ ಈಗ ಬೇಕಾದ್ದು ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಎಂಬುದು ಕೇವಲ ಸಂಖ್ಯಾತ್ಮಕವಾಗುವುದು ಅಲ್ಲ, ಅದು ಗುಣಾತ್ಮಕ ವಾಗಬೇಕಿದೆ. ಅವರು ಭಾಗವಹಿಸುವ ರೀತಿ, ಅದರ ಹಿಂದಿರುವ ತಾತ್ತ್ವಿಕತೆ ಮತ್ತು ರಾಜಕೀಯ ವಿಭಾಗಗಳಲ್ಲಿ ಅವರ ನಾಯಕತ್ವವನ್ನು ಗುರುತಿಸಬೇಕಾದ್ದು ಇಂದಿನ ಅವಶ್ಯಕತೆಯಾಗಿದೆ.

**ಮಹಿಳಾ ಚಳವಳಿ ಮತ್ತು ಕೋಮುವಾದ ವಿರೋಧ**

ಕೋಮುವಾದ ವಿರೋಧಿ ಹೋರಾಟಗಳಲ್ಲಿ ಮಹಿಳಾ ಚಳವಳಿಯೂ ಆಳವಾಗಿ ತೊಡಗಿಕೊಂಡಿದೆ. ಆದರೆ ಶಾಬಾನು ಕೇಸ್‌ನಿಂದ ಹೊಮ್ಮಿಬಂದ ಧಾರ್ಮಿಕ ಕಾನೂನು ಮತ್ತು ಸಮಾನ ನಾಗರಿಕ ಕಾಯಿದೆಯ ವಿಷಯದಲ್ಲಿ ಮಹಿಳಾ ಚಳವಳಿಯಲ್ಲೇ ಭಿನ್ನಪಂಥಗಳಾದವು. ಒಂದು ಧರ್ಮದವರು ಮತ್ತೊಂದು ಧರ್ಮ ದವರನ್ನು ಪ್ರತಿನಿಧಿಸಬಹುದೆ ಎಂಬುದೂ ಭಿನ್ನಮತಕ್ಕೆ ಎಡೆ ಕೊಟ್ಟಿದೆ. ಧರ್ಮ, ಜಾತಿಗಳ ಮಿತಿಗಳನ್ನು ಮೀರಿ ವಿಶಾಲ ತಳಹದಿ ಮೇಲೆ ಬೆಳೆದ ಮಹಿಳಾ ಚಳವಳಿಯಲ್ಲಿ ಕೆಲವು ರೀತಿಯ Tension ಗಳು ಉಂಟಾದವು. ಸಮಸ್ಯೆಗಳು ಹಿಂದುಗಳದಿರಲಿ, ಕ್ರಿಶ್ಚಿಯನ್ನರದಿರಲಿ, ಮುಸ್ಲಿಮರದಿರಲಿ ಎಲ್ಲವೂ ಮಹಿಳೆಯರ ಪ್ರಶ್ನೆಗಳೆಂದು ಚಳವಳಿಗಾರರು ಕೈಗೆತ್ತಿಕೊಳ್ಳುತ್ತಿದ್ದರು. ಆದರೆ ವೈಯಕ್ತಿಕ ಕಾನೂನನ್ನು ಕಾಯ್ದುಕೊಳ್ಳಬೇಕು, ಸ್ವತಃ ತಮ್ಮನ್ನು ಪ್ರತಿನಿಧಿಸಿಕೊಳ್ಳಬಹುದೆಂಬ ಪ್ರಶ್ನೆಗಳೆದುರಲ್ಲಿ ರಾಜಕೀಯ ಭೇದವನ್ನು ಹುಟ್ಟಿಸುವ 'ಮುಸ್ಲಿಂತನ'ದ ಪ್ರಶ್ನೆಯೂ ಎದ್ದಿತು. ಹಿಂದು ಕೋಮುವಾದಿಗಳ ದೌರ್ಜನ್ಯಗಳು ಈ ಭೇದವನ್ನು ಹೆಚ್ಚಿಸಿ ಪೋಷಿಸಲು ಕಾರಣವಾದವು. ಈ ಭಿನ್ನಮತ ಕಾಣಿಸಿಕೊಂಡರೂ ಕೋಮುವಾದವನ್ನು ಖಂಡಿಸುವ ವಿಷಯದಲ್ಲಿ ಇಂದಿಗೂ ಐಕಮತ್ಯವೇ ಇದೆ ಎನ್ನುವುದು ಗಮನಾರ್ಹ ಸಂಗತಿ.

ಬಹುಸಾಂಸ್ಕೃತಿಕ ಲಕ್ಷಣವುಳ್ಳ ಒಂದು ವಿಶಾಲತೆಯಲ್ಲಿ ಭಾವಿಸ ಲಾಗಿದ್ದ ಸಾಮಾಜಿಕ ಶರೀರವು ಜನಾಂಗೀಕರಣವಾದಕ್ಕೆ ಬಲಿ ಯಾಯಿತು. ಸಮಾನಾಂತರವಾಗಿ ಅಸ್ಮಿತೆಯ ರಾಜಕೀಯವೂ ಕಾಣಿಸಿಕೊಂಡಿತು. ರಾಜಕೀಯ ಕಾರ್ಯವಿಧಾನದಲ್ಲಿ ಭಿನ್ನ ಅಸ್ಮಿತೆಗಳು ಖಚಿತ ಸ್ಥಾನ ಪಡೆದಿರಲೇ ಬೇಕೆಂಬುದು ಈ ಅಸ್ಮಿತೆ. ರಾಜಕೀಯ ದಿಂದಲೂ ಮಹಿಳಾ ಚಳವಳಿ ವಿಚಲಿತವಾಗಿಲ್ಲ. ಸೈನ್ಯೀಕರಣದ ವಿರುದ್ಧ ಪ್ರತಿಭಟಿಸಿ ಪ್ರಾದೇಶಿಕ ಶಾಂತಿ ರಕ್ಷಿಸುವುದು, ನ್ಯೂಕ್ಲಿಯರ್ ಪರೀಕ್ಷೆಗಳನ್ನು ಗಡಿ ಪ್ರದೇಶದಲ್ಲಿ ನಡೆಸುವುದನ್ನು ವಿರೋಧಿಸುವುದು, ದಕ್ಷಿಣ ಏಷ್ಯಾ ದೇಶಗಳ ಗಡಿಪ್ರದೇಶಗಳ ಜನರಿಗೆ ಬೆಂಬಲ ನೀಡಿ ಅವರ ಐಕ್ಯತೆ ಕಾಪಾಡುವುದೇ ಮುಂತಾದ ಹಲವಾರು ವಿಶಾಲ ಹೋರಾಟಗಳಲ್ಲಿ ಮಹಿಳಾ ಚಳವಳಿ ಸಕ್ರಿಯವಾಗಿದೆ.

**ಜಾತಿ ವಿನಾಶದ ಪ್ರಶ್ನೆಯೊಂದಿಗೆ**

ಜಾತಿಪದ್ಧತಿಯನ್ನು ವಿರೋಧಿಸುವಲ್ಲಿ ಮಹಿಳಾ ಚಳವಳಿ ಯಾವತ್ತೂ ಇತರ ರಾಜಕೀಯ ಸಂಘಟನೆಗಳ ಜೊತೆಗೂಡಿದೆ. ಜಾತಿಪ್ರತ್ಯೇಕತೆಯು ಒಂದು ವಿವೇಚನಾತ್ಮಕ ಪ್ರಶ್ನೆಯಾಗಿ ಹೊಮ್ಮಿದ್ದು 1980ರ ದಶಕದಲ್ಲಿ. ಜಾತಿ–ವರ್ಗಗಳ ಸಂಬಂಧದ ಹಲವು ಸಲ ಎರಡೂ ಶೋಷಣೆಗಳನ್ನು ಸಮಾನಾರ್ಥಕಗಳೆಂಬಂತೆ ಭಾವಿಸುವುದು, ಒಂದರ ವಿರುದ್ಧವಾದ ಪ್ರತಿಭಟನೆ ಮತ್ತೊಂದನ್ನೂ ಪ್ರತಿಭಟಿಸಿದ ಹಾಗೆಯೇ ಎಂದು ಸುಲಭವಾಗಿ ಭಾವಿಸಿಬಿಡುವುದಿತ್ತು. ಇಂಥ ಬ್ರಾಹ್ಮಣ್ಯ ವಿರೋಧಿ ಚಳವಳಿಗಳು ಹೇಳುವ 'ವಿಮೋಚನೆ' ಪರಿಕಲ್ಪನೆಯನ್ನೂ ಪರಿಷ್ಕರಿಸಬೇಕಾದ ಅವಶ್ಯಕತೆಯನ್ನು ಮಹಿಳಾ ಚಳವಳಿ ಗುರುತಿಸುವುದು ತೀರಾ ತಡವಾಯಿತು. 1990ರ ದಶಕದಲ್ಲಿ ಮಂಡಲ್ ವಿರೋಧಿ ಚಳವಳಿಗಳಲ್ಲಿ ಜಾತಿಯೂ ಸ್ತ್ರೀವಾದಿ ಪ್ರಶ್ನೆಯಾಗಿ ಪ್ರಾಮುಖ್ಯ ಪಡೆಯಿತು. ದಲಿತರ ಆತ್ಮಸಮರ್ಥನೆ, ದಲಿತ ಸಂಘಟನೆ ಮತ್ತು

ಮೇಲ್ಜಾತಿಗಳ ಸ್ವಸಂತೃಪ್ತಿಯ ಧೋರಣೆಗಳನ್ನು ಬಹಿಷ್ಕರಿಸುವುದು, ದಲಿತರ ಹಕ್ಕುಗಳನ್ನು ಮಾನವ ಹಕ್ಕುಗಳೆಂದು ಗುರುತಿಸುವುದೇ ಮುಂತಾದ ಚಟುವಟಿಕೆಗಳಿಂದ ಪ್ರೇರಿತವಾದ ದಲಿತ ಮಹಿಳಾ ಗುಂಪುಗಳು ರಾಷ್ಟ್ರಾದ್ಯಂತವಾಗಿ ತಮ್ಮ ಸಂಬಂಧ ಜಾಲವನ್ನು ರೂಪಿಸಿಕೊಳ್ಳುವಲ್ಲಿ ಚುರುಕಾಗಿ ಕೆಲಸಮಾಡಿದವು.

ಆದರೂ ಒಟ್ಟಾರೆ ಮಹಿಳಾ ಚಳವಳಿಯೊಳಗೆ ಜಾತಿವಾದ ವಿರೋಧವನ್ನು ತಾತ್ತ್ವಿಕ ಸೂತ್ರವಾಗಿ ರೂಪಿಸುವಲ್ಲಿ, ಸಂಘಟಿಸುವಲ್ಲಿ ಬಲವಾದ ಕಾರ್ಯವೇನೂ ಆದಂತಿಲ್ಲ. ಜಾತಿ ಶ್ರೇಣೀಕರಣಕ್ಕೂ ಪಿತೃಪ್ರಧಾನ್ಯಕ್ಕೂ ಇರುವ 'ಸಹಕಾರ'ದ ಸಂಬಂಧಗಳು, ಜಾತಿಗಳೊಳಗೆ ಲೈಂಗಿಕತೆಯ ಸಂರಚನೆಯಲ್ಲಿನ ವ್ಯತ್ಯಾಸಗಳು ಇತ್ತೀಚೆಗೆ ಹೆಚ್ಚಾಗಿ ಬೆಳಕಿಗೆ ಬರುತ್ತಿವೆ. ಆದರೆ ಒಂದು ಸ್ಥೂಲವಾದ ಶ್ರೇಣೀಕೃತ ಶೋಷಣೆ/ ಅನ್ಯಾಯ ಎಂದು ಎಲ್ಲ ಮಹಿಳೆಯರನ್ನು ಶೋಷಿಸುವಂತೆ ಅದರ ಸಂವಿಧಾನವಿದೆ ಎಂಬುದರ ಸೈದ್ಧಾಂತೀಕರಣ ಇನ್ನೂ ಆಗಬೇಕಾದ್ದು ಮಹಿಳಾ ಚಳವಳಿಯ ಇಂದಿನ ಅವಶ್ಯಕತೆಗಳಲ್ಲೊಂದು.

ದೇಶದ ರಾಜಕೀಯ ಘಟನೆಗಳ ಮೇಲೆ ಮಹಿಳಾ ಚಳವಳಿಯು ಹಾಸು ಹೊಕ್ಕಾದ ಪರಿಣಾಮ ಬೀರಿ ತನ್ನ ಛಾಪನ್ನು ಒತ್ತಿದೆ. ಮಹಿಳೆಯರ ಪ್ರಶ್ನೆಯನ್ನು ಸುಮ್ಮನೆ ನಿರ್ಲಕ್ಷಿಸುವುದು ಇಂದು ಸಾಧ್ಯವಾಗುವುದಿಲ್ಲ. ಪ್ರಜ್ಞಾಜಾಗೃತಿ, ಉದಾರವಾದಿ ಸಮಾಜ ಪರತೆ, ಲಿಂಗತ್ವದ ಪ್ರಶ್ನೆಗಳಲ್ಲೇ ಉಳಿದಿರಲು ನಿರಾಕರಿಸುತ್ತಾ ವಿಶಾಲ ರಾಜಕೀಯ ಕ್ಷೇತ್ರದಲ್ಲಿ ಜೆಂಡರ್ ಪ್ರಶ್ನೆಯನ್ನು ವಾಸ್ತವೀಕರಿಸಲು, ಯತ್ನಿಸುತ್ತಲೇ ಬಂದಿದೆ ಮಹಿಳಾ ಚಳವಳಿ. ಆದರೆ ರಾಜಕೀಯದ ಭೀಕರ ದೌರ್ಜನ್ಯ ಪೂರ್ಣ ಒತ್ತಡಗಳು ಮಹಿಳಾ ಚಳವಳಿಯನ್ನು ಸದಾ ಪ್ರತಿಭಟನೆಯ ಜಾಗದಲ್ಲೇ ಉಳಿಸುತ್ತಿವೆಯೇ ಹೊರತು ತಾವೇ ರಾಜಕೀಯವಾಗಿ ನಿರ್ಣಾಯಕ ಜಾಗಗಳಿಂದ ಕಾರ್ಯನಡೆಸಲು ಬೇಕಾದ ಅಧಿಕಾರ ಇನ್ನೂ ದೂರವೇ ಇದೆ.

**ಪ್ರತಿನಿಧೀಕರಣದ ಪ್ರಶ್ನೆ**

ಪಿತೃಪ್ರಾಧಾನ್ಯಗಳು ಪ್ರತಿನಿಧೀಕರಣದ ಮೂಲಕ ಹೇಗೆ ತಮ್ಮನ್ನು ರಕ್ಷಿಸಿಕೊಳ್ಳುತ್ತ ಬಂದಿವೆ ಎಂಬುದು ಶಾಲಾ ಪಠ್ಯಪುಸ್ತಕಗಳಲ್ಲಿ, ಸಾಹಿತ್ಯದಲ್ಲಿ ಹಾಗೂ ಎಲ್ಲ ಬಗೆಯ ಕಲಾಪ್ರಕಾರಗಳ ವಿಶ್ಲೇಷಣೆ, ಜೆಂಡರ್ ಅಧ್ಯಯನಗಳಿಂದ ಖಚಿತಪಟ್ಟಿದೆ. ಈ ನಿಟ್ಟಿನಲ್ಲಿ ಸ್ತ್ರೀವಾದಿ ಚಿಂತನೆ ಹೊಸ ತಾತ್ತ್ವಿಕ ಆವಿಷ್ಕರಣಗಳು, ಅನ್ಯಶಾಸ್ತ್ರೀಯ ಚಿಂತನೆಗಳು, ಚರ್ಚೆ, ವಿಮರ್ಶೆ, ಸಂಶೋಧನೆಗಳಲ್ಲಿ ವ್ಯವಸ್ಥೆಯ ಮೇಲು ಸಂರಚನೆಯೊಂದಿಗೆ ಸಂವಾದ ನಡೆಸುತ್ತ ಬಂದಿದೆ. ಸಮಕಾಲೀನವೂ ಚಾರಿತ್ರಿಕವೂ ಆಗಿರುವ ವಿಷಯಗಳೆನಿಸಿರುವ ಭಕ್ತಿ, ಮತಾಂತರ, ವಸಾಹತೀಕರಣ, ವಸಾಹತುಗಳ ಸುಧಾರಣೆ, ರಾಷ್ಟ್ರ, ಸ್ವಾತಂತ್ರ್ಯ ಹೋರಾಟ, ದೇಶ ವಿಭಜನೆ ಮುಂತಾದವುಗಳ ಸಂಕೀರ್ಣ ಲಕ್ಷಣಗಳನ್ನು ಗುರುತಿಸುವಲ್ಲಿ ಸಾಕಷ್ಟು ಶ್ರಮಿಸಲಾಗಿದೆ/ಶ್ರಮಿಸಲಾಗುತ್ತಿದೆ. ಆದರೆ (nativism) ದೇಶೀಯವಾದ, (Identitarian Authenticity) ಅಂಕಿತಾತ್ಮಕ ಅಧಿಕೃತತೆಗಳನ್ನು ಬಹುಸಾಂಸ್ಕೃತಿಕ ಸಾಮಾಜಿಕ ಸ್ವರೂಪವುಳ್ಳ, ಸದಾ ವಲಸೆಗಾರಿಕೆಗೆ ಒಳಗಾಗುತ್ತಲೇ ಬಂದಿರುವ ಭಾರತದಲ್ಲಿ ಗುರುತಿಸುವುದು ಅಸಮರ್ಪಕ ಕ್ರಮವೆಂದು ಅಂಥ ಯತ್ನಗಳನ್ನು ಸ್ತ್ರೀವಾದಿಗಳು ವಿರೋಧಿಸಿದ್ದಾರೆ. ದೇಶೀಯವಾದವು ಆಧುನಿಕತೆಯನ್ನು ವಿರೋಧಿಸಿದರೆ, ಪ್ರಗತಿಪರ ನಿಲುವು ಪರಂಪರೆಗೆ ಸವಾಲೆಸೆಯುತ್ತದೆ. ಪರಂಪರೆ-ಆಧುನಿಕತೆಗಳನ್ನು ಕುರಿತಂತೆ ಪಿತೃಪ್ರಾಧಾನ್ಯ ನಿಲುವುಗಳನ್ನು ವಿರೋಧಿಸುವುದೇ ಒತ್ತಾಯವುಳ್ಳ project ನಂತಾಗಿ ಈ ಪದಗಳೇ binary ಸ್ಥಾನಗಳಲ್ಲಿ ನಿಲ್ಲುವಂತಾಗಿದೆ.

**ಸಲಿಂಗತ್ವದ ಸೈದ್ಧಾಂತೀಕರಣದ ಪ್ರಶ್ನೆ**

ಭಿನ್ನಲಿಂಗ ಸಂಬಂಧದ ನಿಯಮಾವಳಿಯಲ್ಲಿ 'ಹೊರಗಿನದಾಗು'ವ ಲೈಂಗಿಕತೆ ಬಗ್ಗೆ ಮಹಿಳಾ ಚಳವಳಿಯಲ್ಲಿ ಹೆಚ್ಚು ಗಮನ ಹರಿದದ್ದಿಲ್ಲ. ಮಾರ್ಕ್ಸ್‌ವಾದಿಗಳು ಸವಲತ್ತುಗಳ ವರ್ಗ ಹಾಗೂ ಲೈಂಗಿಕತೆಗಳ ಬಗ್ಗೆ ಒತ್ತು ಕೊಡುವ ಚಳವಳಿಗೆ ತೊಡಗಿದ್ದು ತಡವಾಗಿಯೇ. ಸಲಿಂಗ ಸಂಬಂಧ ಸಂತಾನೋತ್ಪಾದಕವಲ್ಲದ ಲೈಂಗಿಕತೆ ಎಂದು ಕಾಣಲಾಗುತ್ತಿತ್ತೇ ವಿನಾ ಪಿತೃಪ್ರಾಧಾನ್ಯ ವರ್ಗೋತ್ಪಾದನೆಯ ವ್ಯವಸ್ಥೆಯ ವಿಶ್ಲೇಷಣೆಗೆ ಅದೂ ಒಗ್ಗಬಹುದೆಂಬ ತಿಳಿವಳಿಕೆ ಇರಲಿಲ್ಲ. ಭಿನ್ನಲೈಂಗಿಕತೆ ಸಂಬಂಧಗಳ ಒಳಗೇ ಇರುವ ಶೋಷಣೆಯ ಪ್ರಶ್ನೆಗಳೆ ಎಷ್ಟು ಪ್ರಬಲವಾಗಿ ಕಂಡವು ಎಂದರೆ ಬೇರೆ ಎಲ್ಲಾ ಬಗೆಯ ಲೈಂಗಿಕತೆಯ ಪ್ರಶ್ನೆಗಳಿಗೂ ಚಳವಳಿಯು ಕುರುಡಾಗಿರುವಂತೆ ಆಗಿತ್ತು. ಏಕೆಂದರೆ ಬಹುಸಂಖ್ಯಾತ ಮಹಿಳೆಯರ ಪ್ರಶ್ನೆಗಳು ಈ Heterosexuality ವ್ಯವಸ್ಥೆಯಿಂದ ಹುಟ್ಟಿದವೇ ಆಗಿದ್ದವು. ಕೇವಲ ಇತ್ತೀಚಿನ ದಿನಗಳಲ್ಲಿ ಸಲಿಂಗಕಾಮ, ಮೂರನೆಯ ಲಿಂಗದವರ ಸಮಸ್ಯೆಗಳ ಬಗ್ಗೆ ಚರ್ಚೆ, ಸಂವಾದ, ಅವರದೇ ಸಂಘಟಿತ ಹೋರಾಟ, ಅವರ ಹಕ್ಕುಗಳ ಪ್ರಶ್ನೆಗಳೂ, sexworker ಗಳದೇ ಪ್ರತ್ಯೇಕ ಸಂಘಟಿತ ಹಕ್ಕು ಹೋರಾಟಗಳೂ ನಡೆಯತೊಡಗಿವೆ.

ಇಂದು ಜಾಗತೀಕರಣದ ಶಬ್ದ ಭಂಡಾರವು ತಳವೂರುತ್ತಿದ್ದು ತೃತೀಯ ಜಗತ್ತಿನ ಸ್ತ್ರೀವಾದಗಳನ್ನು local ಎಂದು ಕಾಣುವ ಧೋರಣೆ ಬಲವಾಗುತ್ತಿದೆ. ಆದರೂ ಭಾರತದಲ್ಲಿ ಮಹಿಳಾ ಚಳವಳಿಗಿರುವ ಚರಿತ್ರೆ ಮತ್ತು ಅದಕ್ಕಿರುವ ಪ್ರಲೋಭನೆಗಳು, ಈ ಚಳವಳಿಯ ವಿಶ್ಲೇಷಣೆ ಕಂಡ ವ್ಯಾಪ್ತಿಗಳು, ಅದನ್ನು localism ಎಂದಾಗಲಿ ಪಶ್ಚಿಮದಿಂದ ರೂಪಿತವಾದದ್ದೆಂದಾಗಲಿ ಅನುಕೂಲಕರವಲ್ಲದ ಮಾದರಿಗಳೊಳಗೆ ತೂರಿಸುವುದನ್ನು ಅಸಾಧ್ಯವಾಗಿಸುತ್ತವೆ. 1970, 1980ರ ದಶಕಗಳಲ್ಲಿ ಒಂದು ಅಂತರರಾಷ್ಟ್ರೀಯ ಆಕೃತಿಯೊಂದಿಗೆ ಬೆಳೆದ ಸ್ತ್ರೀವಾದವು ಪಶ್ಚಿಮದವರ ವಿಚಾರಗಳನ್ನು ನಮ್ಮ ಸಾಮಾಜಿಕ ಸಂದರ್ಭ ಹಾಗೂ ಸರ್ಕಾರದ ಸ್ವರೂಪಗಳ ಅರಿವಿನೊಂದಿಗೆ ಸದಾ ಒರೆಹಚ್ಚಲ್ಪಡುತ್ತಲೇ ಇವೆ. ನಮ್ಮ ಧೋರಣೆ, ಕಾರ್ಯಗಳು ಪಶ್ಚಿಮದ ಕೇವಲ ಅನುಕರಣೆಯೆಂದು ಕಂಡಾಗಲೆಲ್ಲ ಅದನ್ನು ಗುರುತಿಸಿ, ಬೆಲೆಕಟ್ಟಿ, ಅವಿಮರ್ಶಿತ ಸ್ವೀಕೃತಿಗಳನ್ನು ಖಂಡಿಸುತ್ತಲೇ ಚಳವಳಿಯ ಸ್ವಂತಿಕೆಯನ್ನು ಬೆಳೆಸಲಾಗಿದೆ. ದೊಡ್ಡ ಪ್ರಮಾಣದಲ್ಲಿ ಈ ಸಮಾಜದ ಮಹಿಳೆಯರು ಸ್ತ್ರೀವಾದವನ್ನು ಅಸಹನೀಯ ಎಂದು ಅಂದುಕೊಂಡಿದ್ದರೆ, ಅದಕ್ಕೆ ಕಾರಣ ಅದು ಪಾಶ್ಚಾತ್ಯರದು ಎಂಬುದಲ್ಲ. ಅದರ ವಿಚಾರಧಾರೆಯನ್ನು ಅಳವಡಿಸಿಕೊಳ್ಳಲು ತಮಗೆ ಅಸಾಧ್ಯ ಎಂದೋ, ಅಥವಾ ಅದರ ಪ್ರಸ್ತುತತೆಯನ್ನು ತಾವು ಕಂಡುಕೊಂಡಿಲ್ಲ ಎಂದೋ ಆಗಿರುತ್ತದೆ.

'ನಮ್ಮದೇ ಆದ ದೃಷ್ಟಿಕೋನ/ನಿಲುವನ್ನು' ಬೆಳೆಸುವುದು ಮಹಿಳಾ ಚಳವಳಿಯಲ್ಲಿ ಯಾವಾಗಲೂ ಮುಖ್ಯ ಕಾಳಜಿಯಾಗಿದೆ. ಮಹಿಳಾ ಚಳವಳಿಯ ಪರಿಪ್ರೇಕ್ಷ್ಯೆಯನ್ನು ಕಾರ್ಯವಿಧಾನವಾಗಿಸುವಲ್ಲಿ ಮತ್ತು ಆತ್ಮವಿಮರ್ಶೆಯಲ್ಲಿ ಎಷ್ಟೇ ಪರಿಮಿತಿಗಳಿದ್ದರೂ ಅದು ನವ ಸಾಮ್ರಾಜ್ಯವಾದವನ್ನು ನಿಸ್ಸಂದಿಗ್ಧವಾಗಿ ಅಲ್ಲಗಳೆಯುತ್ತದೆ. ತೃತೀಯ ಜಗತ್ತಿನ ಮಹಿಳೆಯರನ್ನು ಇನ್ನೂ ಕಾಪಾಡಬೇಕಾದ ಉದ್ಧರಿಸಬೇಕಾದ ವಸಾಹತು ಪ್ರಜೆಗಳು ಎಂಬಂತೆಯೇ ಕಾಣಲು ಯತ್ನಿಸುವ ಈ ನವಸಾಮ್ರಾಜ್ಯವಾದದ ವಿರುದ್ಧವಾಗಿ ಸಕ್ರಿಯ ಪ್ರತಿಭಟನಾಕಾರರೂ ಆಗಿದ್ದಾರೆ ಭಾರತೀಯ ಮಹಿಳಾ ಚಳವಳಿಗಾರರು. ❑

# ಸ್ತ್ರೀವಾದ- ಮಹಿಳಾ ಚಳವಳಿ- ಮರು ನಿರ್ವಚನ ಇತ್ಯಾದಿ...

'ನಮ್ಮ ಮಾನಸ' ಪತ್ರಿಕೆಯ 2009ರ ಮಾರ್ಚ್ ತಿಂಗಳ ಪತ್ರಿಕೆ ವಿಶೇಷಾಂಕವಾಗಿದೆ. ಅದರಲ್ಲಿ ಅನೇಕ ಕ್ಷೇತ್ರಗಳಲ್ಲಿ ವಿವಿಧ ರೀತಿಯ ಸಾಧನೆ ಮಾಡಿದಂತಹ ಮಹಿಳೆಯರಿಂದ ಮಹಿಳಾ ಚಳವಳಿಯ ಹಿಂದಿನ ಹಾಗೂ ಇಂದಿನ ಸ್ವರೂಪ, ದಿಕ್ಕು, ದೃಷ್ಟಿಕೋನ, ಸಫಲತೆ, ವಿಫಲತೆಗಳನ್ನು ಕುರಿತಂತೆ ಒಂದು ತೌಲನಿಕ ವಿಶ್ಲೇಷಣೆಯನ್ನು ರೂಪಿಸಬೇಕು ಎಂಬ ಆಶಯ ನಮ್ಮದಾಗಿತ್ತು. ಅದಕ್ಕಾಗಿ ಮಹಿಳಾ ಚಳವಳಿಗಾರರಿಂದ / ನಿರ್ದಿಷ್ಟ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹಿಳೆಯರಿಂದ ಈ ಕೆಳಕಂಡ ಪ್ರಶ್ನೆಗಳಿಗೆ ಪ್ರತಿಕ್ರಿಯೆಯನ್ನು ಆಹ್ವಾನಿಸಿದ್ದೆವು. ಲಭ್ಯವಾದ ಪ್ರತಿಕ್ರಿಯೆಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

ನಮ್ಮ ಪ್ರಶ್ನೆಗಳು ಹೀಗಿವೆ :

1. ಮಹಿಳಾ ಚಳವಳಿಯ ಜೊತೆಗೆ ನಿಮ್ಮ ಸಂಬಂಧವನ್ನು ನೀವು ಹೇಗೆ ಗುರುತಿಸಿಕೊಳ್ಳುತ್ತೀರಿ?
2. ಈ ಚಳವಳಿಯು ಪರಿಣಾಮಕಾರಿಯಾಗಿದೆ ಹಾಗೂ ನೀವೂ ಸೇರಿದಂತೆ ಮಹಿಳೆಯರು ಫಲಭಾಗಿಗಳಾಗಿದ್ದಾರೆ ಎಂದು ಅನ್ನಿಸುತ್ತದೆಯೆ?
3. 70–80ರ ದಶಕಗಳಲ್ಲಿ ಮಹಿಳಾ ಚಳವಳಿಗಾರರಲ್ಲಿ ಇದ್ದ ಉಮೇದು, ಹೋರಾಟದ ಉತ್ಸಾಹಗಳು ಇಂದು ಕಾಣದೆ ಇರುವುದಕ್ಕೆ ನಿಮ್ಮ ಕಾರಣಗಳೇನು?
4. 25 ವರ್ಷಗಳ ಹಿಂದೆ ಮಹಿಳೆಯರು ಎದುರಿಸುತ್ತಿದ್ದ ಸಮಸ್ಯೆಗಳು ಅವರನ್ನು ಸಂಘಟಿತರಾಗಿ ಹೋರಾಡಲು ಪ್ರೇರಿಸಿದ್ದವು. ಅವರ ಹೋರಾಟದ ಯತ್ನಗಳಿಂದಾಗಿಯೂ, ಸರ್ಕಾರವು ಅವರ ಕಾರ್ಯಕ್ರಮಗಳನ್ನು Co-opt ಮಾಡಿಕೊಂಡಿದ್ದರಿಂದಲೂ ಮಹಿಳೆಯರ ಕೆಲವಾದರೂ ನಿರೀಕ್ಷೆಗಳು ಈಡೇರಿರುವುದನ್ನು ಕಾಣುತ್ತೇವೆ. ಈಗ ಹೀಗೆ ಬದಲಾದ / ಬೆಳೆದ / ಭಿನ್ನ ಜಾಗಗಳಲ್ಲಿರುವ ಮಹಿಳೆಯರು ಎದುರಿಸಬೇಕಾಗಿರುವ ಸಮಸ್ಯೆಗಳೂ ಭಿನ್ನವಾಗಿವೆ. ಈ ಹೊಸ ಸಮಸ್ಯೆಗಳನ್ನು ಎದುರಿಸಲು ಅಗತ್ಯವಿರುವ ಹೋರಾಟ ತಂತ್ರ ಯಾವ ರೀತಿಯದಾಗಿರಬೇಕು?
5. ತೀವ್ರವಾಗಿ ಕೋಮುವಾದವು ಸಮಾಜವನ್ನು ಆವರಿಸುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಮಹಿಳಾ ಚಳವಳಿಗೆ ಎದುರಾಗಿರುವ ಸವಾಲುಗಳೇನು?
6. ಜಾಗತೀಕರಣದಿಂದಾಗಿ ಮಹಿಳೆಯರು ಎದುರಿಸಬೇಕಾಗಿ ಬಂದಿರುವ ಆರ್ಥಿಕ / ಸಾಮಾಜಿಕ / ಧಾರ್ಮಿಕ / ರಾಜಕೀಯ ಸಮಸ್ಯೆಗಳು / ಸವಾಲುಗಳನ್ನು ಕುರಿತಂತೆ ನಿಮ್ಮ ವಿಶ್ಲೇಷಣೆ?
7. ಇಂದು ಒಂದೆಡೆ ಮಹಿಳೆಯರಲ್ಲಿ ಹೊಸ ಎಚ್ಚರ, ಸ್ವಪ್ರಜ್ಞೆಯ ಅರಿವು ಹೆಚ್ಚಾಗುತ್ತಿರುವಂತೆಯೆ ಮತ್ತೊಂದೆಡೆ ಮಹಿಳೆಯರ ಮೇಲಿನ ಕ್ರೌರ್ಯ, ಹಿಂಸೆಗಳ ಸ್ವರೂಪ ಮತ್ತು ಪ್ರಮಾಣಗಳು ಹೆಚ್ಚಾಗಿವೆಯೆನ್ನಿಸುತ್ತದೆಯೆ? ಇದರ ಕಾರಣಗಳೇನು?
8. ಸಾಮಾಜಿಕ ಹೋರಾಟ ಮತ್ತು ಮಹಿಳೆಯ ಆತ್ಮಶೋಧನೆಯ ಫಲವಾಗಿ ಹೊಮ್ಮುವ ಅಂತಃಸತ್ವ – ಈ ಎರಡನ್ನೂ ಒಂದಾಗಿಸಿಕೊಂಡ ತಾತ್ವಿಕ ದೃಷ್ಟಿಕೋನ ಮಹಿಳಾ ಚಳವಳಿಯ ಬಲವಾದ ಆಶಯಗಳಲ್ಲಿ ಒಂದು. ಇಂಥ ದೃಷ್ಟಿಕೋನ ಮಹಿಳಾ ಚಳವಳಿಯಲ್ಲಿ ಮೂಡಿಬಂದಿದೆ ಎನ್ನುತ್ತೀರಾ?
9. 'ಮಹಿಳಾ ಚಳವಳಿ' ಎಂಬ ಪರಿಕಲ್ಪನೆಯೇ ಮರುನಿರ್ವಚನಗೊಳ್ಳಬೇಕಾಗಿದೆಯೆಂದು ನಿಮಗೆ ಅನ್ನಿಸುತ್ತದೆಯೇ?
10. ಮಹಿಳಾತನ, ಪುರುಷತನಗಳ ಚೌಕಟ್ಟಿನ ಹೊರಗೆ ಬೆಳೆಯಬೇಕಾದ / ಬೆಳೆದಿರುವ ನಿಮ್ಮ ಸ್ವಕ್ಷೇತ್ರದ ಅನುಭವಗಳ ಬಗ್ಗೆ ಹೇಳಬಲ್ಲಿರಾ?



# ಕೋಮುವಾದದಿಂದಾಗಿ ಮುಸ್ಲಿಂ ಮಹಿಳೆಯರ ಸ್ಥಿತಿ ಮತ್ತಷ್ಟು ಶೋಚನೀಯವಾಗಿದೆ

***ಸಾರಾ ಅಬೂಬಕ್ಕರ್,*** ಲೇಖಕಿ-ಚಿಂತಕಿ

1. ಮಹಿಳಾ ಚಳವಳಿಯ ಜೊತೆಗೆ ನನಗೆ ವಿಶೇಷವಾದ ಸಂಬಂಧವಿದೆಯೆಂದು ನಾನಂದುಕೊಂಡಿಲ್ಲ. ಮುಸ್ಲಿಂ ಸಮಾಜದಲ್ಲಿ ಧಾರ್ಮಿಕ ನಿಯಮಗಳೆಂಬ ಹೆಸರಿನಲ್ಲಿ ಮಹಿಳೆಯರ ಮೇಲೆ ಕೆಲವು ನಿರ್ಬಂಧಗಳನ್ನು ಹೇರಿ ಅವರನ್ನು ಮುಜುಗರ ಮತ್ತು ಅವಮಾನಕ್ಕೀಡು ಮಾಡುತ್ತಿದ್ದುದು ಹಾಗೂ ಈ ನಿಯಮಗಳನ್ನು ಈ ಮಹಿಳೆಯರು ಎಂದೂ ಪ್ರಶ್ನಿಸದಿದ್ದುದು, ತಲೆ ತಗ್ಗಿಸಿ ಇವುಗಳನ್ನೆಲ್ಲ ಮೌನವಾಗಿ ನುಂಗಿಕೊಳ್ಳುತ್ತಿದ್ದುದನ್ನು ಕಂಡಿದ್ದ ನನಗೆ ಇವುಗಳ ವಿರುದ್ಧ ಧ್ವನಿ ಎತ್ತಬೇಕು, ಬರಹಗಳ ಮೂಲಕವಾದರೂ ಇವುಗಳನ್ನು ಪ್ರಶ್ನಿಸಬೇಕೆಂದೆನಿಸಿತ್ತಷ್ಟೆ. ಆ ಕೆಲಸವನ್ನಷ್ಟೆ ನಾನು ಮಾಡಿದೆ.

2. ನನ್ನ ಈ ರೀತಿಯ ಚಳವಳಿ ಪರಿಣಾಮಕಾರಿಯಾಗಿದೆಯೆಂದೇ ನಾನು ತಿಳಿದುಕೊಂಡಿದ್ದೇನೆ. 'ಚಂದ್ರಗಿರಿ ತೀರದಲ್ಲಿ' ಎಂಬ ಕಾದಂಬರಿಯಲ್ಲಿ ನಾನು ಎತ್ತಿದ ಪ್ರಶ್ನೆಯನ್ನು ಪ್ರಾರಂಭದಲ್ಲಿ ನಮ್ಮ ಸಮಾಜ 'ನಮ್ಮಲ್ಲಿ ಅಂತಹ ಸಮಸ್ಯೆಯೇ ಇಲ್ಲ'ವೆಂದು ನಿರಾಕರಿಸಿದರೂ ನನ್ನ ಕಾದಂಬರಿ ಪ್ರಕಟವಾದ ಹತ್ತು ವರ್ಷಗಳ ಬಳಿಕ ಲಕ್ನೋದ ಒಂದು ಮುಸ್ಲಿಂ ಸಂಘಟನೆ, ಒಂದೇ ಬಾರಿ ಮೂರು 'ತಲಾಖ್' ಎಂದು ಹೇಳಿ ಓರ್ವನು ತನ್ನ ಹೆಂಡತಿಗೆ ವಿಚ್ಛೇದನ ನೀಡುವುದು ಧರ್ಮಸಮ್ಮತವಲ್ಲ ಎಂದು 'ಫತ್ವಾ' ಹೊರಡಿಸಿತು. ಅದು ಎಷ್ಟರ ಮಟ್ಟಿಗೆ ಅನುಷ್ಠಾನಗೊಂಡಿದೆಯೆಂಬುದು ತಿಳಿಯದು. ಆದರೆ ಆ ಕುರಿತು ಸಮಾಜದಲ್ಲಿ ಒಂದು ಜಾಗೃತಿಯಂತೂ ಮೂಡಿದೆ. ಹಾಗೆಯೇ ನಾನು ಬರಹವನ್ನಾರಂಭಿಸಿದ ಬಳಿಕ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ದೊರೆಯತೊಡಗಿದೆ. ನಮ್ಮ ಸಮಾಜದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಕುರಿತು ಇಪ್ಪತ್ತು ವರ್ಷಗಳ ಹಿಂದೆ ಇದ್ದಂತಹ ಸಮಾಜದ ಧೋರಣೆ ಬದಲಾಗಿದೆ.

3. 70-80ರ ದಶಕದಲ್ಲಿ ಮಹಿಳಾ ಚಳವಳಿಗಾರರಲ್ಲಿ ಇದ್ದ ಉಮೇದು, ಉತ್ಸಾಹ ಇಂದು ಇಲ್ಲವೇ ಇಲ್ಲ ಎನ್ನಲು ಸಾಧ್ಯವಿಲ್ಲ. ಇಂದು ಮಹಿಳೆಯರು ಎಲ್ಲೆಡೆಯಲ್ಲೂ ದುಡಿಯತೊಡಗಿದ್ದಾರೆ. ಮಧ್ಯಮ ವರ್ಗದ ಮಹಿಳೆಯರ ಬದುಕು ಆರ್ಥಿಕವಾಗಿ ಉತ್ತಮಗೊಂಡಿದೆ. ಮಹಿಳಾ ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದವರು ಈ ಮಹಿಳೆಯರು. ಈಗ ಇವರು ಉತ್ಸಾಹ ಕಳೆದುಕೊಂಡಿದ್ದರೆ ಅದಕ್ಕೆ ಕಾರಣ ಅವರ ಈ ಆರ್ಥಿಕ ಪರಿಸ್ಥಿತಿ, ಹಾಗೂ ಅದರಿಂದಾಗಿ ಅವರ ಕೆಲವು ಸಮಸ್ಯೆಗಳಿಗಾದರೂ ಅವರು ಪರಿಹಾರ ಕಂಡುಕೊಂಡಿರಬಹುದೆಂಬುದು ನನ್ನ ಅನಿಸಿಕೆ. ಇದು ತಪ್ಪಾಗಿರಲೂ ಬಹುದು. ಉದಾಹರಣೆಗೆ ಇಪ್ಪತ್ತು, ಮೂವತ್ತು ವರ್ಷಗಳ ಹಿಂದೆ ವಿವಾಹ ವಿಚ್ಛೇದನ ಮತ್ತು ಪುನರ್ವಿವಾಹವೆಂದರೆ ಭಯಪಡುತ್ತಿದ್ದ ಮಹಿಳೆಯರು ಇಂದು ಅದನ್ನೊಂದು ಸವಾಲೆಂದು ಸ್ವೀಕರಿಸಿದ್ದಾರೆ ಹಾಗೂ ತಮಗಿಷ್ಟ ಬಂದ ಹಾದಿಯತ್ತ ಹೊರಳಲು ಧೈರ್ಯ ತೋರುತ್ತಿದ್ದಾರೆ. ಒಂದು ರೀತಿಯಲ್ಲಿ ಇದು ಮಹಿಳಾ ಚಳವಳಿಯ ನೇರ ಪರಿಣಾಮವೂ ಆಗಿರಬಹುದು. ಮಹಿಳಾ ಚಳವಳಿಯಿಂದ ವೇಶ್ಯೆಯರ ಬದುಕುಗಳಲ್ಲೂ ಬದಲಾವಣೆಗಳಾಗಿವೆ. ಸೆಕ್ಸ್ ವರ್ಕರ್ ಎಂಬ ಹೊಸ ಹೆಸರು ಹಾಗೂ ಅವರ ಮಕ್ಕಳಿಗೆ ಸಮಾಜದಲ್ಲಿ ಗೌರವಯುತ ಸ್ಥಾನ ದೊರೆಯುವ ಸಾಧ್ಯತೆಯೂ ಇದೆ. ಇಂತಹ ಚಳವಳಿಗಳು ನಿಂತ ನೀರಾಗದೆ ಇನ್ನಷ್ಟು ಮುಂದುವರಿಯಬೇಕು.

5. ಇಂದಿನ ಕೋಮುವಾದವು ಮಹಿಳೆಯರನ್ನು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಶಾಶ್ವತವಾಗಿ ಉಳಿಯುವಂತೆ ಪ್ರೇರಿಸುತ್ತಿದೆ. ಜಾತಿ, ಧರ್ಮದ ಹೆಸರಿನಲ್ಲಿ ಸಮಾಜವನ್ನು ಒಡೆಯುತ್ತಾ ಮಹಿಳೆಯರು ಒಂದುಗೂಡದಂತೆ ನೋಡಿಕೊಳ್ಳುವ ಒಂದು ಹುನ್ನಾರವೂ ಈ ಕೋಮುವಾದದ ಹಿಂದೆ ಇರಬಹುದೆಂಬ ಅನಿಸಿಕೆ ನನ್ನದು. ಜಾತಿ, ಧರ್ಮದ ಹಂಗಿಲ್ಲದೆ ಪ್ರೇಮ ವಿವಾಹಕ್ಕೆ ಪ್ರೋತ್ಸಾಹ ದೊರೆಯುತ್ತಿದ್ದ ಸಮಾಜದಲ್ಲಿ ಇಂದು ಅನ್ಯ ಜಾತಿಯ ಪುರುಷನನ್ನು ಮದುವೆಯಾದ ಕಾರಣಕ್ಕಾಗಿ ಮಹಿಳೆಯರ ಕೊಲೆ ಮಾಡಲಾಗುತ್ತಿದೆ.

ಕೋಮುವಾದದಿಂದಾಗಿ ಮುಸ್ಲಿಂ ಸಮಾಜದ ಮಹಿಳೆಯರ ಸ್ಥಿತಿ ಮತ್ತಷ್ಟು ಶೋಚನೀಯವಾಗಿದೆ. ಅವರನ್ನು ಮನೆಯ ನಾಲ್ಕು ಗೋಡೆಗಳೊಳಗೆ ಬಂಧಿಸುವ ಪ್ರಯತ್ನ ನಡೆಯುತ್ತಲೇ ಇದೆ. ಶಿಕ್ಷಣದ ಕುರಿತು ಮುಸ್ಲಿಂ ಮಹಿಳೆಯರಲ್ಲಿ ಜಾಗೃತಿ ಮೂಡುತ್ತಿದ್ದಂತೆ, ಹೆಣ್ಣುಮಕ್ಕಳಿಗೆ ಆಧುನಿಕ ಶಿಕ್ಷಣದ ಅಗತ್ಯವಿಲ್ಲ ಎಂಬ ಬೋಧನೆ ಕೆಲವು ಮತೀಯ ಗುಂಪುಗಳಿಂದ ಪ್ರಾರಂಭವಾಗಿ ಅದನ್ನು ಅನುಷ್ಠಾನಕ್ಕೆ ತರಲಾಗಿದೆ. ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣದ ಕುರಿತು ಚಳವಳಿಯೇನೂ ನಡೆದಿರಲಿಲ್ಲ. ಆದರೆ ಕೇರಳದಲ್ಲಿ ವಯಸ್ಕರ ಶಿಕ್ಷಣಕ್ಕೆ ಹಾಗೂ ಹೆಣ್ಣು ಗಂಡುಗಳೆಲ್ಲರ ಶಿಕ್ಷಣಕ್ಕೆ ಆದ್ಯತೆ ನೀಡಿ ಆ ದಿಕ್ಕಿನಲ್ಲಿ ಸರಕಾರವೇ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದ ಕಾರಣ ಅಲ್ಲಿ ನಿರಕ್ಷರತೆ ಮಾಯವಾಗಿದೆ. ಆದರೆ ಈಗ ಅಲ್ಲಿಯೂ ಹೆಣ್ಣುಮಕ್ಕಳು ಓದು ಬರಹ ಮಾತ್ರ ಕಲಿತರೆ ಸಾಕು ಎಂಬ ಮತೀಯ ಗುಂಪುಗಳ ಬೋಧನೆ ಸಮಾಜದಲ್ಲಿ ಹರಡಲಾರಂಭಿಸಿದೆ. ಮಹಿಳೆಯರು ಒಂದು ಹೆಜ್ಜೆ ಮುಂದಿಟ್ಟರೆ ಹತ್ತು ಹೆಜ್ಜೆ ಹಿಂದಕ್ಕೆಳೆಯಲು ಪುರುಷ ಪ್ರಧಾನ ವ್ಯವಸ್ಥೆ ತಂತ್ರಗಳನ್ನು ರೂಪಿಸುತ್ತದೆ ತಾನೇ?

7. ಹೌದು ಇದಕ್ಕೆ ಹಲವು ಕಾರಣಗಳಿರಬಹುದು. ಬಹಳ ಮುಖ್ಯವಾದ ಒಂದು ಕಾರಣವನ್ನು ಗುರುತಿಸಬಹುದಾದರೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗಿದ್ದ ಸ್ಥಾನವೇ ಒಂದು ಕಾರಣವೆನ್ನಬಹುದು. ಈ ವ್ಯವಸ್ಥೆಯಲ್ಲಿ ಗಂಡ ಯಜಮಾನನಾದರೆ ಹೆಂಡತಿ ಆತನ ಸೇವೆ ಮಾಡಬೇಕಾದವಳು ತಾನೇ? ಇಂದಿಗೂ ನಮ್ಮ ಮಹಿಳೆಯರು ಗಂಡನನ್ನು 'ನಮ್ಮ ಯಜಮಾನರು' ಎಂದೇ ಹೇಳುತ್ತಿದ್ದಾರಲ್ಲ? ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಮಹಿಳೆಯರು ಶಿಕ್ಷಣ ಪಡೆದು ಗಂಡಸರಂತೆಯೇ ದುಡಿಯಲಾರಂಭಿಸಿ ಆರ್ಥಿಕವಾಗಿ ಮೇಲೇರಿದಾಗ ಪುರುಷರಿಗೆ ಈ ಹೆಂಡತಿಯರಿಂದ ಮೊದಲಿನಂತೆ ಸೇವೆ

ದೊರೆಯುತ್ತಿಲ್ಲ. ಇಂದು ಆಕೆ ಸಂಗಾತಿಯಾಗಿರಬಯಸುತ್ತಾಳೆಯೇ ಹೊರತು ಗುಲಾಮಳಾಗಿರಲೊಲ್ಲಳು. ಗಂಡಿಗೆ ಹೆಣ್ಣಿನ ಮೇಲಿನ ಈ ಹಿಡಿತ ಸಡಿಲವಾದದ್ದು ಸಹಿಸಲಸಾಧ್ಯವಾಗಿದೆ. ಹಾಗೆಯೇ ನಮ್ಮ ಸಂವಿಧಾನವೂ ಒಂದು ವಿಧದಲ್ಲಿ ಮಹಿಳೆಯರ ಪರವಾಗಿದೆ ಯೆನ್ನಬಹುದು. ಕೌಟುಂಬಿಕ ಬದುಕಿನಲ್ಲಿ ಆಕೆಗೆ ಬೇಕಾದ ರಕ್ಷಣೆಗೆ ಕಾನೂನು ಅವಕಾಶ ನೀಡಿದೆ. ಇದಲ್ಲದೆ ಪುರುಷರು ದುಡಿಯುವ ಎಲ್ಲಾ ಕ್ಷೇತ್ರಗಳಿಗೂ ಮಹಿಳೆಯರು ಲಗ್ಗೆ ಇಡುತ್ತಿದ್ದಾರೆ. ರಕ್ಷಣಾ ಇಲಾಖೆ, ಪೊಲೀಸ್ ಇಲಾಖೆ, ಆಡಳಿತ ಸೇವೆ ಎಂದು ಎಲ್ಲೆಡೆ ಗಳಲ್ಲೂ ಮಹಿಳೆಯರು ನುಗ್ಗುತ್ತಿದ್ದಾರೆ. ಪುರುಷ ಪ್ರಾಧಾನ್ಯವನ್ನು ಮಹಿಳೆಯರು ನಿರಾಕರಿಸಲಾರಂಭಿಸಿದ್ದಾರೆ. ಇಂದು ವಿವಾಹ ವಿಚ್ಛೇದನ, ಪುನರ್ವಿವಾಹ ಇವುಗಳೆಲ್ಲವೂ ಹಿಂದಿನಂತೆ ಅಪರೂಪ ವೇನಲ್ಲ; ಕುಟುಂಬದ ಮರ್ಯಾದೆಯ ಪ್ರಶ್ನೆಯಾಗಿಯೂ ಉಳಿದಿಲ್ಲ. ಮಹಿಳೆಯರಿಗೆ ದೊರಕಿದ ಈ ಸ್ವಾತಂತ್ರ್ಯವೇ ಪುರುಷರಿಗೆ ನುಂಗಲಾರದ ತುತ್ತಾಗಿದೆ ಎಂಬುದು ನನ್ನ ಅಭಿಪ್ರಾಯ.

9. ಇಲ್ಲ.
10. ಈ ಕುರಿತು ಈಗಾಗಲೇ ಮೇಲೆ ಹೇಳಿದೆನೆಂದುಕೊಂಡಿದ್ದೇನೆ.

❑



# ನಾವೆಲ್ಲ ಒಂದಾಗಿ ಹೋರಾಟ ರೂಪಿಸುವ ಸಂಕಲ್ಪ ಮಾಡಬೇಕಿದೆ

***ಮೀರಾ ನಾಯಕ,*** ಸಮತಾ ವೇದಿಕೆ, ಮೈಸೂರು

1. ಅಸಮಾನತೆಯ ವಿರುದ್ಧದ, ದೌರ್ಜನ್ಯದ ವಿರುದ್ಧದ ಎಲ್ಲಾ ಪ್ರಗತಿಪರ ಚಳವಳಿಗಳಲ್ಲಿಯೂ, ಭಾಷಾ ಚಳವಳಿಗಳಲ್ಲಿಯೂ ಕಳೆದ ನಾಲ್ವತ್ನಾಲ್ಕು ವರ್ಷಗಳಿಂದ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದೇನೆ. ಅದರಲ್ಲಿಯೂ ಮಹಿಳಾಪರ ಹೋರಾಟ, ಚಳವಳಿಗಳಲ್ಲಿ ನನ್ನ ಹೆಚ್ಚು ಕಾಲ, ಶ್ರಮ, ಹಣ ವಿನಿಯೋಗವಾಗಿದೆ. ಈ ದೇಶದಲ್ಲಿ ಹೆಣ್ಣಾಗಿ ಹುಟ್ಟಿದ ನಾನು ಮಹಿಳಾಪರ ಹೋರಾಟದಲ್ಲಿ ತೊಡಗಿಸಿಕೊಳ್ಳುವುದು ನನ್ನ ಕರ್ತವ್ಯವೆಂದು ಭಾವಿಸುತ್ತ ಬಂದಿದ್ದೇನೆ. ಅದರಿಂದ ನನ್ನ ಜೀವನ ಸದುಪಯೋಗವಾಗುತ್ತಿದೆ ಎಂದು ಅಂದುಕೊಳ್ಳುತ್ತೇನೆ. ನಮ್ಮ ಚಳವಳಿ, ಹೋರಾಟಗಳಿಂದ ಯಾರಾದರೂ ಒಬ್ಬ ಮಹಿಳೆಗೆ ಅಥವಾ ಮಹಿಳಾ ಸಮುದಾಯಕ್ಕೆ ಉಪಯೋಗವಾದಾಗ ನಾನು ಪಡುವ ಸಂತೋಷಕ್ಕೆ ಸಮನಾದ ಸಂತೋಷ ನನಗೆ ಬೇರೆ ಯಾವುದರಿಂದಲೂ ಆಗುವುದಿಲ್ಲ.

   ಮೈಸೂರಿನ 'ಸಮತಾವೇದಿಕೆ' ವಿದ್ಯಾವಂತ ಮತ್ತು ಪ್ರಜ್ಞಾವಂತ ಮಹಿಳೆಯರ ವೇದಿಕೆ. ಅದು ಪುರುಷ ಮೇಲು, ಸ್ತ್ರೀ ಕೀಳು ಎಂಬ ಲಿಂಗಭೇದ ನೀತಿಯನ್ನು ವಿರೋಧಿಸುತ್ತದೆ; ಸ್ತ್ರೀ-ಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತದೆ: ಅದನ್ನು ಪ್ರಚಾರ ಮಾಡುತ್ತದೆ. ಅದು ಕಳೆದ ಮೂವತ್ತು ವರ್ಷಗಳಿಂದ ಆ ವಿಷಯವಾಗಿ ಚಳವಳಿ, ಹೋರಾಟ, ಅರಿವಿನ ಕಾರ್ಯಕ್ರಮಗಳನ್ನು ನಡೆಸುತ್ತಲೇ ಬಂದಿದೆ. 'ಸಮತಾವೇದಿಕೆ'ಯ ಸ್ಥಾಪಕ ಸದಸ್ಯೆಯೂ ಆಗಿದ್ದು ಈ ವರೆಗೂ ವೇದಿಕೆಯ ಸಕ್ರಿಯ ಸದಸ್ಯೆಯೂ ಆಗಿರುವವರಲ್ಲಿ ನಾನೂ ಒಬ್ಬಳು.

   1978ರಲ್ಲಿ ಪ್ರಾರಂಭವಾದ 'ಸಮತಾವೇದಿಕೆ' ಕಳೆದ ಇಪ್ಪತ್ತೈದು ವರ್ಷಗಳಿಂದ ನಮ್ಮ ಮನೆಯನ್ನೇ ವೇದಿಕೆಯ ಸಂಪರ್ಕ ವಿಳಾಸವಾಗಿ ಮಾಡಿಕೊಂಡಿದೆ. ಪ್ರತಿ ಬುಧವಾರ ಸಂಜೆ ಆರು ಘಂಟೆಗೆ ವೇದಿಕೆಯ ಸದಸ್ಯೆಯರು ಇಲ್ಲಿಯೇ ಸಭೆ ಸೇರುತ್ತೇವೆ. ತಿಂಗಳ ಮೊದಲ ಶನಿವಾರವೂ ಸೇರುತ್ತೇವೆ. ಮಹಿಳೆಯರ ಸಮಸ್ಯೆಗಳ ಬಗ್ಗೆ ಚಿಂತನೆ, ಚರ್ಚೆ, ಹೋರಾಟದ ಕಾರ್ಯಕ್ರಮ ರೂಪಿಸುವುದು ಅಲ್ಲಿಯೇ ನಡೆಯುತ್ತದೆ. ಮೊದ ಮೊದಲು ಮನೆಯ ಗರಾಜಿನಲ್ಲಿ ನಡೆಯುತ್ತಿದ್ದ ಸಭೆಗಳು ಎಷ್ಟೋ ವರ್ಷಗಳಿಂದ ಮನೆಯ 'ಹಾಲ್'ನಲ್ಲಿಯೇ ನಡೆಯುತ್ತಿವೆ.

   ಮಹಿಳೆಯರಿಗೆ ಯಾರಿಗೇ ಆಗಲಿ ಅವರಿಗೆ ಎದುರಾಗಿರುವ ಸಮಸ್ಯೆಯ ಬಗ್ಗೆ ಎಲ್ಲಾ ವಿವರಗಳನ್ನು ತಿಳಿದುಕೊಂಡು, ಅವರ ಮೇಲಿನ ದೌರ್ಜನ್ಯಗಳ ವಿರುದ್ಧ ಕಾರ್ಯಕ್ರಮ ರೂಪಿಸುತ್ತೇವೆ, ನ್ಯಾಯ ದೊರಕಿಸಿಕೊಡಲು ನಮ್ಮಿಂದಾಗುವ ಸಹಾಯ ಮತ್ತು ಪ್ರಯತ್ನ ಮಾಡುತ್ತೇವೆ. ಅದರಲ್ಲಿ ನಾನು ನಿರಂತರವಾಗಿ ಕ್ರಿಯಾಶೀಲವಾಗಿ ಭಾಗವಹಿಸುತ್ತ ಬಂದಿದ್ದೇನೆ.

2. ಮಹಿಳಾ ಹೋರಾಟ ಸಮಾನತೆಗಾಗಿ ಸಮಾನ ಅವಕಾಶಗಳಿಗಾಗಿ ನಡೆಯುತ್ತಿರುವ ಹೋರಾಟ. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಯಾವುದರಲ್ಲಿಯೂ ಸಮಾನಾವಕಾಶ ಮಹಿಳೆಯರಿಗೆ ಇನ್ನೂ ಕನಸಾಗಿಯೇ ಇದೆ. 90%ಗಿಂತ ಹೆಚ್ಚು ಅವಕಾಶಗಳು ಪುರುಷರ ಪಾಲಾಗಿಯೇ ಇವೆ. 10% ಆದರೂ ಆಗಿರುವುದಕ್ಕೆ ಮಹಿಳಾ ಚಳವಳಿಗಳೂ ಕಾರಣವಾಗಿವೆ ಎನ್ನಬಹುದು. ಆದರೂ ಮಹಿಳಾ ಚಳವಳಿ ಖಂಡಿತ ಆಗಬೇಕಾದಷ್ಟು ಪರಿಣಾಮಕಾರಿಯಾಗಿಲ್ಲ. ದೇಶವು ಸ್ವಾತಂತ್ರ್ಯ ಪಡೆದು ಅರವತ್ತೆರಡು ವರ್ಷಗಳಾದವು. ಭಾರತ ಈ ಕಾಲಾವಧಿಯಲ್ಲಿ ಒಬ್ಬ ಮಹಿಳಾ ಪ್ರಧಾನಿ, ಒಬ್ಬ ರಾಷ್ಟ್ರಾಧ್ಯಕ್ಷರನ್ನು ಮಾತ್ರ ಕಂಡಿದೆ. ಹಿಂದಿನ ಕಾಲದ ಕಿತ್ತೂರ ಚೆನ್ನಮ್ಮ, ಝಾನ್ಸಿ ಲಕ್ಷ್ಮೀಬಾಯಿ, ಸಂತ ಮೀರಾಬಾಯಿ, ಶರಣೆ ಅಕ್ಕಮಹಾದೇವಿಯವರ ಹೆಸರು ಹೇಳಿ, ಇಂದಿನ ಕಾಲದ ಕಲ್ಪನಾ ಚಾವ್ಲಾ, ಸುನೀತಾ ವಿಲಿಯಮ್ಸ್, ಕಿರಣ್ ಬೇಡಿಯಂಥವರ ಧೈರ್ಯ, ಸಾಧನೆಗಳನ್ನು ಉದಾಹರಿಸಿ ಭಾರತದ ಮಹಿಳೆಯರು ಮುಂದುವರಿದಿದ್ದಾರೆ ಎಂದು ಹೇಳುವುದರಲ್ಲಿ ಅರ್ಥವಿಲ್ಲ.

   ಶ್ರೀಮತಿ ಮೋಟಮ್ಮನವರು ರಾಜ್ಯದ ಸಮಾಜಕಲ್ಯಾಣ

ಸಚಿವೆಯಾಗಿದ್ದಾಗ ಮಹಿಳಾಜಾಗೃತಿಗಾಗಿ ಮಹಿಳಾ ಸ್ವಸಹಾಯ ಸಂಘ, ಸ್ತ್ರೀ ಶಕ್ತಿ ಸಂಘಟನೆಗಳು ಪ್ರಾರಂಭವಾದವು. ಅದು ಒಳ್ಳೆಯ ಬೆಳವಣಿಗೆ ಎಂದುಕೊಂಡಿದ್ದೆವು. ಆದರೆ ಅವು ಇಂದು ಕೇವಲ ಬಡ್ಡಿ ವ್ಯವಹಾರ ಮಾಡುವ ಸಂಸ್ಥೆಗಳಾಗಿ, ಹಣ ಕೊಟ್ಟರೆ ರಾಜಕೀಯ ಪಕ್ಷಗಳವರ ಸಭೆ, ಸಮಾರಂಭಗಳಿಗೆ ಜನಪೂರೈಸುವ ಬಾಡಿಗೆ ಸಂಸ್ಥೆಗಳು ಎಂಬಂತಾಗಿವೆ. ರಾಜಕೀಯ ಸಮಾರಂಭಗಳಿಗೆ ಕುರ್ಚಿ, ಮೈಕು ಮುಂತಾದವುಗಳನ್ನು ಬಾಡಿಗೆಗೆ ತರಿಸಬಹುದಾದಂತೆ ಇಂಥ ಮಹಿಳಾ ಸಂಘಟನೆಗಳ ಸದಸ್ಯೆಯರೂ ಸಭೆ ಚಂದಗಾಣಿಸಲು ಪೂರೈಕೆಯಾಗುವ ವಸ್ತುಗಳು ಎಂಬಂತೆ ಆಗುತ್ತಿದ್ದಾರೆ. ಕಾರ್ಯಾಂಗ, ಶಾಸಕಾಂಗಗಳು ಪುರುಷ ಪ್ರಾಧಾನ್ಯದಲ್ಲಿ ಇರುವವರೆಗೆ ಮಹಿಳೆಯರು ನಿಜವಾದ ಅರ್ಥದಲ್ಲಿ ಫಲಾನುಭವಿಗಳಾಗಲು ಸಾಧ್ಯವಿಲ್ಲ. ಅಲ್ಲಿಷ್ಟು ಇಲ್ಲಿಷ್ಟು ಕೊಟ್ಟಂತೆ ಮಾಡಿ ಕೇವಲ ಸವಲತ್ತುಗಳಿಗಾಗಿ ಅಂಗಲಾಚುತ್ತಿರುವ ಮಹಿಳೆಯರ ಮಟ್ಟಿಗೆ ಒಂದು ಮಟ್ಟದ ತೃಪ್ತಿಯನ್ನು ಉಂಟು ಮಾಡಬಹುದು. ಸಮಾನತೆ, ಸ್ವಾತಂತ್ರ್ಯದ ಮೌಲ್ಯಗಳ ನಿಜವಾದ ಬೆಲೆಗೊತ್ತಿರುವ ಪ್ರಜ್ಞಾವಂತ, ಪ್ರಗತಿಪರ ಮಹಿಳೆಯರಿಗೆ ಇವೆಲ್ಲ ನೀರು ಮಜ್ಜಿಗೆ ಸಮಾರಾಧನೆ ಎಂದೇ ಅನಿಸುತ್ತದೆ. ಮಹಿಳೆಯರಲ್ಲಿ ಯಾಚಕ ಪ್ರಜ್ಞೆ ಮೊದಲು ತೊಲಗಬೇಕು. ಪುರುಷರ ಕರುಣೆ ಔದಾರ್ಯಗಳಿಂದಾಗಿ ಫಲಾನುಭವಿಗಳಾಗುವ ಮನೋಧರ್ಮ ಬಿಟ್ಟು ಮಹಿಳೆಯರಿಗೆ ನ್ಯಾಯವಾಗಿ ಸಲ್ಲಬೇಕಾದ ಸಂವಿಧಾನ ದತ್ತ ಹಕ್ಕುಗಳಿಗಾಗಿ ಪ್ರಜಾಸತ್ತಾತ್ಮಕ ವಿಧಾನದಲ್ಲಿ ಮಹಿಳೆಯರೂ ಪದವೀಧರ ಮಹಿಳೆಯರೂ ಇನ್ನೂ ಪ್ರಜ್ಞಾವಂತರಾಗದೆ, ಪ್ರಗತಿಪರ ಚಿಂತನೆಗೆ ಮನಸ್ಸನ್ನು ತೆರೆದುಕೊಂಡವರಾಗದೆ ಮಹಿಳಾ ಹೋರಾಟ ಪರಿಣಾಮಕಾರಿಯಾಗುವುದಿಲ್ಲ.

3. 1970–80ರ ದಶಕದಲ್ಲಿ ವಿದ್ಯಾವಂತ ಮಹಿಳೆಯರು ಸ್ವಯಂ ಆಸಕ್ತಿಯಿಂದ, ಸ್ವಂತ ವ್ಯಕ್ತಿತ್ವ ಬೆಳೆಸಿಕೊಳ್ಳುವ ಬಗ್ಗೆ ಪ್ರಜ್ಞಾವಂತರಾಗಿ ಅನೇಕ ಅಡೆತಡೆಗಳ ಮಧ್ಯೆಯೂ ಹೋರಾಟದ ಮನೋಭಾವ ಬೆಳೆಸಿಕೊಂಡರು. ಅವರಿಗೆ ಸಮಾನತೆ, ಸ್ವಾತಂತ್ರ್ಯದ ಆದರ್ಶ, ಕನಸುಗಳಿದ್ದವು. ಅವರು ಸಮಾಜದ ಆಗು ಹೋಗುಗಳು ತಮಗೂ ಸಂಬಂಧಿಸಿದ್ದೆಂಬ ಭಾವನೆಯುಳ್ಳವರಾಗಿದ್ದರು. ಕರ್ನಾಟಕದ ಮಟ್ಟಿಗೆ ಶೋಷಿತ ವರ್ಗಗಳ, ಹಿಂದುಳಿದವರ ಪರವಾದ ಅಲೆ ರಾಜಕೀಯ ಕ್ಷೇತ್ರದಲ್ಲಿ ಮುಖ್ಯಮಂತ್ರಿ ದೇವರಾಜ ಅರಸು ಅವರ ಮೂಲಕ ಕಾಣಿಸಿಕೊಂಡಿತು. ಅಂಬೇಡ್ಕರ್, ಲೋಹಿಯಾ ವಾದಗಳ ಪ್ರಭಾವ ದಿಂದಾಗಿ ಶೋಷಿತ ಜಾತಿ ವರ್ಗಗಳವರಲ್ಲಿ, ಹಿಂದುಳಿದವರಲ್ಲಿ, ಅಲ್ಪ ಸಂಖ್ಯಾತರಲ್ಲಿ, ಮಹಿಳೆಯರಲ್ಲಿ ಸಮಾನತೆ ಕುರಿತ ಚಿಂತನೆ, ಹೋರಾಟ ಕುರಿತ ಜಾಗೃತಿ ಮೂಡಿತು. ಸಾಹಿತ್ಯ ಕ್ಷೇತ್ರದಲ್ಲಿಯೂ ಜನಪರ ಚಿಂತನೆಯ ಗಾಳಿ ಬೀಸಿತು. ಇಂದಿರಾಗಾಂಧಿ ಪ್ರಧಾನಿಯಾಗಿದ್ದ ಕಾಲ ಅದು. ಮಹಿಳೆ ಪ್ರಧಾನಿಯಾಗಿದ್ದೊಂದು ಸ್ವಲ್ಪಮಟ್ಟಿಗೆ ಮಹಿಳೆಯರಲ್ಲಿ ಆತ್ಮವಿಶ್ವಾಸ ಬೆಳೆಸುವುದಕ್ಕೆ ಕಾರಣವಾಗಿರಲೂ ಬಹುದು. ಇಂದಿರಾಗಾಂಧಿ ರಾಜಕೀಯ ತಂತ್ರಗಾರಿಕೆಯ ಭಾಗವಾಗಿ ಶೋಷಿತಪರ, ಹಿಂದುಳಿದವರ ಪರ, ಮಹಿಳೆಯರ ಪರ ಎಂದು ತೋರಿಸಿಕೊಂಡರೇ ಹೊರತು ತಮ್ಮ ಅಧಿಕಾರ ಭದ್ರಪಡಿಸಿಕೊಳ್ಳುವ ಬಗ್ಗೆ ಅವರಿಗಿದ್ದ ಆಸಕ್ತಿ ಅವರ ಘೋಷಣೆಗಳ ಬಗ್ಗೆ ಇರಲಿಲ್ಲ. ಆದರೂ ಅದರಿಂದ ಸಮಾನತಾ ಹೋರಾಟಕ್ಕೆ ಒಂದಷ್ಟು ಪುಷ್ಟಿ ದೊರೆತದ್ದು ನಿಜ. 1930ರ ದಶಕದ ಮಧ್ಯ ಭಾಗದಲ್ಲಿ ಸ್ವಂತದ, ಪ್ರಧಾನಿ ಕುರ್ಚಿ ರಕ್ಷಣೆಗಾಗಿ ತುರ್ತುಪರಿಸ್ಥಿತಿ ಹೇರಿದಾಗ ಇಂದಿರಾಗಾಂಧಿಯವರ ಬಣ್ಣ ಬಯಲಾಯಿತು. ಅದೇ ಸಂದರ್ಭದಲ್ಲಿ ಜಯಪ್ರಕಾಶ ನಾರಾಯಣ ಅವರ ನಾಯಕತ್ವದಲ್ಲಿ ನಡೆದ ಹೋರಾಟದಿಂದ ಹೊಸ ಜಾಗೃತಿ ಮೂಡುವುದಕ್ಕೆ ಕಾರಣವಾಯಿತು. ಮುಖ್ಯವಾಗಿ ಅಂಬೇಡ್ಕರ್, ಲೋಹಿಯಾ, ಜೆ.ಪಿ. ಅವರ ಚಿಂತನೆಗಳ ಪ್ರಭಾವ 1970–80ರ ದಶಕದಲ್ಲಿ ಉಂಟಾಗಿದ್ದುದು ವಿದ್ಯಾವಂತ ಮಹಿಳೆಯರಲ್ಲಿಯೂ ಹೊಸ ಜಾಗೃತಿ ಮೂಡಿಸುವುದಕ್ಕೆ ಕಾರಣವಾಯಿತೆನ್ನಬಹುದು.

ತುರ್ತುಪರಿಸ್ಥಿತಿ ವಿರೋಧಿಸುವ, ಇಂದಿರಾಗಾಂಧಿಯವರನ್ನು ಪ್ರಧಾನಿಪಟ್ಟದಿಂದ ಇಳಿಸುವ ಹೋರಾಟದಲ್ಲಿ ಕೋಮುವಾದಿ ಪಕ್ಷವಾಗಿದ್ದ ಜನಸಂಘವನ್ನು ಜೊತೆ ಸೇರಿಸಿಕೊಂಡು ಜೆ.ಪಿ. ಹೋರಾಟ ಮಾಡಿದ್ದರು. ಅದರಿಂದಾಗಿ ಆ ಕೋಮುವಾದಿ ಪಕ್ಷಕ್ಕೆ ಸಲ್ಲದ ಸ್ಥಾನ, ಗೌರವ ದೊರೆತಂತಾಯಿತು. ಅನಂತರದ ಕಾಲದಲ್ಲಿ ಅದರ ಪೀಳಿಗೆ ಪ್ರಮಾಣ ಮೀರಿ ಬೆಳೆಯುತ್ತಿರುವುದಕ್ಕೂ ಅದು ಕಾರಣವಾಯಿತು. ಕೋಮು ರಾಜಕೀಯ ಪ್ರಬಲವಾಗುತ್ತಿದ್ದಂತೆ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಯ ಆಶಯಗಳ ಮೇಲೆ ಆಕ್ರಮಣ ಹೆಚ್ಚಾಗುತ್ತ ಹೋಗುತ್ತಿದೆ. ಈ ಅಪಾಯಕಾರಿ ಬೆಳವಣಿಗೆ ಪ್ರಜಾಪ್ರಭುತ್ವ ವ್ಯವಸ್ಥೆಯನ್ನೂ ದುರ್ಬಲಗೊಳಿಸುತ್ತಿದೆ. ಧರ್ಮ – ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರ ಸ್ವಾತಂತ್ರ್ಯವನ್ನು ದಮನ ಮಾಡುತ್ತಿದೆ. ಈ ಸವಾಲನ್ನು ಮಹಿಳೆಯರು ಎದುರಿಸಬೇಕಾಗಿದೆ. ಈವರೆಗಿನ ಮಹಿಳಾ ಹೋರಾಟಕ್ಕಿಂತ ಹೆಚ್ಚು ಧೈರ್ಯ, ಸಾಹಸ ಮನೋಧರ್ಮದಿಂದ ಮಹಿಳೆಯರು ಹೋರಾಟ ರೂಪಿಸಿಕೊಳ್ಳಬೇಕಾಗಿದೆ. ಇದು ಮಹಿಳಾ ಚಳವಳಿಗಳಿಗೆ, ಹೋರಾಟಗಳಿಗೆ ಅಗ್ನಿಪರೀಕ್ಷೆಯ ಕಾಲ.

4. ಹಿಂದೆ ಮಹಿಳೆ ಸಾಮಾನ್ಯವಾಗಿ ಪುರುಷನ ಭೋಗದ ವಸ್ತು, ಅಡಿಯಾಳು, ಮಕ್ಕಳನ್ನು ಹೆರುವ ಯಂತ್ರ, ಸಂಬಳವಿಲ್ಲದೆ ದುಡಿಯುವ ಮನೆಗೂಲಿ ಅಥವಾ ದಿನಗೂಲಿಯಾಗಿದ್ದಳು. ಮಹಿಳೆಗೆಂದೆ ಸೃಷ್ಟಿಸಿದ ಸ್ಥಾನಮಾನಗಳು ಎರಡೇಎರಡು ಎಂಬಂತಿದ್ದವು. ಒಂದು, ಗೃಹಿಣಿ; ಇನ್ನೊಂದು, ವೇಶ್ಯೆ. ಹೆಣ್ಣಿನಮೇಲೆ ಆಗುವ ಎಲ್ಲಾ ರೀತಿಯ ದೌರ್ಜನ್ಯಗಳೂ ಸಹಜ ಎಂಬ ರೀತಿಯಲ್ಲಿ ಒಪ್ಪಿಕೊಂಡೊ, ತಲೆಬಾಗಿ ಸಹಿಸಿಕೊಂಡೊ ಸಾಗಬೇಕಾಗಿತ್ತು. ತಾಳ್ಮೆಯ ಜೀವ, ಕ್ಷಮಯಾಧರಿತ್ರೀ ಅಂದರೆ ಭೂಮಿತಾಯಿಯಂತೆ ಕ್ಷಮಿಸುವ ಗುಣಶೀಲೆ, ಕರುಣಾಮೂರ್ತಿ, ತಾಯಿಯಾಗಿ ದೇವತೆ ಎಂದೆಲ್ಲಾ ಸಾರ್ವತ್ರಿಕ ಪ್ರಮಾಣ ಪತ್ರವೇ ಮಹಿಳೆ ಜೀವನದುದ್ದಕ್ಕೂ ದುಡಿದು ಪಡೆದ ಆಸ್ತಿಯಾಗಿತ್ತು. ಸಾರ್ವಜನಿಕ ಕ್ಷೇತ್ರದಲ್ಲಿ ದುಡಿಮೆ ಮಾಡಿದರೆ ಸಂಬಳದಲ್ಲಿಯೂ, ಕೂಲಿಯಲ್ಲಿಯೂ ತಾರತಮ್ಯ ಅನುಭವಿಸಬೇಕಿತ್ತು. ಬ್ಯಾಂಕುಗಳೂ ಹಣ ಉಳಿತಾಯ ಯೋಜನೆಯ ಜಾಹಿರಾತಿನಲ್ಲಿ "ಮಗನ ಓದಿಗೆ, ಮಗಳ ಮದುವೆಗೆ" ಎಂದೇ ಹೇಳುತ್ತಿದ್ದವು. ಅಂಥ ಜಾಹಿರಾತನ್ನು ಮೈಸೂರಿನ ಸ್ಟೇಟ್ ಬ್ಯಾಂಕೊಂದರಲ್ಲಿ ಹಾಕಿದ್ದಾಗ ನಾನೇ ಸ್ವತಃ ಪ್ರತಿಭಟಿಸಿ ತೆಗೆಸಿಹಾಕಿದ್ದೆ. ಸತಿಸಹಗಮನ ಪದ್ಧತಿಯಿಂದ ಪ್ರಾರಂಭವಾದ ಧರ್ಮ ಸಂಪ್ರದಾಯಗಳ ಹೆಸರಿನಲ್ಲಿ ನಡೆಯುತ್ತ ಬಂದ ಪೈಶಾಚಿಕ ಕೃತ್ಯಗಳು, ವರದಕ್ಷಿಣೆ ಕೊಲೆ, ಅತ್ಯಾಚಾರಗಳಂಥ ವಿವಿಧ ಬಗೆಯ ದೌರ್ಜನ್ಯಗಳು ನಡೆಯುತ್ತಲೇ ಬಂದಿವೆ. ಕೌಟುಂಬಿಕ ಹಿಂಸೆಯ ಜೊತೆಗೆ ಕೆಲಸ ಮಾಡುವ ಕಛೇರಿಗಳಲ್ಲಿಯೂ ಮಹಿಳೆ ಹಿಂಸೆ ಅನುಭವಿಸುವಂಥ ಸ್ಥಿತಿ ಇದೆ. ಹೆಣ್ಣು ಹುಟ್ಟುವುದನ್ನೇ ತಡೆಯುವ ಭ್ರೂಣಹತ್ಯೆಯಂಥ ಪಾತಕಗಳೂ ನಡೆಯುತ್ತಿವೆ.

ಹಿಂದೆ ಅಡಿಗೆಮನೆಗೆ ಮಾತ್ರ ಸೀಮಿತವಾಗಿದ್ದ ಹೆಣ್ಣಿನ ಕಾರ್ಯಕ್ಷೇತ್ರ ವೇನೊ ನಿಧಾನವಾಗಿ ವಿಸ್ತಾರವಾಗುತ್ತಾ ಬಂದಿರುವುದೂ ಸುಳ್ಳಲ್ಲ. ಆದರೆ ಅದರ ಜೊತೆಗೆ ಬೇರೆ ಬೇರೆ ರೀತಿಯ ಸಮಸ್ಯೆಗಳು ಮಹಿಳೆಯರನ್ನು ಸುತ್ತಿಕೊಳ್ಳುತ್ತಿವೆ. ಮನೆಯಲ್ಲಿಯೂ ದುಡಿಯಬೇಕು, ಹೊರಗೂ ದುಡಿಯಬೇಕು ಹೀಗೆ ದುಪ್ಪಟ್ಟು ಕೆಲಸದ ಭಾರ ಹೊತ್ತು ನಿಭಾಯಿಸಬೇಕಾದಂಥ ಪರಿಸ್ಥಿತಿ ಉಂಟಾಗಿದೆ. ಮಹಿಳೆ ದುಡಿದು ಗಳಿಸಿದ ಹಣದ ವಿನಿಯೋಗ ಉಳಿತಾಯದ ಬಗ್ಗೆ ಆಕೆ ತೀರ್ಮಾನ ಕೈಕೊಳ್ಳುವುದಕ್ಕೆ ಬಿಡದಂಥ ಕೌಟುಂಬಿಕ ವಾತಾವರಣ ಇನ್ನೂ ಇದೆ. ಯು.ಎನ್.ಓ ರಿಪೋರ್ಟ್ ಪ್ರಕಾರ ಜಗತ್ತಿನ ಒಟ್ಟೂ ಕೆಲಸದ 2/3ರಷ್ಟು ಭಾಗವನ್ನು ಜನಸಂಖ್ಯೆಯ ಅರ್ಧ ಇರುವ ಮಹಿಳೆಯರೇ ಮಾಡುತ್ತಾರೆ. ಉತ್ಪನ್ನದಲ್ಲಿ 1/10ನೆಯ ಭಾಗ ಮಹಿಳೆಯರ ದುಡಿಮೆಯದು. ಆದರೆ ಅವರದೆಂಬ ಆಸ್ತಿ 1/100ರಷ್ಟು ಮಾತ್ರ ಆಗಿದೆ. ಒಟ್ಟಿನಲ್ಲಿ ಮಹಿಳೆಯ ಶೋಷಣೆ ತಪ್ಪಿಲ್ಲ. ಬೇರೆ ಬೇರೆ ವಿಧಾನಗಳಲ್ಲಿ ಆಗುತ್ತಲೇ ಇದೆ.

5. ಇಂದು ಕೋಮುವಾದ ಮಾತ್ರವಲ್ಲ ಜಾತಿವಾದವೂ ಅಬ್ಬರಿಸುತ್ತ ಬೆಳೆಯುತ್ತಲಿದೆ. ಎರಡೂ ಬೆಳವಣಿಗೆಗಳು ನಮ್ಮ 'ಸೋಷಿಯಲಿಸ್ಟ್ ಸೆಕ್ಯುಲರ್' ಪ್ರಜಾಪ್ರಭುತ್ವಕ್ಕೆ ಮಾರಕವಾಗಿವೆ. ಪ್ರತಿಯೊಂದು ಜಾತಿಯೂ ಚಿಕ್ಕದು ದೊಡ್ಡದು ಎಂಬ ಭೇದವಿಲ್ಲದೆ ಸಂಘಟಿತ ವಾಗಿದೆ; ಆಗುತ್ತಲಿದೆ. ಯಾವ ಜಾತಿ ಶ್ರೇಣೀಕರಣ ವ್ಯವಸ್ಥೆ ಮಹಿಳೆ ಯರಿಗೆ, ದಲಿತಾದಿಗಳಿಗೆ ದೊಡ್ಡ ಬಂಧನವಾಗಿತ್ತೊ ಅದು ಸ್ವಲ್ಪ ಬಣ್ಣ ಬದಲಾಯಿಸಿಕೊಂಡು ಮತ್ತೆ ಬಲಶಾಲಿಯಾಗುತ್ತಲಿದೆ. ಧರ್ಮ, ಜಾತಿ ಹೆಸರಿನಲ್ಲಿ ಅವುಗಳ ಒಳಗೇ ಮಹಿಳೆಯರನ್ನು ಸಂಘಟಿಸುವ ಕಾರ್ಯ ನಡೆಯುತ್ತಿದೆ. ಅಂಥ ಹುನ್ನಾರಕ್ಕೆ ಬಲಿಯಾಗುವ ಅಥವಾ ಒಪ್ಪಿಸಿಕೊಳ್ಳುವ ಮಹಿಳೆಯರು ಒಟ್ಟು ಮಹಿಳಾಪರ ಹೋರಾಟಕ್ಕೆ ವಿರುದ್ಧವಾಗಿಯೆ ನಡೆದುಕೊಳ್ಳುವವರಾಗುತ್ತಿದ್ದಾರೆ.

ಸರ್ಕಾರದಿಂದ ಸ್ತ್ರೀಶಕ್ತಿ ಸಂಘ, ಮಹಿಳಾ ಸಂಘಗಳ ಸ್ಥಾಪನೆಯಾದರೆ ಅವೂ ಜಾತಿರಾಜಕೀಯಕ್ಕೆ ಬಲಿಯಾಗುತ್ತಿವೆ. ರಾಜಕೀಯ ಪಕ್ಷಗಳಿಗೆ ಮತಗಳನ್ನು ಕೊಂಡುಕೊಳ್ಳುವ ಕೇಂದ್ರಗಳಾಗುತ್ತಿವೆ. ಜಾತಿ–ಮತಾತೀತ ಮತ್ತು ಸಮಾನತಾ ತತ್ವವನ್ನು ಧ್ವಂಸ ಮಾಡುತ್ತ ಬಂದಿರುವ ಮತ್ತು ಈಗಲೂ ಧ್ವಂಸ ಮಾಡುತ್ತಿರುವ ಜಾತಿ, ಧರ್ಮಗಳ ಮಠಮಾನ್ಯಗಳಿಗೆ ಕೋಟಿ ಕೋಟಿಗಟ್ಟಲೆ ಸಾರ್ವಜನಿಕ ಖಜಾನೆಯ ಹಣವನ್ನು ಇಂದಿನ ಕೋಮುವಾದೀ ಸರ್ಕಾರ ಸುರಿಯುತ್ತಲಿದೆ. ಸರಳ ವಿವಾಹಗಳ ಘೋಷಣೆಯ ಮುಸುಕಿನಲ್ಲಿ ಅಪ್ರಾಪ್ತವಯಸ್ಸಿನ ಹೆಣ್ಣುಮಕ್ಕಳ ಮದುವೆ ಮಾಡಿಸುತ್ತಿದ್ದಾರೆ. ಮಠಾಧಿಪತಿಗಳೂ, ಸಚಿವರುಗಳೂ ಕಾನೂನು ಬಾಹಿರವಾದ ಈ ಕೃತ್ಯದಲ್ಲಿ ಯಾವ ಅಪರಾಧೀಭಾವವೂ ಇಲ್ಲದೆ ರಾಜಾರೋಷವಾಗಿ ತೊಡಗಿಕೊಳ್ಳುತ್ತಿದ್ದಾರೆ.

ಹಿಂದೂತ್ವವಾದದ ಹೆಸರಿನಲ್ಲಿ ರಾಜ್ಯ ಸರ್ಕಾರವು ಮಹಿಳೆಯರು ಇಲ್ಲಿಯವರೆಗೆ ಹೋರಾಟಮಾಡಿ ಗಳಿಸಿಕೊಂಡಷ್ಟು ಸವಲತ್ತುಗಳನ್ನು ಅನುಭವಿಸಲಾಗದಂತೆ, ಅನುಭವಿಸಲು ಬಿಡದಂತೆ ಮಾಡುತ್ತಿದೆ. ಮಹಿಳೆಯರ ಮೇಲೆ ಧರ್ಮದ ಹೆಸರಿನಲ್ಲಿ ಇಲ್ಲ ಸಲ್ಲದ ನೀತಿ ನಿಯಮಗಳ ಘೋಷಣೆ ಮಾಡುತ್ತಿದೆ. ಮಹಿಳೆಯರ ಹೋರಾಟಗಳ ಫಲವಾಗಿ ಆಸ್ತಿಹಕ್ಕು ಮೊದಲಾದವೆಲ್ಲ ಕಾನೂನಾಗಿ ಬಂದರೂ ಅವನ್ನು ಪಡೆಯಲಾಗದಂತೆ ಮಹಿಳೆಯರ ಮೇಲೆ ಧರ್ಮದ ಹೆಸರಿನಲ್ಲಿ ಸಂಸ್ಕೃತಿಯ ಹೆಸರಿನಲ್ಲಿ ಪರೋಕ್ಷವಾಗಿ ಒತ್ತಡ ಹೇರಲಾಗುತ್ತಿದೆ. ದಬ್ಬಾಳಿಕೆಯ ವಾತಾವರಣ ಸೃಷ್ಟಿಸಲಾಗುತ್ತಿದೆ. ಸರ್ಕಾರ ಸಾರ್ವಜನಿಕ ಖಜಾನೆಯಿಂದ ಸೀಮಂತದಂಥ ಆಚರಣೆ ಗಳಿಗೂ ಸೀರೆ, ಕುಪ್ಪುಸಾದಿಗಳನ್ನು ಕೊಡುವ ಮೂಲಕ ಮಹಿಳೆ ಯರನ್ನು ಒಲಿಸಿಕೊಳ್ಳುವ ಕಪಟನಾಟಕ ಆಡುತ್ತಿದೆ.

6. ಜಾಗತೀಕರಣ ಕೇವಲ ನಮ್ಮ ದೇಶಕ್ಕೆ ಮಾತ್ರ ಸೀಮಿತವಾದ ಸಮಸ್ಯೆಯಲ್ಲ. ಇಂದು ಅದು ಜಾಗತಿಕ ಮತ್ತು ಸಾರ್ವತ್ರಿಕ ಸಮಸ್ಯೆಯಾಗಿದೆ. ಏಕವಿನ್ಯಾಸ ಸಂಸ್ಕೃತಿ ಸಂದರ್ಭವನ್ನು ಜಗತ್ತಿ ನಾದ್ಯಂತ ನಿರ್ಮಿಸುವ ಗುರಿ ಅವರದು. ಜಗತ್ತಿನ ಎಲ್ಲ ದೇಶಗಳೂ ಒಂದೇ ಜೀವನಮಟ್ಟದವಲ್ಲ, ಒಂದೇ ಬಗೆಯ ಚರಿತ್ರೆಯ ಹಿನ್ನೆಲೆಯಲ್ಲಿ, ಒಂದೇ ರಾಷ್ಟ್ರೀಯತೆಯ ಧ್ವಜದಡಿ ಇರುವವೂ ಅಲ್ಲ. ಹಾಗಾಗಿ ಜಾಗತೀಕರಣದ ಸವಾಲನ್ನು ಒಂದೊಂದು ದೇಶವೂ ತನ್ನದೇ ಆದ ರೀತಿಯಲ್ಲಿ ಒಪ್ಪುವ ಬಿಡುವ ಕೆಲಸ ಮಾಡಬೇಕಾಗಿದೆ. ಆದರೆ ಆ ಆಯ್ಕೆಯು ನಮ್ಮಂಥ ದೇಶಗಳಿಗೆ ಇಲ್ಲವಾಗಿದೆ. ಮುಂದುವರಿದ ದೇಶಗಳಿಗೆ ಇರುವ ಅನುಕೂಲ ನಮ್ಮಂಥ ದೇಶಗಳಿಗೆ ಇಲ್ಲ. ಆರೋಗ್ಯ, ಶಿಕ್ಷಣ, ಬೆಳಕು, ನೀರು, ನಾವು ಉಸಿರಾಡುವ ಗಾಳಿ ಕೂಡ ಖಾಸಗೀಕರಣಕ್ಕೆ ಒಳಪಡುವ ಸ್ಥಿತಿ ಬರುತ್ತಲಿದೆ. ನಾವು ದೀರ್ಘಕಾಲವಾದರೂ ಈ ಮುಂದೋಟದಲ್ಲಿ (Race) ಹಿಂಬಾಲಕರಾಗಿಯೇ ಸಾಗಬೇಕಾದ ಪರಿಸ್ಥಿತಿ ಉಂಟಾಗು ತ್ತಿದೆ. ಹಾಗೆಂದು ಜಾಗತೀಕರಣವನ್ನು ಸಂಪೂರ್ಣವಾಗಿ ವಿರೋಧಿಸಿ ನಮ್ಮದೇ ಆದ ದೇಶೀಯ ಪರ್ಯಾಯವನ್ನು ನಿರ್ಮಿಸಿಕೊಳ್ಳುತ್ತೇವೆ ಎಂಬಂಥ ಆತ್ಮವಿಶ್ವಾಸ ಉಂಟುಮಾಡುವಂತೆ ನಮ್ಮ ದೇಶದ ರಾಜಕೀಯವೂ ಇಲ್ಲ; ಅಂಥ ರಾಷ್ಟ್ರನಾಯಕರೂ ಈಗ ಕಾಣುತ್ತಿಲ್ಲ.

ಇಂಥ ಸವಾಲನ್ನು ಎದುರಿಸಲು ತಿಣುಕಾಡುತ್ತಿರುವ ನಮ್ಮ ಮುಂದೆ ತೀರಾ ಪ್ರತಿಗಾಮಿಯಾದ, ಫ್ಯಾಸಿಸ್ಟ್ ಮನೋಧರ್ಮ ಬೆಳೆಸುವ ಜಾತಿವಾದ, ಮತೀಯವಾದಗಳು ದಿನೇ ದಿನೇ ಆಳುವ ಸ್ಥಾನವನ್ನು ಆಕ್ರಮಿಸಿಕೊಳ್ಳುತ್ತಾ ವಿಜೃಂಭಿಸತೊಡಗಿವೆ. ಜಾಗತೀಕರಣದ ಸಮಸ್ಯೆ ಮಹಿಳೆಯರಿಗೆ ಮಾತ್ರ ಪ್ರತ್ಯೇಕವಾಗಿ ಸಮಸ್ಯೆ ಸೃಷ್ಟಿಸುತ್ತಿದೆ ಎಂಬಂತಿಲ್ಲ. ಪುರುಷ – ಸ್ತ್ರೀ ಭೇದವಿಲ್ಲದೆ ಎಲ್ಲರ ಎದುರು ನಿಂತಿರುವ ಸಮಸ್ಯೆ ಅದು. ಆದರೆ ಜಾತಿವಾದ, ಮತೀಯವಾದಗಳು ವಿಜೃಂಭಿಸುತ್ತಿರುವುದು ಮತ್ತು ಅದನ್ನು ಪ್ರತಿಪಾದಿಸುವವರೇ, ಪ್ರಚಾರ ಮಾಡುವವರೇ ರಾಜಕೀಯ ಅಧಿಕಾರ ಗದ್ದುಗೆಗಳನ್ನು ಹಿಡಿಯುತ್ತಿರುವುದು ಮಾತ್ರ ಮಹಿಳೆಯರ ದೃಷ್ಟಿಯಿಂದ ಅತ್ಯಂತ ಅಪಾಯಕಾರಿಯಾದ, ಭಯ ಜನಕವಾದ ಬೆಳವಣಿಗೆಯಾಗಿದೆ.

7. ಸ್ವಾತಂತ್ರ್ಯ ಪಡೆಯುವ ಕಾಲದಲ್ಲಿ ಮತ್ತು ಪಡೆದ ಕಾಲದಲ್ಲಿ ದೇಶದಲ್ಲಿ ವಿದ್ಯಾವಂತರ ಸಂಖ್ಯೆ ಬಹಳ ಕಡಿಮೆ ಇತ್ತು. ಈಗ ವಿದ್ಯಾವಂತರ ಸಂಖ್ಯೆ, ಪದವೀಧರರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಲೇ ಬಂದಿದೆ. ವಿದ್ಯಾವಂತರಾದರೆ, ಪದವೀಧರರಾದರೆ ಜನರಲ್ಲಿ ಹೊಸ ಎಚ್ಚರ, ಸ್ವಪ್ರಜ್ಞೆಯ ಅರಿವು ಹೆಚ್ಚಾಗುತ್ತದೆ ಎಂಬ ನಂಬಿಕೆ ಆಗಿನವರಿಗೂ ಇತ್ತು. ನೀವು ಕೇಳಿರುವ ಪ್ರಶ್ನೆ ನೋಡಿದರೆ ಈಗಿನವರಾದ ನಿಮಗೂ ಅಂಥ ನಂಬಿಕೆ ಇರುವಂತಿದೆ! ಆದರೆ ಹಾಗಾಗುತ್ತಲೇ ಇಲ್ಲ. ಪುರುಷರಲ್ಲಿ ಮಾತ್ರವಲ್ಲ ಸ್ತ್ರೀಯರಲ್ಲಿಯೂ ಶಿಕ್ಷಣದಿಂದ ಜ್ಞಾನವಾಗಿ ಪಡೆದದ್ದನ್ನು ನಿತ್ಯದ ಬದುಕಿನಲ್ಲಿ ಅನುಭವವಾಗಿ ಪಡೆಯಬೇಕೆಂಬ ತಿಳಿವಳಿಕೆ, ಛಲ ತಕ್ಕ ಪ್ರಮಾಣದಲ್ಲಿ ಕಾಣಿಸುತ್ತಿಲ್ಲ.

ಚಿಕ್ಕ ಉದಾಹರಣೆ ಕೊಡುತ್ತೇನೆ. ಮನೆಗೆ ಬಂದ ಮುತ್ತೈದೆಗೆ ಅರಿಶಿಣ ಕುಂಕುಮ ಕೊಟ್ಟು ಕಳಿಸುವುದನ್ನು ಸಂಸ್ಕೃತಿಯ ನಡವಳಿಕೆ ಎಂದು ಪದ್ಧತಿಯಾಗಿಸಿಕೊಂಡು ಬರಲಾಗುತ್ತಿದೆ. ಅದರ ಹಿಂದಿನ ಅರ್ಥ, ತಿಳಿವಳಿಕೆ ಏನು, ಎಂಥದು? ನೀನು ಮುತ್ತೈದೆಯಾಗಿಯೇ ಬಾಳು, ಬದುಕು ಎಂಬ ಹರಕೆ, ಹಾರೈಕೆ ತಾನೆ ಅದು? ಅವಳು ಮುತ್ತೈದೆಯಾಗಿಯೆ ಬದುಕಬೇಕು, ಸಾಯಬೇಕು ಎಂದು ಹರಸುವುದಕ್ಕೆ ಕಾರಣವೇನು? ಒಂದು ಕಾಲದಲ್ಲಿ ಗಂಡಸತ್ತರೆ ಹೆಂಡತಿಯಾದವಳು ಸತಿ ಸಹಗಮನ ಮಾಡಬೇಕಾಗುತ್ತಿತ್ತು. ಇಲ್ಲವೆ ಪುರುಷರೇ ಅವಳನ್ನು ಗಂಡನ ಶವ ಸುಡುವ ಬೆಂಕಿಗೆ ದೂಡಿಸುತ್ತಿದ್ದರು. ಆ ಘೋರ ಶಿಕ್ಷೆ ಯಾರಿಗೆ ಬೇಕು? ಆದ್ದರಿಂದ ಮುತ್ತೈದೆಯಾಗಿಯೇ ಅಂದರೆ ಗಂಡನಿಗಿಂತ ಮೊದಲೆ ಸಾಯಿ ಎಂಬ ಆಶೀರ್ವಾದ, ಹರಕೆ. ಅವಳು ವಿಧವೆಯಾಗಿಬಿಟ್ಟರೆ ಸಾಮಾಜಿಕ ಮರ್ಯಾದೆ ಕಡಿಮೆಯಾಗುತ್ತದೆ. ಶುಭಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಎದುರು ಸುಳಿದರೂ ಅಶುಭ, ಅಪಶಕುನ ಎಂದು ಹೇಳಿ ಅವಮಾನಿಸಲಾಗುತ್ತದೆ. ಅಂಥ ಅವಸ್ಥೆ ಬರುವುದು ಬೇಡ ಎಂಬುದಕ್ಕಾಗಿ ಮುತ್ತೈದೆ ಸಾವಿನ ಆಶೀರ್ವಾದ, ಹರಕೆ. ಮಹಿಳೆಯರಿಗೆ ಅವಮಾನ ಮಾಡುವ, ಅವರ ಬದುಕನ್ನೇ ಗುಲಾಮ ಬದುಕಾಗಿ ಕಾಣುವ ಇಂಥ ಆಚರಣೆಗಳನ್ನು ಉತ್ಸಾಹದಿಂದ ಧರ್ಮಶ್ರದ್ಧೆಯಿಂದ ವಿದ್ಯಾವಂತ ಮಹಿಳೆಯರೂ ಆಚರಿಸುವುದರ ಮೂಲಕ ತಮಗೆ ತಾವೇ ಅವಮಾನ ಮಾಡಿಕೊಳ್ಳುತ್ತಿದ್ದೇವೆಂಬುದು ಅವರಿಗೆ ಗೊತ್ತಾಗುತ್ತಲೇ ಇಲ್ಲ. ಜಾಗೃತ ಮಹಿಳೆಯರ ಸಂಘ, ಸಂಘಟನೆಗಳೆಂದು ಘೋಷಿಸಿಕೊಂಡಿರುವಂಥ ಮಹಿಳಾ ಸಂಘ, ಸಂಘಟನೆಗಳಲ್ಲಿಯೂ ಅದನ್ನೇ ಒಂದು ಕಾರ್ಯಕ್ರಮ ಎಂದುಕೊಂಡು ಅರಿಶಿಣ ಕುಂಕುಮದಂಥ ಆಚರಣೆಗಳನ್ನು ಸಂಭ್ರಮದಿಂದ ಆಚರಿಸುವುದನ್ನು ಕಾಣುತ್ತೇವೆ, ಅಲ್ಲವೇ? ಇಂಥದರ ಬಗ್ಗೆಯೂ ಪ್ರಾಥಮಿಕ ಅರಿವು ಬೆಳೆಯದಿರುವವರಲ್ಲಿ ನೀವು ಹೇಳುವ ಹೊಸ ಎಚ್ಚರ, ಸ್ವಪ್ರಜ್ಞೆಯ ಅರಿವು ಮೂಡಿದೆ ಎಂದು ಹೇಳುವುದು ಹೇಗೆ? ಮೂಡಿಸುವುದು ಹೇಗೆ?

8 ಮತ್ತು 9. 'ಆಧುನಿಕ ಭಾರತದ ತಂದೆ' ಎಂಬ ಖ್ಯಾತಿಯ ರಾಜಾರಾಮ್ ಮೋಹನ್‌ರಾಯರೂ ಅನಂತರದ ಕಾಲದಲ್ಲಿ ಬಂದ ಸಮಾಜ ಸುಧಾರಣಾವಾದಿಗಳೂ ಸಾರ್ವತ್ರಿಕ ಸುಧಾರಣೆಯ ಒಂದು ಭಾಗವಾಗಿ ಮಹಿಳಾಪರ ಹೋರಾಟವನ್ನೂ ಮಾಡಿದರು. ಇನ್ನೂ ಅನೇಕರು ಮಹಿಳೆಯರಿಗೆ ನೆರವಾಗುವಂಥ ಕಾರ್ಯಕ್ರಮಗಳನ್ನು ರೂಪಿಸಿ ಅದಕ್ಕಾಗಿ ದುಡಿದರು ಎಂಬುದು ಸುಳ್ಳಲ್ಲ. ಆದರೆ ಅವೆಲ್ಲ ಕರುಣಾ ಕಾರ್ಯಕ್ರಮಗಳಾಗಿದ್ದವು. ಅವುಗಳಿಂದ ಎಷ್ಟೋ ಹೆಣ್ಣುಮಕ್ಕಳಿಗೆ ಅನುಕೂಲವಾಯಿತು, ಬದುಕುವುದಕ್ಕೆ ದಾರಿಯಾಯಿತು ಎಂಬುದೂ ಸುಳ್ಳಲ್ಲ. ಅದಕ್ಕಾಗಿ ಆ ಪುಣ್ಯಾತ್ಮರಿಗೆ ಮಹಿಳೆಯರು ಕೃತಜ್ಞರಾಗಿರಬೇಕು. ಅಷ್ಟಾದರೂ ಅವರು ಮಾಡಿರದಿದ್ದರೆ ಇಂದು ಮಹಿಳೆಯರ ಪರಿಸ್ಥಿತಿ ಇನ್ನಷ್ಟು ಚಿಂತಾಜನಕವಾಗಿರುತ್ತಿತ್ತು.

ಆದರೆ, ಇವರು ಯಾರೂ ಭಾರತದ ಜನಸಂಖ್ಯೆಯ ಅರ್ಧದಷ್ಟಿರುವ, ಯುಗಯುಗಗಳಿಂದ ಶೋಷಣೆಗೆ, ದೌರ್ಜನ್ಯಕ್ಕೆ ಬಲಿಯಾಗುತ್ತಲೇ ಬಂದಿರುವ ಸ್ತ್ರೀ ಸಮುದಾಯವು ಸಮಾನತೆಗಾಗಿ, ಗೌರವಯುತವಾದ ಬದುಕಿಗಾಗಿ, ಅಂಥ ಸಮಾಜಕ್ಕಾಗಿ ಹೋರಾಡಲು ಅಗತ್ಯವಾದ ತಾತ್ತ್ವಿಕ ಅಥವಾ ಸೈದ್ಧಾಂತಿಕ ನೆಲೆಗಟ್ಟನ್ನು ಪ್ರತ್ಯೇಕವಾಗಿ ರೂಪಿಸಿಕೊಡಲೇ ಇಲ್ಲ. ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಅಂಥವರೂ ಮಹಿಳೆಯರಿಗೇ ಪ್ರತ್ಯೇಕವಾದ ಹೋರಾಟದ ದಾರಿ ತೋರಿಸಲಿಲ್ಲ. ಮಹಿಳೆಯರ ವಿಷಯದಲ್ಲಿ ಸಾಮಾನ್ಯ, ಸಾರ್ವತ್ರಿಕ ಹೋರಾಟದ ಮಾತುಗಳನ್ನೇ ಆಡಿದರು. ಅಂಥ ಕಾರ್ಯಕ್ರಮಗಳನ್ನೇ ರೂಪಿಸಿದರು.

ದಲಿತರಿಗೆ ಅಂಬೇಡ್ಕರ್ ಅವರಂಥ ಮಹಾನ್ ನಾಯಕ ದೊರೆತಂತೆ ಅಂಥ ಮಹಾನ್ ಯೋಗ್ಯತೆಯವರಲ್ಲದಿದ್ದರೂ ಮಹಿಳಾ ಪರ ಹೋರಾಟಕ್ಕೇ ತಮ್ಮ ಬದುಕನ್ನು ಮೀಸಲಿಟ್ಟ ಹೋರಾಟಗಾರ್ತಿ ಒಬ್ಬರೂ ಬರಲಿಲ್ಲ. ಇಂದಿರಾಗಾಂಧಿ ಪ್ರಧಾನಿಯಾದರೂ ಮಹಿಳಾಪರ ನಾಯಕಿ ಎಂಬಂತಿರಲಿಲ್ಲ. ಸೋನಿಯಾಗಾಂಧಿ ಒಂದು ರಾಜಕೀಯ ಪಕ್ಷದ ವ್ಯವಸ್ಥಾಪಕಿಯ ಕೆಲಸ ಮಾಡಿಕೊಂಡು ಹೋಗುತ್ತಿದ್ದಾರೆಯೆ ಹೊರತು ಭಾರತದ ಮಹಿಳೆಯರ ಬಗ್ಗೆಯೆ ಪ್ರತ್ಯೇಕವಾದ ಕಾಳಜಿ ತೋರುವವರೇನಲ್ಲ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಹೋರಾಟಕ್ಕಿಳಿದಿದ್ದ ಮಹಿಳೆಯರಲ್ಲಿಯೂ ಯಾರೂ ದೊಡ್ಡ ಪ್ರಮಾಣದಲ್ಲಿ ಮಹಿಳಾ ಪರವಾದ ಹೋರಾಟ ಸಂಘಟಿಸುವ ತಿಳಿವಳಿಕೆ, ಶಕ್ತಿ, ದರ್ಶನ ಸಾಮರ್ಥ್ಯ (vision) ಇದ್ದವರಾಗಿರಲಿಲ್ಲ. ದಲಿತ ಪಂಥದವರಿಗೆ ಸ್ವಾತಂತ್ರ್ಯಸಮಾನತೆಗಾಗಿ ಹೋರಾಡಲು ಅಂಬೇಡ್ಕರ್ ದಾರಿತೋರಿದರು. ಹೋರಾಟದ ತಾತ್ತ್ವಿಕ ನೆಲೆ ರೂಪಿಸಿಕೊಟ್ಟರು. ಸ್ವತಂತ್ರ ಭಾರತದ ಸಂವಿಧಾನ ರಚಿಸುವಾಗ ದಲಿತರಿಗೆ ನ್ಯಾಯ ದೊರಕಿಸಿಕೊಡಲು ನ್ಯಾಯವಾಗಿಯೆ ಹೋರಾಡಿದರು. ಮಹಿಳೆಯರಿಗೆ ಅಂಥವರು ಯಾರಿದ್ದರು? ಈಗಲಾದರೂ ಯಾರಿದ್ದಾರೆ? ಈಗ ಮಹಿಳೆ ರಾಷ್ಟ್ರಪತಿಯಾಗಿದ್ದಾರೆ. ಮಹಿಳಾಪರ ಸಮಾನತಾ ಹೋರಾಟದಲ್ಲಿ ಅವರು ವಹಿಸಿದ ಪಾತ್ರವೇನು? ಅಂಬೇಡ್ಕರ್ ಅವರು ದಲಿತಪರ ನಡೆಸಿದ ಹೋರಾಟದ ಜೊತೆ ಹೋಲಿಕೆಯಾದರೂ ಇದೆಯೆ?

ಈಗಲಾದರೂ ಮಹಿಳಾಪರ ಹೋರಾಟಗಾರ್ತಿಯರು ಮಹಿಳಾ ಹೋರಾಟಕ್ಕೆ ವಿಶಿಷ್ಟವಾದ ತಾತ್ತ್ವಿಕನೆಲೆಯನ್ನು ಸ್ಪಷ್ಟವಾಗಿ ರೂಪಿಸಿಕೊಳ್ಳಬೇಕಾಗಿದೆ. ಅಂಥ ತಾತ್ತ್ವಿಕನೆಲೆ ರೂಪಿಸಿ ಕೊಳ್ಳದಿರುವುದರಿಂದಲೇ ಮಹಿಳಾ ಹೋರಾಟ ಎಂಬುದು ಚೆಲ್ಲಾಪಿಲ್ಲಿಯಾಗಿ ದಿಕ್ಕಾಪಾಲಾಗಿದೆ. ಎಲ್ಲಾ ಜಾತಿ, ಮತಧರ್ಮಗಳಲ್ಲಿಯೂ ಮಹಿಳೆಯರಿದ್ದಾರೆ. ನಾವೆಲ್ಲ ಒಂದಾಗಿ ಹೋರಾಟ ರೂಪಿಸುವ ಸಂಕಲ್ಪ ಮಾಡಬೇಕಾಗಿದೆ. ಅದು ಮಹಿಳಾಪರ ಹೋರಾಟವಾದರೂ ಪರಿಣಾಮದಲ್ಲಿ ಪುರುಷ ಸ್ತ್ರೀ–ಭೇದವಿಲ್ಲದೆ ಎಲ್ಲರೂ ಸಮಾನತೆಯಿಂದ, ನೆಮ್ಮದಿಯಿಂದ ಬದುಕುವಂಥ ಸಮಾಜ, ಸಂಸ್ಕೃತಿ ನಿರ್ಮಾಣಕ್ಕಾಗಿಯೆ ನಡೆಸುವ ಹೋರಾಟವಾಗಬೇಕಾಗಿದೆ.

10. 1965ರಲ್ಲಿ ನನ್ನ ಮದುವೆಯಾಯಿತು. ಪಿ.ಯು.ಸಿ.ವರೆಗೆ ಓದಿದ್ದ ನಾನು ಮದುವೆಯಾದ ಮೇಲೆ ವಿದ್ಯಾಭ್ಯಾಸ ಮುಂದುವರಿಸಿ ಎಂ.ಎ., ಬಿ.ಎಡ್. ಪದವೀಧರಳಾದೆ. ಬಿ.ಎಡ್. ಪರೀಕ್ಷೆ ನಡೆಯುತ್ತಿರುವಾಗಲೆ ನನ್ನ ಎರಡನೆಯ ಮಗಳು ತೀರಿ ಹೋದಳು. ನನ್ನ ಮದುವೆಯೇ ಸರಳಮದುವೆಯಾಗಿತ್ತು. ವರದಕ್ಷಿಣೆ, ಊಟ, ಉಡುಗೊರೆಗಳಿರಲಿಲ್ಲ. ನನಗೆ ಮೂಗುತಿ, ಕಾಲುಂಗುರಗಳ ಕಡ್ಡಾಯದ ಸಂಪ್ರದಾಯ ಬಂಧನವಿರಲಿಲ್ಲ. ನಂತರದ ದಿನಗಳಲ್ಲಿ ನನ್ನ ಗಂಡ ಮತ್ತು ನಾನು ವರದಕ್ಷಿಣೆ ವಿರುದ್ಧದ ಹೋರಾಟ ನಡೆಸುತ್ತಲೇ ಬಂದಿದ್ದೇವೆ. ಆ ಕಾಲದಿಂದಲೂ ವರದಕ್ಷಿಣೆ ಮದುವೆಗಳಿಗೆ ಅದು ಎಷ್ಟೇ ಹತ್ತಿರದ ಸಂಬಂಧಿಕರ

ಮದುವೆಯಾದರೂ ಹೋಗುವುದನ್ನು ನಿಲ್ಲಿಸಿದ್ದೇವೆ. ಧಾರ್ಮಿಕವಿಧಿ-ವಿಧಾನಗಳಂತೆ ನಡೆಯುವ ಮದುವೆಗಳಲ್ಲಿ ಅದರ ಆಚರಣೆಯ ಭಾಗದಲ್ಲಿ ವಧು-ವರರಿಗೆ ಸಮಗೌರವ ಇರದ, ಗಂಡು ಮೇಲೆಂಬ ತತ್ವದ ಹಿನ್ನೆಲೆ ಇರುವುದರಿಂದ ಅಂಥ ಮದುವೆಗಳಿಗೂ ನಾನೂ, ನನ್ನ ಗಂಡ ಹೋಗುವುದನ್ನು ಬಿಟ್ಟು ಎಷ್ಟೋ ವರ್ಷಗಳಾದವು. ನಮ್ಮ ಒಬ್ಬಳೇ ಒಬ್ಬಳು ಮಗಳ ಮದುವೆಯನ್ನೂ ವರದಕ್ಷಿಣೆ ಇಲ್ಲದ ಸರಳವಾದ ಹಾರ ವಿನಿಮಯ, ನೋಂದಣಿ ವಿಧಾನ ದಲ್ಲಿಯೇ 1988ರಲ್ಲಿ ಮಾಡಿದೆವು. ನಾವು ಯಾವುದೇ ಧಾರ್ಮಿಕ ಹಬ್ಬ ಹರಿದಿನಗಳನ್ನು ಮಾಡದೆ, ರಾಷ್ಟ್ರೀಯ ಹಬ್ಬಗಳನ್ನು ಮನೆಯಲ್ಲಿ ಆಚರಿಸುತ್ತೇವೆ. ಅರಿಷಿಣ-ಕುಂಕುಮ ಕೊಡುವ ಪದ್ಧತಿ ನಮ್ಮ ಮನೆಯಲ್ಲಿಲ್ಲ. ನಾನೂ ಎಲ್ಲೂ ಅಂಥ ಕಾರ್ಯಕ್ರಮದಲ್ಲಿ ಭಾಗವಹಿಸುವುದಿಲ್ಲ. ಇದು ನಮ್ಮ ವೈಯಕ್ತಿಕ ಕೌಟುಂಬಿಕ ಮಟ್ಟದಲ್ಲಿ ನಾವು ಮಾಡುತ್ತ ಬಂದ ಹೋರಾಟ.

❑



# ಮಹಿಳಾ ಚಳವಳಿ ಒಟ್ಟು ಸಮಾಜದ ಒಂದು ಭಾಗ

***ಕೆ.ಎಸ್. ವಿಮಲಾ,*** ಜನವಾದಿ ಮಹಿಳಾ ಸಂಘಟನೆ, ಬೆಂಗಳೂರು

೧. ನಿತ್ಯ ನಿರಂತರ ಅವಿನಾಭಾವ.

೨. ಯಾವುದೇ ಹೋರಾಟ ಚಳವಳಿಗಳನ್ನು ಬಹುದೊಡ್ಡ ಸಂಖ್ಯೆಯಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಿರುವುದು ಚಳವಳಿ ಬೀರಿದ ಪರಿಣಾಮವೆಂದೇ ಅರ್ಥೈಸಿಕೊಳ್ಳಬೇಕು. ನಿರೀಕ್ಷಿತ ಅಥವಾ ಅಗತ್ಯವಿದ್ದ ಪ್ರಮಾಣದಲ್ಲಿ ಅಲ್ಲವಾದರೂ ಮಹಿಳೆಯರೂ ಫಲಭಾಗಿಗಳಾಗುತ್ತಿದ್ದಾರೆ.

೩. ೭೦-೮೦ರ ದಶಕದಷ್ಟೇ ಕಾವು ಇಂದಿಗೂ ನೈಜ ಕಾಳಜಿಯಿಂದ ಚಳವಳಿ ಕಟ್ಟುತ್ತಿರುವ ಸಂಘಟನೆಗಳಲ್ಲಿ ಇದೆ. ವಿದೇಶಿ ಅನುದಾನ ಕ್ಕಾಗಿ ಚಟುವಟಿಕೆ ನಡೆಸುವ ಗುಂಪುಗಳು ತಮ್ಮ ಉದ್ದೇಶ ಈಡೇರಿದ ಮೇಲೆ ಬೀದಿಯಿಂದ ಹಿಂದೆ ಸರಿದರೆಂದ ಮಾತ್ರಕ್ಕೆ ಚಳವಳಿಯ ಉತ್ಸಾಹ ಕುಗ್ಗಿದೆ ಎಂದು ಅಭಿಪ್ರಾಯ ಪಡುವುದು ಸರಿಯಲ್ಲ. ಜನಪರ ಕಾಳಜಿ, ಬದ್ಧತೆಯಿಂದ ಕೆಲಸ ಮಾಡುತ್ತಿರುವ ಜನವಾದಿಯಂತಹ ಸಂಘಟನೆಗಳು ಈ ಮೂರು ದಶಕದಲ್ಲಿ ಪಡೆದಿರುವ ವಿಸ್ತಾರವನ್ನು ಗಮನಿಸಿದರೆ ಇದು ವೇದ್ಯವಾಗುತ್ತದೆ.

೪. ಯಾವುದೇ ಸಮಸ್ಯೆಗೆ ಉತ್ತರ, ಪರಿಹಾರ, ನಿರಂತರ ಹೋರಾಟ ಮಹಿಳೆಯರ ಸಮಸ್ಯೆಗಳನ್ನು ಒಟ್ಟು ಸಮಾಜದ ಸಮಸ್ಯೆಯ ಭಾಗವಾಗಿಯೇ ಗುರುತಿಸುತ್ತ ಎಲ್ಲ ಹೋರಾಟಗಳಲ್ಲಿಯೂ ಲಿಂಗ ಸಂವೇದನಾಶೀಲತೆ ಬೆಳೆಸುವ ಕೆಲಸವಾಗಬೇಕು.

೫. ಭಾವನಾತ್ಮಕ ನೆಲೆಯಲ್ಲಿ ಇಡೀ ಸಮಾಜವನ್ನು ಆವರಿಸುತ್ತಿರುವ ಕೋಮುವಾದ ಮತೀಯವಾದದ ದುಷ್ಪರಿಣಾಮ, ದುರಂತಮಯ ಬದುಕಿನ ಭವಿಷ್ಯದ ಕುರಿತು ಎಚ್ಚರಿಸುವ ಕೆಲಸವಾಗಬೇಕು.

೬. ಜಾಗತೀಕರಣ, ಉದಾರೀಕರಣ ನೀತಿಗಳ ರೂವಾರಿ ದೇಶಗಳೇ ಇಂದು ಸಂಕಷ್ಟಕ್ಕೆ ಸಿಲುಕಿವೆ. ಅವು ಸ್ವಲ್ಪ ಚೇತರಿಸಿಕೊಂಡವೆಂದರೆ, ಬಿಕ್ಕಟ್ಟಿನ ಪೂರ್ಣ ಹೊರೆಯನ್ನು ನಮ್ಮಂತಹ ದೇಶಗಳ ಮೇಲೆ ಹೊರಿಸುತ್ತವೆ. ಈಗಾಗಲೇ ಆರ್ಥಿಕ ಬಿಕ್ಕಟ್ಟು ಸೃಷ್ಟಿಸಿರುವ ಸಾಮಾಜಿಕ ಕ್ಷೋಭೆ ಇಡೀ ವಿಶ್ವವನ್ನೇ ವ್ಯಾಪಿಸಿದೆ. ತುತ್ತು ಕೂಳಿಗಾಗಿ, ಬದುಕಿನ ನಿರ್ವಹಣೆಗಾಗಿ ಮೈಮಾರಿಕೊಳ್ಳುವ, ಮಕ್ಕಳನ್ನೇ ಮಾರುವ ಸ್ಥಿತಿಗೆ ಮಹಿಳೆಯರು ತಲುಪಿದ್ದಾರೆ. ಅತ್ಯಂತ ಎಚ್ಚರದ, ಹೋರಾಟದ ಹೆಜ್ಜೆಗಳೇ ಈ ಕ್ಷಣದ ಅಗತ್ಯತೆ. ಭಾರತದ ಸಂದರ್ಭದಲ್ಲಿಯಂತೂ ತಕ್ಷಣ ಲಭ್ಯವಿರುವ ರಾಜಕೀಯ ಅಸ್ತ್ರವನ್ನು ಮಹಿಳೆಯರು ಸಮರ್ಥವಾಗಿ ಬಳಸಿಕೊಂಡು ಜಾಗತೀಕರಣ, ಮತ್ತು ಕೋಮುವಾದೀ ಪರ ಶಕ್ತಿಗಳನ್ನು ಹಿಮ್ಮೆಟ್ಟಿಸುವುದೇ ಆಗಿದೆ. ದೇಶದ ಸಾರ್ವಭೌಮತೆ, ಸೌಹಾರ್ದ ಪರಂಪರೆಯ ರಕ್ಷಣೆ ಎಲ್ಲರ ಕರ್ತವ್ಯವಾಗಿದೆ.

೭. ಎತ್ತರದ ಸ್ಥಿತಿ ತಲುಪುತ್ತಿರುವ ಜೊತೆಗೆ ಗ್ರಾಹಕ ವಸ್ತುವಾಗಿಯೇ ಪರಿಗಣಿಸುವ ಸ್ಥಿತಿಯೂ ಮುಂದುವರಿದ ಪರಿಣಾಮ ಇದು. ಹಿಂಸೆಯ ಹೊಸ ಹೊಸ ವಿಧಾನಗಳನ್ನು ತಿಳಿಸಿಕೊಡುತ್ತಿರುವ ಮಾಧ್ಯಮಗಳು ತಮ್ಮದೇ ಕೊಡುಗೆ ನೀಡುತ್ತಿವೆ.

೮. ನೈಜ ಮಹಿಳಾ ಚಳವಳಿ ಒಟ್ಟು ಸಮಾಜದ ಭಾಗವಾಗಿಯೇ ಬೆಳೆದಿದೆ, ಬೆಳೆಯಬೇಕು. ಅನುಭವಗಳ ಆಧಾರದಲ್ಲಿ ಪಕ್ವತೆ ಬೆಳೆಯಬೇಕು. ಅಂತಹ ಪ್ರಯತ್ನ ನಡೆದಿದೆ. ಎಡ ಚಿಂತನೆಯ ಆಧಾರದಲ್ಲಿ ಚಳವಳಿ ಕಟ್ಟುತ್ತಿರುವ ಸಂಘಟನೆಗಳಲ್ಲಿ ಇಂತಹ ಬೆಳವಣಿಗೆ ನಿಚ್ಚಳವಾಗಿ ಕಂಡುಬರುತ್ತಿದೆ.

೯. ಖಂಡಿತ ಇಲ್ಲ.

೧೦. ವ್ಯಕ್ತಿಯ ವ್ಯಕ್ತಿತ್ವ ವಿಕಸನಕ್ಕೆ ಯಾವುದೇ ನಿಜವಾದ ಬದ್ಧತೆಯಿಂದ ಕೆಲಸ ಮಾಡುವ ಚಳವಳಿ ತನ್ನ ಕೊಡುಗೆ ನೀಡಿಯೇ ನೀಡುತ್ತದೆ. ಅದು ಈಗಾಗಲೇ ಹಲವು ವ್ಯಕ್ತಿಗಳ, ಸಂಘಟನೆಗಳ ಸಂದರ್ಭದಲ್ಲಿ ದೃಢಪಟ್ಟಿದೆ. ಚಳವಳಿಯ ಭಾಗವಾಗಿ ಕೆಲಸಮಾಡುವ ಬೆಳೆಯುವ ವ್ಯಕ್ತಿಗಳಿಗೆ ಮಹಿಳಾತನ/ಪುರುಷತನ ಕಾಡುವುದಿಲ್ಲ, ಕಾಡಬಾರದು. ❑



# ಮಹಿಳಾ ಹೋರಾಟದಲ್ಲಿ ಗುರಿಯಷ್ಟೇ ಮಾರ್ಗವೂ ಮುಖ್ಯ

**ಎನ್. ಗಾಯತ್ರಿ**, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

1. ಎಂಬತ್ತರ ದಶಕದ ಆರಂಭದಲ್ಲಿ ಮಹಿಳಾ ಹಕ್ಕುಗಳ ಸಮರ್ಥನೆ ಮತ್ತು ಮಹಿಳಾ ದೌರ್ಜನ್ಯ ವಿರೋಧಿಸಿ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಕಾರ್ಯ ಚಟುವಟಿಕೆಗಳಲ್ಲಿ ಕಾರ್ಯಕರ್ತಳಾಗಿ, ಸಂಘಟಕಳಾಗಿ ಭಾಗವಹಿಸುವುದರ ಮೂಲಕ ಮಹಿಳಾ ಚಳವಳಿಯೊಂದಿಗೆ ನನ್ನ ಸಂಬಂಧ ಆರಂಭವಾಯಿತು. ಮಹಿಳಾಪರ ಕಾನೂನುಗಳಿಗಾಗಿ ಮತ್ತು ಇರುವ ಕಾನೂನಿನಲ್ಲಿ ತಿದ್ದುಪಡಿಗಾಗಿ ನಡೆಸಿದ ಹೋರಾಟಗಳು, ವರದಕ್ಷಿಣೆಯ ಸಾವುಗಳು ಮತ್ತು ಸಮಸ್ಯೆಗಳು, ಅತ್ಯಾಚಾರವೇ ಮುಂತಾದ ಹೆಣ್ಣಿನ ಮೇಲೆ ನಡೆದ ದೌರ್ಜನ್ಯಗಳು – ಇವುಗಳ ವಿರುದ್ಧ ನಡೆಸಿದ ಪ್ರತಿಭಟನಾ ಹೋರಾಟಗಳು. ಫ್ಲೇವಿನ್ ವಿರುದ್ಧ, ಕಿರಾಣಿ ಅಂಗಡಿಗಳಲ್ಲಿ ಮದ್ಯ ಮಾರುವುದರ ವಿರುದ್ಧ, ವಿಶ್ವ ಸುಂದರಿ ಸ್ಪರ್ಧೆ ಮತ್ತು ಕ್ವಿನೆಕ್ರಾನ್ ಗರ್ಭನಿರೋಧಕದ ವಿರೋಧ – ಹೀಗೆ ಮಹಿಳೆಯರ ಸಾಮೂಹಿಕ ಹಿತ ಕಾಯುವ ದಿಕ್ಕಿನಲ್ಲಿ ನಡೆದ ಚಳವಳಿಗಳಲ್ಲಿ ಸುಮಾರು ಎರಡು ದಶಕಗಳಿಗೂ ಹೆಚ್ಚಿನ ಕಾಲ ನನ್ನನ್ನು ನಾನು ತೊಡಗಿಸಿಕೊಂಡಿದ್ದೇನೆ. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಗೆಳತಿಯರೊಂದಿಗೆ 22 ವರ್ಷಗಳ ಕಾಲ 'ಅಚಲ' ಮಹಿಳಾ ಮಾಸಪತ್ರಿಕೆಯನ್ನು ಸಂಪಾದಿಸಿದ್ದನ್ನೂ ನಾನು ಮಹಿಳಾ ಚಳವಳಿಯ ಭಾಗವೆಂದೇ ಭಾವಿಸಿದ್ದೇನೆ. ನಾಲ್ಕು ವರ್ಷಗಳ ಕಾಲ ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವಾಗಲೂ ಅದನ್ನು ಮಹಿಳಾ ಚಳವಳಿಯ ಭಾಗವಾಗಿಯೇ ನೋಡಿದ್ದೇನೆ. ಮಹಿಳಾ ಸಾಕ್ಷರತಾ ಚಳವಳಿಯಲ್ಲಿನ ತೊಡಗುವಿಕೆ – ಎಲ್ಲವೂ ನನ್ನ ದೃಷ್ಟಿಯಲ್ಲಿ ಮಹಿಳಾ ಚಳವಳಿಯ ವಿವಿಧ ಮುಖಗಳು. ನನ್ನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಇವೆಲ್ಲವೂ ಪ್ರಭಾವ ಬೀರಿವೆ.

3. 70–80ರ ದಶಕ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಮಹತ್ವದ ಕಾಲ. ಹಲವು ರೀತಿಯ ಸಾಮೂಹಿಕ ಚಳವಳಿಗಳು ಕ್ರಿಯಾಶೀಲವಾಗಿ ಹೊಸ ವಿಚಾರ, ಹೊಸ ಸಮಾಜದ ಕನಸನ್ನು ಹೊತ್ತುಕೊಂಡು ಒಂದಲ್ಲ, ಒಂದು ಪ್ರಗತಿಪರ ಚಳವಳಿಯಲ್ಲಿ ಜನಸಾಮಾನ್ಯರನ್ನು ತೊಡಗಿಸಿದ ಕಾಲ. ಮಹಿಳಾ ಚಳವಳಿಯಷ್ಟೇ ಉಮೇದು, ಉತ್ಕರ್ಷವನ್ನು ದಲಿತ ಚಳವಳಿ, ಕಾರ್ಮಿಕ ಚಳವಳಿ, ಸಮುದಾಯ, ಬಂಡಾಯದಂತಹ ಸಾಂಸ್ಕೃತಿಕ ಚಳವಳಿಗಳು ಈ ಅವಧಿಯಲ್ಲಿ ಮೆರೆದವು. ಆಗ ಹೋರಾಟದಲ್ಲಿದ್ದವರ ಎಲ್ಲ ಕನಸು ನನಸಾಗಿಲ್ಲ. ಈಗಿನವರ ಕನಸುಗಳೇ ಬೇರೆಯಾಗಿವೆ. ರಾಷ್ಟ್ರೀಯ, ಅಂತಾರಾಷ್ಟ್ರೀಯ ನೆಲೆಯಲ್ಲಿ ಉಂಟಾಗಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಬದಲಾವಣೆಗಳು– ಇದಕ್ಕೆ ಮುಖ್ಯ ಕಾರಣ.

5. ಕೋಮುವಾದವು ವಿಷ ಜ್ವಾಲೆಯಂತೆ ಇಡೀ ಸಮಾಜವನ್ನು ಗಂಡು ಹೆಣ್ಣೆನ್ನದೆ ಸುಡುತ್ತಿದೆ. ಸಮಾಜದ ಎಲ್ಲ ಸಮುದಾಯದೊಂದಿಗೆ ಮಹಿಳಾ ಚಳವಳಿಯು ಕೋಮುವಾದದ ವಿರುದ್ಧ ಹೋರಾಡಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೂ ಮಹಿಳಾ ಚಳವಳಿಗೆ ವಿಶಿಷ್ಟ ಸವಾಲಿದೆ. ಕೋಮುವಾದವೆಂಬ ಸರ್ಪದಲ್ಲಿ ಪುರುಷಾಧಿಪತ್ಯವೆಂಬ ವಿಶಿಷ್ಟ ಹಲ್ಲುಗಳಿವೆ. ಅವುಗಳ ನಾಶದತ್ತಲೂ ಮಹಿಳಾ ಚಳವಳಿ ವಿಶೇಷವಾಗಿ ಕೇಂದ್ರೀಕರಿಸಬೇಕು.

8. ಮಹಿಳೆಯ ಆತ್ಮಶೋಧನೆಯ ಫಲವಾಗಿ ಹೊರಹೊಮ್ಮುವ ಅಂತಃಸತ್ವಕ್ಕೆ ಕಾರಣ ಅವರ ಪರಿಸರ, ಅಂತಹ ಪರಿಸರಕ್ಕಾಗಿ ನಡೆದ ಹೋರಾಟ–ಎಂಬ ಪ್ರಜ್ಞಾವಂತಿಕೆಯು ವ್ಯಕ್ತಿಗಳಲ್ಲಿ ಬೆಳೆಯಬೇಕಾದ ಅಗತ್ಯವಿದೆ. ಮಹಿಳಾ ಚಳವಳಿಯು ಕೇವಲ ಫಲಾನುಭವಿಗಳನ್ನು ಸೃಷ್ಟಿಸದೆ, ತಮ್ಮ ಹಕ್ಕುಗಳ ಬಗ್ಗೆ ಅರಿವು ಪಡೆಯಬಲ್ಲ, ತಮ್ಮ ಅಗತ್ಯಗಳನ್ನು, ಸಾಮರ್ಥ್ಯಗಳನ್ನು ಗುರುತಿಸಿಕೊಳ್ಳಬಲ್ಲ, ನಂತರ ಅದಕ್ಕಾಗಿ ಸಾಮೂಹಿಕವಾಗಿ ಹೋರಾಡಬೇಕೆಂಬ ಪ್ರಜ್ಞಾವಂತಿಕೆಯನ್ನು ಬೆಳೆಸಿಕೊಂಡು ಕ್ರಿಯಾಶೀಲವಾಗಬಲ್ಲ ಸನ್ನಿವೇಶವನ್ನು ಸೃಷ್ಟಿಸುವುದೂ ಮಹಿಳಾ ಚಳವಳಿಯ ಮುಖ್ಯ ಗುರಿಯಾಗಬೇಕು.

9. ಮಹಿಳಾ ಚಳವಳಿ ಯಶಸ್ವಿಯಾಗಿದೆಯೆಂದು ನನಗೆ ಅನ್ನಿಸುವುದಿಲ್ಲ. ಆದರೆ ಕೆಲವಾದರೂ ಚಟುವಟಿಕೆಗಳು ಆ ದಿಕ್ಕಿನತ್ತ ಹೆಜ್ಜೆಯಿಟ್ಟಿರುವುದನ್ನು ಕಾಣಬಹುದಾಗಿದೆ.

10. 'ಮಹಿಳಾ ಚಳವಳಿ'ಯೆಂಬ ಪರಿಕಲ್ಪನೆಯೇನೂ ಏಕಶಿಲಾಕೃತಿಯಲ್ಲ. ಚಳವಳಿಯಲ್ಲಿ ತೊಡಗಿರುವವರ ತಿಳಿವಳಿಕೆ, ಅಗತ್ಯ, ಧ್ಯೇಯಗಳಿಗನುಗುಣವಾಗಿ ಚಳವಳಿಯ ವ್ಯಾಪ್ತಿ ಮತ್ತು ಗಾಂಭೀರ್ಯ ಪ್ರಕಟವಾಗುತ್ತದೆ. 'ಗುರಿಯಷ್ಟೇ ಮಾರ್ಗವೂ ಮುಖ್ಯ' ಎಂಬುವುದನ್ನು ನಂಬುವವಳು ನಾನು. ಈ ಸಂದರ್ಭದಲ್ಲಿ ನನ್ನ ಒಂದು ಅನುಭವವನ್ನು ಹಂಚಿಕೊಳ್ಳಲು ಇಷ್ಟ ಪಡುತ್ತೇನೆ. ಗುಜರಾತ್ ಗಲಭೆ ನಡೆದ ಸಂದರ್ಭ. ಅದನ್ನು ಪ್ರತಿಭಟಿಸಿ ಮಹಿಳಾ ಸಂಘಟನೆಗಳು ವಿವಿಧ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದವು. ಅಂತಹ ಒಂದು ಪ್ರತಿಭಟನಾ ಸಭೆಯಲ್ಲಿ ಮೋದಿಯ ಪ್ರತಿಕೃತಿಯನ್ನು ಮಾಡಿ, ಅದಕ್ಕೆ ಚಪ್ಪಲಿ ಹಾರದಿಂದ ಅಲಂಕರಿಸಿ, ಕೆಲವು ಮಹಿಳೆಯರು ಮಣ್ಣನ್ನು ಎರಚಿಕೊಂಡು , ರಾಗ ರಾಗವಾಗಿ ಹಾಡಿಕೊಂಡು ಮೋದಿಯ ಮೇಲೆ ಬಯ್ಗುಳ ಸುರಿಮಳೆ ನಡೆಸಿದ್ದು ಇನ್ನೂ ನನ್ನ ಮನಸ್ಸಿನಲ್ಲಿ ನೆನಪಿದೆ. ಇದೊಂದು ಅಗ್ಗದ ಪ್ರಚಾರ ಗಳಿಸುವ ಕಾರ್ಯತಂತ್ರ. ಇತ್ತೀಚೆಗೆ ರಾಮಸೇನೆಯವರಿಗೆ ಪಿಂಕ್ ಚಡ್ಡಿ ಕಳುಹಿಸಿದ ಪ್ರತಿಭಟನೆಯನ್ನೂ ನಾನು ಇದೇ ಗುಂಪಿಗೆ ಸೇರಿಸುತ್ತೇನೆ. ಹೋರಾಟದ ಗಾಂಭೀರ್ಯವನ್ನು ಕಳೆಯುವ ಇಂತಹ ಕ್ರಿಯೆಗಳು ಹೋರಾಟದ ವಿಷಯಾಂತರವಾಗುವುದಕ್ಕೆ ನೆರವಾಗುತ್ತವೆ.

❑



# ಮಹಿಳಾ ಚಳವಳಿಯ ನಿರ್ವಚನೆ ಬೇರೆಯಾಗಬೇಕಿಲ್ಲ

***ಚಂದ್ರಕಲಾ ನಂದಾವರ,*** ಅಧ್ಯಕ್ಷರು, ಕರಾವಳಿ ಲೇಖಕಿಯರ ವಾಚಕಿಯರ ಸಂಘ (ರಿ), ಮಂಗಳೂರು

1. ನೇರವಾಗಿ ಯಾವುದೇ ಮಹಿಳಾ ಚಳವಳಿಗಳೊಂದಿಗೆ ಗುರುತಿಸಿಕೊಂಡಿಲ್ಲ. ಆದರೂ ಮಹಿಳಾಪರ ನ್ಯಾಯಯುತ ಹೋರಾಟದಲ್ಲಿ (ಪ್ರತಿಭಟನಾ ಮೆರವಣಿಗೆ, ಧರಣಿ) ಪಾಲ್ಗೊಂಡಿದ್ದೇನೆ. [ಕುದುರೆ ಮೋತಿ ಪ್ರಕರಣ, ಮಂಗಳೂರಿನ ಶ್ರದ್ಧಾನಂದಾಶ್ರಮ ಪ್ರಕರಣ, ಸಲ್ಮಾನ್ ರಶ್ದಿ ಫತ್ವಾ ಪ್ರತಿಭಟನೆ ಇತ್ತೀಚಿಗಿನ ಮಂಗಳೂರಿನ ಪಬ್ ದಾಳಿ]

2. ಮಹಿಳಾ ಚಳವಳಿಗಳನ್ನು ಗಮನಿಸಿದಾಗ ಅವುಗಳು ಬೇರೆ ಬೇರೆ ನಿಟ್ಟಿನಲ್ಲಿ ಮಹಿಳೆಯರ ಸಬಲೀಕರಣಕ್ಕೆ ಕಾರಣಗಳಾಗಿವೆ ಎನ್ನುವುದು ಸತ್ಯ. ನನಗೇ ನೇರವಾಗಿ ಸಿಗಬೇಕಾಗಿದ್ದ ಫಲ ಯಾವುದೂ ಇಲ್ಲದಿದ್ದರೂ ಸಮಾಜದಲ್ಲಿ ಮಹಿಳೆಯರ ಘನತೆ, ಗೌರವ ಹೆಚ್ಚಾದ ಸಂದರ್ಭಗಳು ಸೃಷ್ಟಿಯಾಗಿವೆ ಮತ್ತು ನಾನು ಇಂತಹವುಗಳಲ್ಲಿ ಸೇರಿದ್ದೇನೆ ಎನ್ನುವುದರಿಂದ ನನ್ನ ಕಾರ್ಯವ್ಯಾಪ್ತಿಯಲ್ಲಿ ಹೆಚ್ಚು ಶಿಸ್ತು, ನ್ಯಾಯಯುತವಾದ ಕಾರ್ಯ ನಿರ್ವಹಣೆಯಲ್ಲಿ ಆತ್ಮವಿಶ್ವಾಸ ಹೆಚ್ಚಿದೆ ಎನ್ನುವುದು ಸತ್ಯ.

3. 70–80ರ ದಶಕಗಳಲ್ಲಿದ್ದ ಮಹಿಳಾ ಚಳವಳಿಗಾರರಲ್ಲಿ ಇದ್ದ ಉಮೇದು ಹೋರಾಟದ ಉತ್ಸಾಹಗಳು ಇಂದು ಇಲ್ಲವಾಗಿರುವುದಕ್ಕೆ ಹಲವು ಕಾರಣಗಳಿವೆ. ನಮ್ಮ ಹಿರಿಯ ಎರಡು ಮೂರು ತಲೆಮಾರಿನ ಮಹಿಳೆಯರಿಗೆ ಇಲ್ಲದೆ ಇದ್ದ ಅನೇಕ ಹಕ್ಕುಗಳು ಇಂದು ಶೈಕ್ಷಣಿಕ ಹಕ್ಕುಗಳ ಮೂಲಕ ದೊರೆತಿವೆ. ನಮ್ಮ ಹಿರಿಯರ ಕಾಲದಲ್ಲಿದ್ದ ಸಾಮಾಜಿಕ ಅಸಮಾನತೆ, ಧಾರ್ಮಿಕ ಶೋಷಣೆಗಳು ಇತ್ಯಾದಿಗಳು ಹೋರಾಟಗಳ ಫಲವಾಗಿ ಸಾಮಾಜಿಕ ನ್ಯಾಯದಡಿಯಲ್ಲಿ ಮಾನವ ಹಕ್ಕುಗಳ ಆಶ್ರಯದಲ್ಲಿ ಹೀಗೆ ಸಂವಿಧಾನ ಬದ್ಧವಾಗಿ ಬದಲಾಗುತ್ತಿತ್ತು. ಹೋರಾಟಗಾರರ ಸಿದ್ಧಾಂತಗಳು, ಶ್ರಮಗಳು ಈ ಎಳೆಯ ವಿದ್ಯಾವಂತ ಯುವತಿಯರಿಗೆ ತಿಳಿದಿಲ್ಲ. ತಿಳಿದಿರುವ ಕೆಲವೇ ಮಂದಿ ಕೂಡಾ ತಮ್ಮ ಆರ್ಥಿಕ ಭದ್ರತೆ, ಕಾರ್ಯಕ್ಷೇತ್ರಗಳ ಒತ್ತಡಗಳಿಂದಾಗಿ ತಮಗೆ ಆಗುವ ಅನ್ಯಾಯಗಳ ಜೊತೆಗೆ ಹೊಂದಾಣಿಕೆಯನ್ನು ಬಯಸುತ್ತಾರೆ. ಆದರೆ ಬಹಳ ಸ್ವಾರ್ಥಿಗಳಾಗಿ ಕೌಟುಂಬಿಕ ನೆಲೆಗಳಲ್ಲಿ ವರ್ತಿಸುತ್ತಾರೆ. ಅಲ್ಲಿ ಸಣ್ಣ ಪುಟ್ಟ ವಿಚಾರಗಳನ್ನು (ಹೊಂದಾಣಿಕೆ ಮಾಡಿಕೊಳ್ಳಬಹುದಾದ) ಬಹುದೊಡ್ಡ ಸಮಸ್ಯೆಯಾಗಿಸಿಕೊಂಡು ವಿಚ್ಛೇದನವೊಂದನ್ನು ಸುಲಭ ಪರಿಹಾರವಾಗಿ ಭಾವಿಸುತ್ತಿದ್ದಾರೆ. ಸ್ವಂತ ಬದುಕಿನಿಂದ ವಿಸ್ತಾರವಾಗಿ ಸಾಮಾಜಿಕ ಕಾಳಜಿ, ಇತರರ ಕಷ್ಟಸುಖಗಳಿಗೆ ಸ್ಪಂದಿಸುವ ಭಾವನಾತ್ಮಕ ನೆಲೆಗಳನ್ನು ವಸ್ತುನಿಷ್ಠತೆಯಲ್ಲೇ ಪರಿಭಾವಿಸಿ ದೂರವಿರುತ್ತಾರೆ. ಈ ಸ್ಥಿತಿಗಳಿಗೆ ಇಂದಿನ ಜಾಗತೀಕರಣದಿಂದ ಸಿಕ್ಕಿರುವ ಶೈಕ್ಷಣಿಕ ಅವಕಾಶಗಳು, ಔದ್ಯೋಗಿಕ ಅವಕಾಶಗಳು ಮತ್ತು ಆರ್ಥಿಕ ಭದ್ರತೆ ಕಾರಣಗಳು ಎನ್ನಬಹುದು.

4. ನೀವು ಹೇಳಿರುವಂತೆ ಮಹಿಳೆಯರ ಹಲವಾರು ನಿರೀಕ್ಷೆಗಳು ಚಳವಳಿಗಳಿಂದ ಸಂಘಟನೆಗಳಿಂದ ಸರಕಾರದ ಯೋಜನೆಗಳಿಂದ ನೆರವೇರಿರುವುದು ನಿಜವಾದರೂ ಎಲ್ಲಾ ಸಮಸ್ಯೆಗಳು ಪರಿಹಾರಗೊಂಡಿವೆ ಎಂದರ್ಥವಲ್ಲ. ನಗರದ ಮಧ್ಯಮವರ್ಗದ ಮಹಿಳೆ ಇಂದು ಅನುಭವಿಸುವಷ್ಟು ಎಲ್ಲಾ ರೀತಿಯ ಸ್ವಾತಂತ್ರ್ಯ ಇನ್ನೂ ಗ್ರಾಮೀಣ ಮಹಿಳೆಯರ ಬದುಕಿನಲ್ಲಿ ಸಾಧ್ಯವಾಗಿಲ್ಲ. ಹಾಗೆಯೇ ಬದಲಾವಣೆಗೊಂಡ ಆಧುನಿಕ ಶೈಲಿಯ ಬದುಕಿನಲ್ಲಿ ಅನೇಕ ಸಮಸ್ಯೆಗಳು ಹೊಸದಾಗಿ ನಿರ್ಮಾಣಗೊಂಡಿವೆ. ಹಳ್ಳಿಯ ಗ್ರಾಮೀಣ ಮಹಿಳೆಯರಿಗೆ ಜಾಗೃತಿ ಮೂಡಿಸುವಲ್ಲಿ ಬೇಕಾಗಿರುವ ಕಾರ್ಯಾಗಾರಗಳು ಇವರಿಗೆ ಬೇಕಾಗಿಲ್ಲ. ಕಾರಣ ಇವರ ಸಮಸ್ಯೆಗಳು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ರೂಢಿಯಿಂದ ಬಂದಿರುವಂತಹುವಲ್ಲ. ಆಧುನಿಕ ಯುವತಿಯರ ಸಮಸ್ಯೆಗಳು (i) ವಿಚ್ಛೇದಿತ ಒಂಟಿ ಮಹಿಳೆಯಾಗಿರುವ ಕಾರಣ (ii) ವಿಚ್ಛೇದಿತ ಮಹಿಳೆಯಾಗಿ ಜತೆಗೆ ತಾಯಿಯಾಗಿರುವುದರಿಂದ (iii) ಅವಿವಾಹಿತಳಾಗಿ ಸ್ವಯಂ ನಿರ್ಧಾರ ಕೈಗೊಂಡಿರುವುದರಿಂದ (iv) ಭಾವನಾತ್ಮಕವಾಗಿ ತನ್ನ ಕೌಟುಂಬಿಕ ಚೌಕಟ್ಟಿನಿಂದ ಪ್ರತ್ಯೇಕವಾಗಿ ಉಳಿಯುವುದರಿಂದ, ಇವೇ ಮೊದಲಾದವುಗಳು. ಇವುಗಳನ್ನು ಎದುರಿಸುವಲ್ಲಿ ಆಧುನಿಕ ಯುವತಿ ಚಳವಳಿ, ಧರಣಿ, ಇವುಗಳ ಮೊರೆಹೋಗಬೇಕಾದುದು ಅನಿವಾರ್ಯವಲ್ಲ, ಆಕೆ ನ್ಯಾಯಾಂಗದ ಮೂಲಕ ಒಂಟಿಯಾಗಿ ಹೋರಾಡಿ ನ್ಯಾಯ ಪಡೆಯಲು ಶಕ್ತಳಾಗಿರುತ್ತಾಳೆ. ಆದರೆ ಕೆಲವು ಬಾರಿ ಇಂತಹ ಸಮಸ್ಯೆಗಳ ಹುಟ್ಟಿನಲ್ಲಿ ಅವಳೂ ಪಾಲುದಾರಳಾಗಿರುವುದರಿಂದ ಇತರರ ಮುಂದೆ ಹೇಳಿಕೊಳ್ಳಲಾಗದೆ ನರಳುವ ಸ್ಥಿತಿ ಅಥವಾ ಆತ್ಮಹತ್ಯೆಗೆ ಪ್ರಯತ್ನಿಸುವ ಅಥವಾ ಇತರ ಪುರುಷರ ಸಮಾಜದಿಂದ ವಂಚಿತಳಾಗುವ ಅವಕಾಶಗಳು ಹೆಚ್ಚಾಗುತ್ತಿರುವುದು ವಾಸ್ತವ.

ಬಾಲ್ಯದಿಂದ ಕಷ್ಟವನ್ನು ಎದುರಿಸಬಲ್ಲ ಆತ್ಮಸ್ಥೈರ್ಯ, ಸಾಮಾಜಿಕ ಬದುಕಿನ ಗ್ರಹಿಕೆಗಳು ಇಲ್ಲದೆ ಇದ್ದು ಸುಖದ ಬಾಳು ಪಡೆದಿದ್ದ ಇಂತಹ ಯುವತಿಯರು ಹೆಚ್ಚು ಸ್ವಾರ್ಥಿಗಳೂ (self centered) ಆಗಿರುವುದರಿಂದ ದುರಂತಗಳಾಗುತ್ತವೆ. ಆದ್ದರಿಂದ ಆಧುನಿಕ ಬದುಕಿನಲ್ಲಿ ಸ್ವಾತಂತ್ರ್ಯವು ಸ್ವಚ್ಛಂದವಾಗದಂತೆ ಸಾಮಾಜಿಕ ನ್ಯಾಯದ ಅರಿವು ಮೂಡಿಸುವ, ಮಕ್ಕಳು ಹಣ ಗಳಿಸುವ ಯಂತ್ರಗಳಲ್ಲ, ಶಿಕ್ಷಣವೆಂದರೆ ಹಣವಲ್ಲ ಎಂಬ ಹೊಸ ಪರಿಭಾಷೆಗಳನ್ನು ತಿಳಿಸಬೇಕಾದುದು ಮಹಿಳಾ ಹೋರಾಟದ ಒಂದು ನೆಲೆ ಎಂದು ಭಾವಿಸುತ್ತೇನೆ. ಇದು ಇಂದಿನ ಯುವತಿಯರ ಜೀವನಶೈಲಿಯ ಒಂದು ಮುಖವಾದರೆ, ಇನ್ನೊಂದು ಖಾಸಗೀಕರಣ ಮತ್ತು ಉದಾರೀಕರಣದ ಹಿನ್ನೆಲೆಯಲ್ಲಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಅಸಂಘಟಿತ ಸಿಬ್ಬಂದಿ, ನೌಕರ, ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಇದು ಸ್ನಾತಕೋತ್ತರ ಪದವೀಧರರಿಂದ ಮೊದಲ್ಗೊಂಡು ಪ್ರಾಥಮಿಕಶಾಲೆ ಓದಿದ ಹೆಣ್ಣುಮಕ್ಕಳಿಗೂ ಅನ್ವಯಿಸುತ್ತದೆ. ಇದನ್ನು ಮಹಿಳಾ ಹೋರಾಟಗಾರರು ಗಮನಿಸಿ ನ್ಯಾಯ ಒದಗಿಸಲು ಅವಕಾಶವಿದೆ.

5. ತೀವ್ರವಾದ ಕೋಮುವಾದ ಇಂದಿನ ಬಹುದೊಡ್ಡ ಸಮಸ್ಯೆ. ಇದು ಉತ್ತರ ಭಾರತದಿಂದ ದಕ್ಷಿಣಕ್ಕೂ ಹರಡಿ ಕರ್ನಾಟಕದಲ್ಲಂತೂ ವಿಜೃಂಭಿಸುತ್ತಿದೆ. ಇದು ರಾಜಕೀಯ ಶಕ್ತಿಗಳ ನಿರ್ಮಾಣ ಎಂದರೆ

ತಪ್ಪಲ್ಲ. ಇಲ್ಲಿ ಬಲಿಯಾಗುತ್ತಿರುವುದು ಮಹಿಳೆಯರು ಮತ್ತು ಮುಗ್ಧ ಮಕ್ಕಳು. ಇದನ್ನು ಎದುರಿಸುವಲ್ಲಿ ಸಂವಿಧಾನ ಬದ್ಧ ನೆಲೆಗಳನ್ನು ಗಟ್ಟಿಗೊಳಿಸುವತ್ತ ಜನರಿಗೆ ಸಂವಿಧಾನದ ಪರಿಚಯ, ಹಕ್ಕು ಹಾಗೂ ಕರ್ತವ್ಯಗಳ ತಿಳಿವಳಿಕೆ ಮತ್ತು ದೇಶದ ಏಕತೆ ಸಾಮಾಜಿಕವಾಗಿ ಎಷ್ಟು ಮುಖ್ಯವೋ ಅಷ್ಟೇ ಆರ್ಥಿಕವಾಗಿಯೂ ಮುಖ್ಯ ಎಂಬುದನ್ನು ತಿಳಿಯಪಡಿಸುವ ಚಳವಳಿ ನಡೆಯಬೇಕು. ಜನಾಂದೋಲನವೇ ಆಗಬೇಕು. ದೈವ ನಿರ್ಮಿತವಲ್ಲದ ಜಾತಿ, ಮತ, ಧರ್ಮಗಳ ಅವಾಸ್ತವಿಕ ನಂಬಿಕೆಗಳನ್ನು ದೂರಮಾಡುವ ಮತ್ತು ಮನುಷ್ಯತ್ವ, ಮಾನವ ಧರ್ಮದ ಪರಿಕಲ್ಪನೆ ಮತ್ತು ಆಚರಣೆಗಳನ್ನು ರೂಢಿಗೆ ತರುವಲ್ಲಿ ಆಗ್ರಹದ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. [ಉದಾ: ನೀವು ಕುಪ್ಪಳಿಯಲ್ಲಿ ನಡೆಸಿದಂತಹ ಕಾರ್ಯಕ್ರಮ]

6. ಜಾಗತೀಕರಣದಿಂದ ಮಹಿಳೆಯರು ಆರ್ಥಿಕ ಸಬಲೀಕರಣ, ಹಾಗೂ ಸುಭದ್ರತೆಯನ್ನು ಅನುಭವಿಸುತ್ತಿದ್ದಂತೆಯೇ ಸಾಮಾಜಿಕವಾದ, ಧಾರ್ಮಿಕವಾದ ರೂಢಿಯ ಮೂಢನಂಬಿಕೆಗಳನ್ನು ತಿರಸ್ಕರಿಸುತ್ತಿದ್ದಾರೆ. ತಮ್ಮ ಬದುಕಿನ ಬಗೆಗೆ ಸ್ವಯಂ ನಿರ್ಧಾರಗಳ ಜತೆಗೆ ಅವುಗಳ ನಿರ್ವಹಣೆಯ ಹೊಣೆಯನ್ನೂ ನಿಭಾಯಿಸುತ್ತಿದ್ದಾರೆ. ಇದು ಮಹಿಳೆಯರ ವಿವೇಚನೆಯನ್ನು ಬಯಸುತ್ತದೆ. ಆದರೂ ಇದು ಮಹಿಳಾ ಸಮುದಾಯಕ್ಕೆ ಧನಾತ್ಮಕವಾದುದು. ಆದರೆ ಧಾರ್ಮಿಕ ಮೂಲಭೂತವಾದಿಗಳು – ಸಂಪ್ರದಾಯವಾದಿಗಳು ಒಡ್ಡುವ ಅಡ್ಡಿ ಆತಂಕಗಳೇ ಇಲ್ಲಿನ ಸಮಸ್ಯೆಗಳು. ಈ ಬದಲಾದ ಬದುಕಿನ ಶೈಲಿಯಲ್ಲಿ ವಿವಾಹ ಸಂಸ್ಥೆಯೆನ್ನುವುದು ಸಾಮಾಜಿಕ ಬದುಕಿನ "ಪುಟ್ಟ ಪ್ರತಿಮೆ." ಇಲ್ಲಿ ಇಂದು ಹೆಣ್ಣು ವಿವಾಹ "ಬಂಧನ"ವನ್ನು ಇಷ್ಟಪಡದೆ ಜೀವನ ಸಂಗಾತಿ (life partner) ಎನ್ನುವ ಪರಿಕಲ್ಪನೆಯಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತಿದ್ದಾಳೆ. ಇದು ಕೂಡಾ ನಕಾರಾತ್ಮವೇ ಆಗುವುದು. ಅವರಿಬ್ಬರ ಬದುಕು ಸಮಸ್ಯೆಗಳಾಗದೆ, ಸಾಮಾಜಿಕ ಬದ್ಧತೆಯಿಂದ ಕೂಡಿದಾಗ ಮಾತ್ರ. ಇಲ್ಲವಾದರೆ ಇದು ಅನೇಕ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಇಲ್ಲಿಯೂ ನರಳುವವಳು ಹೆಣ್ಣೇ ಎನ್ನುವುದು ಸತ್ಯ.

(ii) ಇಂದು ಅಂತರ್ಜಾತೀಯ, ಅಂತರ್ಮತೀಯ ವಿವಾಹಗಳು ಹೆಚ್ಚು ಹೆಚ್ಚಾಗಿ ನಡೆಯುತ್ತಿವೆ. ಇದು ಕೂಡಾ ನಮ್ಮ ಎಳೆಯ ತಲೆಮಾರು ಕೋಮುವಾದಕ್ಕೆ ದಿಟ್ಟವಾಗಿ ಪ್ರತಿಕ್ರಿಯಿಸುವ ಮೌನ ಪ್ರತಿಭಟನೆ ಎಂದೇ ಹೇಳಬಹುದು. ಇದು ಕೂಡಾ ಅವರ ಬದುಕಿಗೆ ಸಮಸ್ಯೆಗಳನ್ನು ಖಂಡಿತಾ ಒಡ್ಡುತ್ತದೆ. ಸಮಸ್ಯೆಗಳಾಗದೆ ಇರಬೇಕಾದರೆ ಮಾನವ ಕುಲದ ಕಲ್ಪನೆಯಲ್ಲಿ ಇದು ಸಕಾರಾತ್ಮಕ ಧೋರಣೆ, ಇದಕ್ಕೆ ಪ್ರೋತ್ಸಾಹ ಅಗತ್ಯವಾಗುತ್ತದೆ.

(iii) ಇಂದಿನ ಯುವ ಪೀಳಿಗೆಯ ಆಧುನಿಕ ವೃತ್ತಿ ಜೀವನದ ಶೈಲಿಯಲ್ಲಿ ಇನ್ನೊಂದು ವಿಶಿಷ್ಟ ಪರಿಕಲ್ಪನೆ ಮೂಡುತ್ತಿದೆ. ಅದೇ "ಮಕ್ಕಳು ಬೇಡ" ಎನ್ನುವ ವಾದ. ಇಲ್ಲಿ ತಾಯ್ತನದ ತಿರಸ್ಕಾರದ ಹಿನ್ನೆಲೆಯಲ್ಲಿ ಮಹಿಳೆಯನ್ನು ದೂಷಿಸುವ ಅಗತ್ಯವಿಲ್ಲ. ಜತೆಗೆ ಮಕ್ಕಳು, ಹೆತ್ತವರ ಬಾಂಧವ್ಯ ಗಟ್ಟಿಗೊಳಿಸುತ್ತಾರೆ ಎಂಬ ನಂಬಿಕೆ ಪೂರ್ಣ ಸತ್ಯವಾದುದಲ್ಲ. ಆದ್ದರಿಂದ ಜನಸಂಖ್ಯಾಸ್ಫೋಟದ ಹಿನ್ನೆಲೆಯಲ್ಲಿ ಇದು ಧನಾತ್ಮಕವಾದ ಅಂಶ ಎನ್ನುವುದರ ಜತೆಗೆ ಮನಃಶಾಸ್ತ್ರಜ್ಞರು ಕೂಡಾ ಇಂತಹ ಭಾವನೆಗಳು ನಂಬಿಕೆಗಳಾಗಿ ಪರಿವರ್ತನೆಗೊಳ್ಳುತ್ತಿರುವುದು ಅವರ ಜೀವನ ಶೈಲಿಯಿಂದ ಎನ್ನುತ್ತಾರೆ. ಹೀಗಿದ್ದಾಗ ಜೀವನಶೈಲಿ ಬದಲಾದ ಹಿನ್ನೆಲೆಯಲ್ಲಿ ಈ ಎಳೆಯರು ಅದೆಷ್ಟೋ ಅನಾಥ ಮಕ್ಕಳನ್ನು ಪೋಷಿಸುವ ಸಾಮಾಜಿಕ ಜವಾಬ್ದಾರಿಯನ್ನು ನಿಭಾಯಿಸುತ್ತಿರುವುದು ಅಥವಾ ದತ್ತು ತೆಗೆದುಕೊಳ್ಳುವುದು "ಮಾನವ ಧರ್ಮ"ಕ್ಕೆ ಭೂಷಣವಾದುದು.

(iv) ದೇವರ ಮೇಲಿನ ಶ್ರದ್ಧೆ ಎನ್ನುವುದನ್ನು ಮಾನವೀಯ ಕಾಳಜಿಯಲ್ಲಿ, ಕಾಯಕವೇ ಕೈಲಾಸ ಎನ್ನುವುದರಲ್ಲಿ, ಸುತ್ತಮುತ್ತಲಿನವರೊಂದಿಗೆ ಸಂತಸವನ್ನು ಹಂಚುವ ಮೂಲಕ ಸಂತೋಷ ಪಡ್ತ ತೀರ್ಥಕ್ಷೇತ್ರ ಯಾತ್ರೆಗಳಿಗಿಂತ ಪ್ರಕೃತಿಯ ತಾಣಗಳನ್ನು ನೋಡಿ ಅಹಂಕಾರಗಳನ್ನು ಕಳೆದುಕೋ ಎನ್ನುವಂತಹ ಹೊಸ ನಂಬಿಕೆಗಳು. ಈ ಕಾಲಘಟ್ಟದ ಎಳೆಯರ ವಿಚಾರಗಳು. ಅವುಗಳ ಆಚರಣೆ ಹೊಸ ನಂಬಿಕೆಗಳಿಗೆ, ಹೊಸ ಆಚರಣೆಗಳಿಗೆ, ಪರ್ಯಾಯ ಸಂಸ್ಕೃತಿಗೆ ಅವಕಾಶ ಮಾಡಿಕೊಟ್ಟಲ್ಲಿ ಇದು ಇಂದಿನ ಜಗತ್ತಿಗೆ ಹಿಂಸೆಯನ್ನು ಎದುರಿಸಲು ಬೇಕಾದ ನೈತಿಕ ಶಕ್ತಿ ನೀಡಬಹುದಲ್ಲವೇ?

(v) ರಾಜಕೀಯ ಸಮಸ್ಯೆಗಳನ್ನು ಹೇಳುವುದಿದ್ದಲ್ಲಿ ನಮ್ಮ ದೇಶದ ಒಳಗಿನ ಪರಿಸ್ಥಿತಿಯಲ್ಲಿ ತಳಸ್ತರದಲ್ಲಿ ಇಂದು ಮಹಿಳೆಯರು ಸ್ವಲ್ಪಮಟ್ಟಿಗೆ ಪುರುಷ ಪ್ರಧಾನ ಚಿಂತನೆಗಳಿಂದ ಹೊರಬರುತ್ತಿದ್ದಾರೆ. ಮತ್ತು ತಮ್ಮ ರಾಜಕೀಯ ಶಕ್ತಿಯನ್ನು ಅರಿತಿದ್ದಾರೆ. ಆದರೆ ಅದೇ ರಾಜ್ಯಮಟ್ಟದಲ್ಲಿ ರಾಷ್ಟ್ರಮಟ್ಟದಲ್ಲಿ ಯಾವ ರಾಜಕೀಯ ಪಕ್ಷವೂ 33% ಸ್ಥಾನಗಳನ್ನು ನೀಡುವಲ್ಲಿ ಮುಂದಾಗಿಲ್ಲ. ಇದಕ್ಕಾಗಿ ಹೋರಾಟ ಮುಂದುವರಿಯಬೇಕಾಗಿದೆ. ಆದರೆ ರಾಜಕಾರಣದ ಹೊಲಸು, ಅಶುಚಿತ್ವ, ಭ್ರಷ್ಟಾಚಾರಗಳನ್ನು ಮೊದಲು ನಿವಾರಿಸುವತ್ತ ಮಹಿಳೆಯರು ಹೋರಾಟ ಮಾಡಬೇಕಾಗಿದೆ. [ಇದು ಕೇವಲ ಮಹಿಳೆಯರಿಗೆ ಮೀಸಲಾದ ವಿಷಯವಲ್ಲ. ಹಾಗೆ ನೋಡಿದರೆ ಯಾವ ವಿಷಯಗಳೂ ಮಹಿಳೆಯರದ್ದು ಮಾತ್ರ ಎನ್ನುವ ಹಾಗೆ ಇಲ್ಲವೇ ಇಲ್ಲ.] ಇಂದಿನ ಜಾಗತೀಕರಣದ ಅವಕಾಶದಲ್ಲಿ ಯುವತಿಯರು ಸಮನಾಗಿ ವಿದೇಶಗಳಲ್ಲಿಯೂ ಅಧ್ಯಯನ ಮಾಡುವ ಅವಕಾಶ ಒದಗಿರುವುದು ಧನಾತ್ಮಕವಾದ ವಿಷಯ. ಹಾಗೆಯೇ ನೌಕರಿಯ ಅವಕಾಶವೂ ಕೂಡಾ. ಆದರೆ ಇವುಗಳಲ್ಲಿ ಎಷ್ಟೋ ಬಾರಿ ಮೋಸ ಹೋಗುವ ಸಂದರ್ಭಗಳು – ಯುವಕರೂ ಸೇರಿದಂತೆ – ನಿರ್ಮಾಣವಾಗುವುದನ್ನು ನೋಡುತ್ತೇವೆ. ಸಂವಾದ, ಮಾಹಿತಿ, ಪಡೆಯುವ ಹೊಣೆ ಯುವ ಜನಾಂಗದ್ದು ಎನ್ನುವ ತಿಳಿವಳಿಕೆ ಹೆತ್ತವರೊಂದಿಗೆ ಅವರಿಗೂ ಬೇಕಾಗಿದೆ.

7. ಹೌದು. ಆದರೆ ಹಿಂಸೆ, ಕ್ರೌರ್ಯಗಳ ಪ್ರಮಾಣ ಹೆಚ್ಚಾಗಿವೆ ಅನ್ನಿಸುವುದಿಲ್ಲ. ಆದರೆ ಇಂದು ಸುದ್ದಿಮಾಧ್ಯಮ, ದೃಶ್ಯಮಾಧ್ಯಮಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಅವುಗಳು ಹಿಂಸೆ, ಕ್ರೌರ್ಯಗಳನ್ನು ವಿಜೃಂಭಿಸಿ ಸ್ಪರ್ಧೆಗಿಳಿಯುವುದರಿಂದ ಹಾಗೆ ಅನ್ನಿಸುತ್ತದೆ. ಇಂತಹ ಘಟನೆಗಳು ಮಾಹಿತಿ ಹಕ್ಕಿನಡಿಯಲ್ಲಿ ಮಾಹಿತಿಯಾಗಿ ಪ್ರಕಟವಾದರೆ ಬಹುಶಃ ಇಂತಹ ಘಟನೆಗಳ ಸಂಖ್ಯೆ ಕಡಿಮೆಯಾಗಬಹುದು ಅನ್ನಿಸುತ್ತದೆ. ಅಲ್ಲದೆ ಹಿಂದೆಯೂ ಇಂತಹ ಕ್ರೌರ್ಯ, ಅತ್ಯಾಚಾರ, ಹಿಂಸೆಗಳ ಘಟನೆಗಳು ನಡೆಯುತ್ತಿದ್ದವು. ಕೌಟುಂಬಿಕ ದೌರ್ಜನ್ಯಗಳೂ ನಡೆಯುತ್ತಿದ್ದವು. ಆದರೆ ಅವುಗಳು ಗುಟ್ಟಾಗಿಯೇ ಪ್ರಚಾರ ಪಡೆಯುತ್ತಿದ್ದವು. ಹಾಗೆಯೇ ಗುಟ್ಟಾಗಿ ಅಳಿದು ಹೋಗುತ್ತಿದ್ದವು. ಮಹಿಳೆ ಮಾತ್ರ ಆಗಲೂ ಬಲಿಪಶುವೇ!

8. ನೀವು ಸ್ವೀಕರಿಸಿಕೊಂಡಿರುವ ಮಹಿಳಾ ಚಳವಳಿಗಳ ಹೋರಾಟ, ತಾತ್ವಿಕತೆಗಳು ಮಹಿಳೆಯರ ಆತ್ಮಶೋಧನೆಯ ಮೂಲಕ ಅಂತಃಸತ್ವ

ಹೆಚ್ಚಿಸಿಕೊಳ್ಳುವಲ್ಲಿ ಖಂಡಿತವಾಗಿಯೂ ಕೊಡುಗೆ ನೀಡಿವೆ. ಬದಲಾವಣೆಯ ನಿಟ್ಟಿನಲ್ಲಿ ಫಲಪ್ರದವಾಗಿವೆ. ಇಂದಿನ ಸಂದರ್ಭಗಳಲ್ಲಿ ಎರಡು ನಿಟ್ಟಿನಲ್ಲಿ:

(i) ಅವಿದ್ಯಾವಂತ ಗ್ರಾಮೀಣ ಮಹಿಳೆಯರು ಅದರಲ್ಲೂ ರೈತಾಪಿ ವರ್ಗದ ಮಹಿಳೆಯರ ಹೋರಾಟ. ಕೃಷಿ ಭೂಮಿಯನ್ನು ಉಳಿಸಿಕೊಳ್ಳುವಿಕೆಯಲ್ಲಿ ಅವಳ ಬದುಕಿನ ಉಳಿವು.

(ii) ಆಧುನಿಕ ಶೈಲಿಯ ವಿದ್ಯಾವಂತ ಆರ್ಥಿಕ ಸಬಲೆಯರ ಬದುಕಿನ ಹೊಸ ಸಮಸ್ಯೆಗಳ ಪರಿಹಾರಗಳ ನಿಟ್ಟಿನಲ್ಲಿಯೂ ಹೋರಾಟಗಳ ಅಗತ್ಯವಿದೆ. ಮಹಿಳಾ ಚಳವಳಿಯ ನಿರ್ವಚನೆ ಬೇರೆಯಾಗ ಬೇಕಿಲ್ಲ. ಯಾಕೆಂದರೆ ವಿದ್ಯಾವಂತ ಆರ್ಥಿಕ ಸದೃಢ ಎನ್ನುವ ಮಹಿಳೆಗೂ ತನ್ನ ಅಂತಃಸತ್ವದ ಅರಿವಿನ ಕೊರತೆ ಇದೆ.

10. "ಮಹಿಳಾತನ" ಎಂದಿನಿಂದ ನನ್ನಲ್ಲಿ ಇತ್ತು ಎನ್ನುವುದನ್ನು ಯೋಚಿಸಿದಾಗ ಬಹುಶಃ ನನ್ನ ಬಾಲ್ಯದಿಂದಲೇ ಶಾಲಾಜೀವನದಲ್ಲೇ ಇತ್ತು ಎಂದು ಭಾವಿಸುತ್ತೇನೆ. ಅದಕ್ಕೆ ಉದಾಹರಣೆಗಳಿವೆ. ಹಾಗೆಯೇ ಬೆಳೆದಂತೆ ಸುತ್ತಮುತ್ತಲ ಬದುಕಿನ ಅನುಭವದ ಗ್ರಹಿಕೆಯಲ್ಲಿ, ವೃತ್ತಿಜೀವನದಲ್ಲೆಲ್ಲಾ "ಮಹಿಳಾತನ"ದ ನಿಚ್ಚಳವಾದ ಸ್ಪಷ್ಟವಾದ ಅರಿವು ಸಿಕ್ಕಿದೆ. ಸಾಧ್ಯವಾದಷ್ಟು ಮಟ್ಟಿಗೆ "ಮಹಿಳಾತನ"ದ ನನ್ನ ವ್ಯಕ್ತಿತ್ವಕ್ಕೆ ಮತ್ತು ಸಾಮೂಹಿಕವಾದ "ಮಹಿಳಾತನ" ನ್ಯಾಯಕ್ಕೆ ಘನತೆಗಾಗಿ ಹೋರಾಟದಲ್ಲಿ ಪಾಲ್ಗೊಂಡಿದ್ದೇನೆ. "ಮಹಿಳಾತನ" ಅಥವಾ "ಸ್ತ್ರೀತ್ವ" ಎನ್ನುವುದು ಪುರುಷದ್ವೇಷಿಯೂ ಅಲ್ಲ, ಸ್ತ್ರೀಪಕ್ಷಪಾತವೂ ಅಲ್ಲ. ಅದು ಮಹಿಳೆಗೆ ಸಲ್ಲತಕ್ಕ, ಸಹಜವಾದ ಮಾನವೀಯ ಘನತೆ ಎಂದು ಭಾವಿಸುತ್ತೇನೆ, ನಂಬಿದ್ದೇನೆ. ಅದನ್ನೇ ನನ್ನ ಬರವಣಿಗೆಯಲ್ಲಿ, ಭಾಷಣಗಳಲ್ಲಿ ಪ್ರತಿಪಾದಿಸಿದ್ದೇನೆ.

❑



# ಮರು ನಿರ್ವಚನಕ್ಕೆ ಮೊದಲು ಸ್ಪಷ್ಟವಾದ ವ್ಯಾಖ್ಯಾನ ಅಗತ್ಯ

***ಮಲ್ಲಿಗೆ,*** ಅಧ್ಯಕ್ಷರು, ಸಮಾನತಾ ಮಹಿಳಾ ವೇದಿಕೆ, ಬೆಂಗಳೂರು

ಮಹಿಳಾ ಚಳವಳಿಯನ್ನು ಎಲ್ಲಿಂದ ಗುರುತಿಸಿದ್ದೀರಿ ಮತ್ತು ಯಾವ ನೆಲೆಯಲ್ಲಿ ವ್ಯಾಖ್ಯಾನಿಸಿದ್ದೀರಿ ಎಂಬುದರ ಬಗ್ಗೆ ಇಲ್ಲಿ ಹೆಚ್ಚು ವಿವರಗಳಿಲ್ಲ. ಆದ್ದರಿಂದ 70ರ ದಶಕದಿಂದೀಚೆ ಸಾಕಷ್ಟು ನಿಖರವಾಗಿ ಸ್ತ್ರೀವಾದವನ್ನು ಆಧರಿಸಿದ ಮಹಿಳೆಯರ ಸಾಮೂಹಿಕ ಆಂದೋಲನ ಹಾಗೂ ಸ್ವಾತಂತ್ರ್ಯ ಪೂರ್ವದ ಹೆಚ್ಚು ನಿಖರತೆಯಿಲ್ಲದಿದ್ದರೂ ಸಮೂಹವಾಗಿ ಮಹಿಳೆಯರು ತಮ್ಮ ಕೆಲವು ಹಕ್ಕುಗಳಿಗಾಗಿ ತೊಡಗಿಕೊಂಡ ಹೋರಾಟಗಳು ಎಂದು ಅರ್ಥೈಸಿಕೊಳ್ಳಬಹುದೆನ್ನಿಸುತ್ತದೆ. ಅದೇ ನಿಟ್ಟಿನಲ್ಲಿ ಸಮಾನತಾ ಮಹಿಳಾ ವೇದಿಕೆ ದೃಷ್ಟಿಯಲ್ಲಿ ಇಲ್ಲಿನ ಪ್ರಶ್ನೆಗಳಿಗೆ ಉತ್ತರಿಸಿದ್ದೇವೆ.

1. ಮಹಿಳಾ ಚಳವಳಿಯನ್ನು ಕಟ್ಟುವುದನ್ನೇ ಪ್ರಥಮ ಆದ್ಯತೆಯನ್ನಾಗಿ ಇಟ್ಟುಕೊಂಡಿರುವ, ಮಹಿಳಾ ಸಮಾನತೆಗಾಗಿ ಮತ್ತು ಇಡೀ ಸಮಾಜದ ವಿಮೋಚನೆಗಾಗಿ ಹೋರಾಡುವ ಸಂಘಟನೆಯಾಗಿ ನಮ್ಮನ್ನು ನಾವು ಗುರುತಿಸಿಕೊಳ್ಳುತ್ತೇವೆ.

2. ಮಹಿಳಾ ಚಳವಳಿ ಎಂಬುದು ಎಂದಿಗೂ ಒಂದೇ ಧಾರೆಯಾಗಿ ಭಾರತದ ಎಲ್ಲಾ ಹಿನ್ನೆಲೆ-ಸ್ತರಗಳ ಮಹಿಳೆಯರ ಪ್ರತಿನಿಧಿಯಾಗಿ ಇರಲಿಲ್ಲವಾದ್ದರಿಂದ ಮಹಿಳೆಯರೆಲ್ಲರೂ ಸಮಾನವಾಗಿ ಇದರ ನೇರವಾದ ಫಲಾನುಭವಿಗಳೆಂದು ಹೇಳಲಾಗುವುದಿಲ್ಲ. 90ರ ದಶಕದವರೆಗಿನ ಮಹಿಳಾ ಹೋರಾಟಗಳನ್ನು ಗಮನಿಸಿದರೆ ಅವು ಮುಖ್ಯವಾಗಿ ಮಹಿಳೆಯರ ಮೇಲಿನ ಹಿಂಸೆಯ ಸುತ್ತ ಕೇಂದ್ರೀಕರಿಸಿದ್ದು ಅಥವಾ ಒಂದು ಮಟ್ಟಕ್ಕೆ ಶಿಕ್ಷಿತರಾದ ನಗರಗಳ ಮಹಿಳೆಯರ ಬೇಡಿಕೆಗಳನ್ನು ಮುಂದಿಟ್ಟುಕೊಂಡಿದ್ದು ಅವುಗಳ ಮಿತಿಯಾಗಿತ್ತೆಂಬ ಚರ್ಚೆ ಹಾಗೂ ವಿಮರ್ಶೆ ಈಗಾಗಲೇ ಚರ್ಚಿತವಾಗುತ್ತಿದೆ. ಆದರೆ ಅದರ ಪರಿಣಾಮವು ನೇರವಾಗಿ ಅಥವಾ ಪರೋಕ್ಷವಾಗಿ ಒಂದಲ್ಲಾ ಒಂದು ಮಟ್ಟದಲ್ಲಿ ಭಾರತದ ಬಹುಪಾಲು ಮಹಿಳೆಯರ ಮೇಲೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಆಗಿತ್ತೆಂಬುದು ನಿರ್ವಿವಾದ. ಈ ಪರಿಣಾಮದ ಕಾರಣದಿಂದಲೇ ಮಹಿಳೆಯರು ಸಾಮೂಹಿಕವಾಗಿ ಮಾತ್ರವಲ್ಲದೆ ವೈಯಕ್ತಿಕ ನೆಲೆಯಲ್ಲಿಯೂ ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವ ಮಟ್ಟದ ದಿಟ್ಟತನವನ್ನು ಬೆಳೆಸಿಕೊಳ್ಳಲು ಸಾಧ್ಯವಾಯಿತು. ಇದರ ಒಂದು ಅಂಶವನ್ನು ಹಾಗೂ ಮಿತಿಯನ್ನು ನೀವು ಕೂಡಾ ಪ್ರಶ್ನೆ-4ರ ಆರಂಭದಲ್ಲಿ ಸೂಚಿಸಿದ್ದೀರಿ.

3. 'ಅಂದು ಇತ್ತು-ಇಂದು ಇಲ್ಲ' ಎಂಬುದು ವಸ್ತುಸ್ಥಿತಿಯನ್ನು ಅತ್ಯಂತ ಸರಳೀಕರಿಸಿದಂತಾಗುತ್ತದೆ. ಈ ರೀತಿಯ ಸರಳೀಕರಣ ಬಹುಶಃ ಇಂದಿನ ಪರಿಸ್ಥಿತಿಯನ್ನು ಗಮನಿಸಿದಾಗ ಸಾಧ್ಯವಿಲ್ಲ. ಅಂದಿನ ಸಾಮಾಜಿಕ-ಆರ್ಥಿಕ-ರಾಜಕೀಯ ಸನ್ನಿವೇಶಕ್ಕೂ ಇಂದಿಗೂ ಹಲವು ವ್ಯತ್ಯಾಸಗಳಿರುವುದರಿಂದ ಅದರ ಹಿನ್ನೆಲೆಯಲ್ಲಿಯೇ ಮಹಿಳಾ ಚಳವಳಿಯನ್ನೂ ವಿಶ್ಲೇಷಿಸಬೇಕಾಗುತ್ತದೆ. ಆದ್ದರಿಂದ ಅಂದು ಇದ್ದಂತೆ 'ಏಕತೆಯ ಭಾವನೆ' ಮತ್ತು ಅದರಿಂದಾಗಿ ಹುಟ್ಟುವ ರಭಸ ಇಂದಿಲ್ಲ ಎಂದು ಹೇಳಬಹುದು. ಇದಕ್ಕೆ ಕೆಲವು ಕಾರಣಗಳನ್ನು ಸಂಕ್ಷಿಪ್ತವಾಗಿ ಹೀಗೆ ಗುರುತಿಸಬಹುದೆನ್ನಿಸುತ್ತದೆ.:

   ಅ. ಅಂದು ಚಳವಳಿ ಸೀಮಿತವಾದ ಕೆಲವೇ ಬೇಡಿಕೆಗಳನ್ನು ಪ್ರಧಾನವಾಗಿ ಕೇಂದ್ರೀಕರಿಸಿತ್ತು. ತನ್ನ ಆಶಯದಲ್ಲಿ, ಘೋಷಣೆಗಳಲ್ಲಿ ಮತ್ತು ಚಳವಳಿಯ ಕೆಲವು ವಲಯಗಳಲ್ಲಿ ಅದರ ದೃಷ್ಟಿಕೋನ ವಿಶಾಲವೂ, ದೂರಗಾಮಿಯೂ ಆಗಿದ್ದರೂ ಆಚರಣಾತ್ಮಕವಾಗಿ ಅದು ಹಾಗಿರಲಿಲ್ಲ. ಆದ್ದರಿಂದ ಕೆಲವು ಅಂಶಗಳ ಸುತ್ತ ಭಾರತದಲ್ಲಿ ಮಹಿಳಾ ಸಂಘಟನೆಗಳ ನೇತೃತ್ವದಲ್ಲಿ ಮಹಿಳೆಯರು ಏಕಕಾಲದಲ್ಲಿ ಬೀದಿಗಿಳಿಯುವುದು ಸಾಧ್ಯವಾಗಿತ್ತು.

ಆ. ಸಾಮಾಜಿಕ-ಆರ್ಥಿಕ-ರಾಜಕೀಯ ಸ್ಥಿತಿಗತಿಗಳಲ್ಲಿ ಉಂಟಾಗುತ್ತಿದ್ದ ಬದಲಾವಣೆಗಳಿಂದಾಗಿ ಒಂದು ಸ್ತರದ ಮಹಿಳೆಯರಲ್ಲಿ ಮೂಡುತ್ತಿದ್ದ ಹೊಸ ಪ್ರಜ್ಞೆ ಈ ಚಳವಳಿಯ ಬಲವರ್ಧನೆಗೆ ಪೂರಕವಾಗಿತ್ತು. ಇಂದು ಈ ಪರಿಸ್ಥಿತಿ ಬದಲಾಗಿದೆ.

ಇ. 70-80ರ ದಶಕದಲ್ಲಿ ಅತ್ಯಂತ ಬಿರುಸನ್ನು ಹೊಂದಿದ್ದ ಇತರ ಚಳವಳಿಗಳೂ ಸಹ ಇಂದು ಅದೇ ಬಿರುಸನ್ನು ಹೊಂದಿಲ್ಲದಿರುವ ಹಿನ್ನೆಲೆಯಲ್ಲಿಯೂ ನಾವು ಇದನ್ನು ನೋಡಬಹುದು.

ಈ. ಕಾಲಕಾಲಕ್ಕೆ ಯಾವುದೇ ಗಂಭೀರವಾದ ಉದಾತ್ತ ಆಶಯಗಳನ್ನು ಹೊಂದಿರುವ ಚಳವಳಿಗೆ ಅಗತ್ಯವಾದ ಆತ್ಮನಿರೀಕ್ಷಣೆ ಮಹಿಳಾ ಚಳವಳಿಯಲ್ಲಿ ಅಗತ್ಯವಿದ್ದ ಮಟ್ಟಿಗೆ ನಡೆಯದಿರಬಹುದು.

ಉ. ಅಂದು ಪ್ರಭುತ್ವವೇ ಚಳವಳಿಯ ಏಕಮಾತ್ರ ಟಾರ್ಗೆಟ್ ಆಗಿತ್ತು. ಆದರೆ ಜಾಗತೀಕರಣದ ಕಾಲಘಟ್ಟದಲ್ಲಿ ಒಂದೆಡೆ ದೇಶೀಯ ಪ್ರಭುತ್ವಗಳೇ ಅಪ್ರಸ್ತುತವೇನೋ ಎಂಬಂತಿರುವಾಗ ವಿದೇಶೀ ಫಂಡಿಂಗ್‌ನ ಹರಿವು ವ್ಯಾಪಕವಾಗಿದೆ, ಇದರ ಜೊತೆಗೆ ಮೈಕ್ರೋ ಫೈನಾನ್ಸ್ ಎಂಬ ಹೆಸರಿನಲ್ಲಿ (ಮಹಿಳಾ ಸಬಲೀಕರಣಕ್ಕೆ ಅದರಿಂದುಂಟಾಗಿರುವ ಸಕಾರಾತ್ಮಕ ಪರಿಣಾಮವನ್ನು ಗುರುತಿಸುತ್ತಲೇ) ಸ್ವಸಹಾಯ ಸಂಘಗಳು ಅತ್ಯಂತ ವ್ಯಾಪಕವಾಗಿ ಹಬ್ಬಿವೆ. ಇಂತಹ ಸಂದರ್ಭದಲ್ಲಿ ಚಳವಳಿ ತನ್ನ ಟಾರ್ಗೆಟ್ ಗುರುತಿಸುವುದು ಕಠಿಣವಾಗಿದೆ.

ಇನ್ನೂ ಹಲವಾರು ಕಾರಣಗಳಿಂದ ಇಂದು ಮಹಿಳಾ ಚಳವಳಿ ಒಗ್ಗಟ್ಟು ಮತ್ತು ರಭಸವನ್ನು ಕಳೆದುಕೊಂಡಿದೆಯೆಂದು ಎನ್ನಿಸುತ್ತದೆ. ಆದರೆ ಮತ್ತೊಂದೆಡೆ ನೋಡಿದಾಗ 70-80ರಲ್ಲಿ ಮಹಿಳಾ ಚಳವಳಿ ಆಚರಣೆಗೆ ತಾರದಿದ್ದ, ವಿವಿಧ ವರ್ಗ-ಜಾತಿ ಹಿನ್ನೆಲೆಗಳ ಮಹಿಳೆಯರ ನಡುವೆ ಕೆಲಸ ಮಾಡುತ್ತಿರುವ ಸಂಘಟನೆಗಳಿವೆ. ಮಹಿಳಾ ಚಳವಳಿಯ ಬೇರೆ ಬೇರೆ ಆಯಾಮಗಳಲ್ಲಿ ಕೆಲವು ಪ್ರಯೋಗಗಳೂ ನಡೆಯುತ್ತಿವೆ. ಹೋರಾಟಗಳು ಏಕೀಕೃತವಾಗಿಲ್ಲ, ಆದರೆ ಹಲವು ದಿಕ್ಕುಗಳಲ್ಲಿ ನಡೆಯುತ್ತಿವೆ. ಇವೆಲ್ಲವೂ ಒಂದೆಡೆ ಬೆಸೆಯಲ್ಪಟ್ಟು, ಭಾರತದ ಎಲ್ಲಾ ಮಹಿಳೆಯರ ಹಕ್ಕೊತ್ತಾಯಗಳನ್ನೂ ಪ್ರತಿನಿಧಿಸಬೇಕಾದರೆ ಆ ಮಟ್ಟದ ಸ್ವ-ಅವಲೋಕನ ಪ್ರಬುದ್ಧತೆ ಹಾಗೂ ಸಾಕಷ್ಟು ಸಮಯ ಬೇಡುವ ಪ್ರಯೋಗಗಳ ಸಿದ್ಧತೆಯ ಅಗತ್ಯವಿದೆ.

4. 25 ವರ್ಷಗಳ ಹಿಂದೆ ಮಹಿಳಾ ಹೋರಾಟಗಾರರು ಯಾವುದನ್ನು ತಮ್ಮ ಗುರಿಗಳೆಂದು ಭಾವಿಸಿದ್ದರೋ, ಅವುಗಳಲ್ಲಿ ಕೆಲವು ಭಾಗಶಃ ಈಡೇರಿವೆ. ಆದರೆ ಈ ಯಶಸ್ಸಿನಿಂದ ಪ್ರೇರೇಪಿತವಾಗಿ ಮಹಿಳಾ ಚಳವಳಿ ಯಾವ ಹೊಸಚೈತನ್ಯ ಮತ್ತು ಸ್ಪಷ್ಟತೆಯನ್ನು ಗಳಿಸಿ ಮುನ್ನಡೆಯಬೇಕಿತ್ತೋ ಅದು ಸರ್ಕಾರದ co-optionನಂತಹ ಕಾರಣಗಳಿಂದ ಸಾಧ್ಯವಾಗದೆ ಹೋಯಿತು. ಹೀಗಾಗಿ ಒಂದು ಹಂತ ಮುಟ್ಟಿರುವ ಮಹಿಳಾ ಚಳವಳಿ ಈಗ ಮುಂದಿನ ಮೆಟ್ಟಿಲುಗಳನ್ನೇರಲು ಹಿಂದೆ ಪೂರೈಸದೆ ಉಳಿದಿರುವ ಇವೇ ಪೂರ್ವಷರತ್ತುಗಳಾಗುತ್ತವೆ.

ಅಂದು ಕೆಲವೊಮ್ಮೆ ಚರ್ಚೆಗಳಲ್ಲಿ ಅಥವಾ ಭಾರತದ ಕೆಲವು ಪ್ರದೇಶಗಳಲ್ಲಿ ಮಾತ್ರ ಮಹಿಳಾ ಚಳವಳಿ ಎತ್ತಿಕೊಂಡಿದ್ದ ರಾಜಕೀಯ ಅಧಿಕಾರದ ಪ್ರಶ್ನೆ ಇಂದು ಖಂಡಿತವಾಗಿ ಪ್ರಧಾನವಾದ ಅಂಶವಾಗಬೇಕಾಗುತ್ತದೆ. ಇದು ನಿಜವಾಗಿ ಚಳವಳಿಯ ತಾತ್ವಿಕತೆಯನ್ನೂ ಅದು ಮಹಿಳೆಯರೆಲ್ಲರನ್ನೂ ಅವರವರ ಬೇಡಿಕೆಗಳನ್ನಾಧರಿಸಿಯೇ ಒಗ್ಗೂಡಿಸಬಲ್ಲದೇ ಇಲ್ಲವೇ ಎಂಬುದನ್ನೂ ನಿರ್ಧರಿಸುತ್ತದೆ.

5. ಕೋಮುವಾದವು ಇಷ್ಟು ವರ್ಷಗಳಲ್ಲಿ ಮಹಿಳೆಯರು ಹೋರಾಡಿ ಪಡೆದ ಹಕ್ಕುಗಳನ್ನು ತಿರುವು ಮುರುವಾಗಿಸುತ್ತದೆ. ಖಚಿತವಾಗಿ ಇದು ಸಮಾಜವನ್ನು ಹಿಂದಕ್ಕೆಳೆಯುವ ಪ್ರಯತ್ನ. ಮಹಿಳೆಯನ್ನು ಪುನಃ ಪಿತೃಪ್ರಧಾನತೆಯ ಸಮಾಧಿಯಲ್ಲಿ ಹೂಳುವ ಹುನ್ನಾರ. ಇನ್ನೂ ಅದರಿಂದ ಬಿಡಿಸಿಕೊಳ್ಳುವ ಹೋರಾಟದ ನಡುವಿರುವಾಗಲೇ. ಇದು ವಿಭಿನ್ನ ಜಾತಿ-ವರ್ಗ-ಧರ್ಮಗಳ ಮಹಿಳೆಯರಿಗೆ ಬೇರೆ ಬೇರೆ ವಿಧಾನಗಳಲ್ಲಿ ನಡೆಯಬಹುದಾದರೂ ಸಾರಾಂಶದಲ್ಲಿ ಎಲ್ಲವೂ ಕೋಮುವಾದದ ಮುಖಗಳೇ. ಖೈರ್ಲಾಂಜಿಯಲ್ಲಿ ದಲಿತ ಮಹಿಳೆಯರಾದ ಸುರೇಖಾ-ಪ್ರಿಯಾಂಕಾರನ್ನು ಅಮಾನುಷ ಕ್ರೌರ್ಯಕ್ಕೆ ಗುರಿ ಮಾಡಿದ್ದು, ಗುಜರಾತ್ ಮತ್ತು ಒರಿಸ್ಸಾಗಳಲ್ಲಿ ಅಲ್ಪಸಂಖ್ಯಾತ ಮಹಿಳೆಯರ ಮೇಲೆ ದಾಳಿ ಮಾಡಿದ್ದು ತೀರಾ ಇತ್ತೀಚೆಗೆ ಮಂಗಳೂರಿನ ಪಬ್‌ನಲ್ಲಿ ಮೇಲ್ವರ್ಗದ ಮಹಿಳೆಯರನ್ನೂ ಸಂಸ್ಕೃತಿಯ ಹೆಸರಿನಲ್ಲಿ ಗುರಿಯಾಗಿಸಿ ಭಯವುಂಟು ಮಾಡಿದ್ದು ಇದಕ್ಕೆ ಉದಾಹರಣೆಗಳು. ಆದರೆ ಇದು ಕೇವಲ ದೈಹಿಕ ಹಿಂಸೆಯ ರೂಪದಲ್ಲಷ್ಟೇ ವ್ಯಕ್ತವಾಗುವುದಿಲ್ಲ. ಮಹಿಳೆಯರ ಆರ್ಥಿಕ-ರಾಜಕೀಯ ಹಕ್ಕುಗಳನ್ನು ನಿರಾಕರಿಸುವುದರಲ್ಲಿ, ಅವರನ್ನು ಸಂಪೂರ್ಣವಾಗಿ ಅಧೀನದಲ್ಲಿರಿಸಿಕೊಳ್ಳುವ ಪ್ರಯತ್ನದಲ್ಲಿ ಮತ್ತು ಇನ್ನೂ ಹಲವು ರೀತಿಗಳಲ್ಲಿ ವ್ಯಕ್ತವಾಗುತ್ತದೆ.

6. ಸವಾಲುಗಳು ಮೊದಲಿಗಿಂತ ಜಟಿಲವಾಗಿ ಒಂದರೊಳಗೊಂದು ಹೆಣೆದುಕೊಳ್ಳುತ್ತಿವೆ. ಆಧುನಿಕ ಭಾರತವು ಒಳಗಾಗುತ್ತಿರುವ ಸ್ಥಿತ್ಯಂತರಗಳು ಮಹಿಳಾ ಚಳವಳಿಯನ್ನು ಮತ್ತಷ್ಟು ಗೊಂದಲಗಳಿಗೆ ತುತ್ತಾಗುವಂತೆಯೂ ಮಾಡುತ್ತಿವೆ. ಒಂದೆಡೆ ಹಿಂದಿಗಿಂತಲೂ ಮಹಿಳೆಯರು ಹೆಚ್ಚು ಆರ್ಥಿಕ ಸ್ವಾವಲಂಬನೆ ಗಳಿಸಿಕೊಳ್ಳುತ್ತಿದ್ದಾರೆ. ಮುಖ್ಯವಾಗಿ ಕುಟುಂಬದ ಒಳಗೂ-ಹೊರಗೂ ತಮ್ಮ ಅಧಿಕಾರಗಳನ್ನು ಕ್ಲೈಮ್ ಮಾಡುವ ಮನೋಭಾವ ಹೆಚ್ಚಾಗುತ್ತಿದೆ. ಜೊತೆಗೆ ವೈಜ್ಞಾನಿಕವಾದ ಅಭಿವೃದ್ಧಿ ನಿಜವಾಗಿ ಮಹಿಳಾ ಸಮಾನತೆಗೆ ಒಂದಷ್ಟು ಅಡಿಪಾಯವನ್ನು ಹಾಕುತ್ತಿದೆ.

ಆದರೆ ವಾಸ್ತವದಲ್ಲಿ ಈಗಿನ ಸಾಂಸ್ಕೃತಿಕ ಸಾಮಾಜಿಕ ಮೌಲ್ಯಗಳೂ 'ಆಧುನಿಕ'ವಾದ ನವೀನ ವಿಧಾನಗಳ ಮಹಿಳೆಯನ್ನು ಮತ್ತದೇ 'ಸ್ತ್ರೀಪಾತ್ರ'ಗಳಿಗೆ ಕಟ್ಟಿಹಾಕುತ್ತಿವೆ. ಅವನ್ನೇ ವೈಭವೀಕರಿಸುತ್ತಿವೆ. ಆದ್ದರಿಂದ ನಿಜವಾಗಿ ಮಹಿಳೆಗೆ ಸಾಮಾಜಿಕ ತೊಡಗಿಕೊಳ್ಳುವಿಕೆಯಿಂದಾಗಿ ದೊರೆಯಬೇಕಿದ್ದ ಪ್ರಯೋಜನಗಳು, ಕೌಟುಂಬಿಕವಾದ ಕಟ್ಟುಪಾಡುಗಳ ಕಾರಣಕ್ಕೆ ಇಂದು 'ಎರಡುಪಟ್ಟು ಹೊರೆ'ಯಾಗಿ ಪರಿವರ್ತನೆಯಾಗಿವೆ. ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಮೂಲಭೂತವಾಗಿ ಮಹಿಳೆಯ ಪಾತ್ರ ಎರಡನೇ ದರ್ಜೆಯದ್ದಾಗಿಯೇ ಗುರುತಿಸಲ್ಪಡುತ್ತಿದೆ. ಇಂದಿಗೂ ಮಹಿಳೆಯ ಆಸ್ತಿ ಒಡೆತನದ ಹಕ್ಕಿನ ಪ್ರಶ್ನೆ, ರಾಜಕೀಯ ಅಧಿಕಾರದ ಪ್ರಶ್ನೆ, ನಿರ್ಣಯ ಕೈಗೊಳ್ಳುವ ಅಧಿಕಾರ ಸ್ಥಾನಗಳ ಪ್ರಶ್ನೆಗಳು ಎದುರಾದರೆ ಅವಕ್ಕೆ ತೀವ್ರವಾದ ಪ್ರತಿರೋಧ ಸರ್ಕಾರದಿಂದ ಮತ್ತು ಸಮಾಜದ ಕೆಲವು ಸ್ತರಗಳಿಂದ ಬರುತ್ತದೆ.

ಉಪಭೋಗಿ ಸಂಸ್ಕೃತಿಯ ಅಲೆ ಒಂದೆಡೆ ಹೆಚ್ಚುತ್ತಿರುವ ಜಾಗತೀಕರಣದ ಭಾಗವಾಗಿ ಮಹಿಳೆಯನ್ನು ಸರಕಾಗಿಸಲು ನೋಡಿದರೆ, ಮತ್ತೊಂದೆಡೆ ಹೆಚ್ಚುತ್ತಿರುವ ಕೋಮುವಾದ ಮತ್ತು ಧಾರ್ಮಿಕ ಮೂಲಭೂತವಾದ ಮಹಿಳೆಯನ್ನು ಖಾಸಗಿ ಆಸ್ತಿಯ ಹಣೆಪಟ್ಟಿಗೇ ಕಟ್ಟಲು ನೋಡುತ್ತವೆ.

ಮಹಿಳೆಯ ಅಸ್ಮಿತೆ ಎಂದಿಗೂ ಕೇವಲ ಲಿಂಗಾಧರಿತವಾದ್ದಷ್ಟೇ ಆಗಿರಲಿಲ್ಲ. ಅದು ಏಕಕಾಲದಲ್ಲಿ ಲಿಂಗ-ಜಾತಿ-ವರ್ಗ-ಧರ್ಮ ಮೊದಲಾದವುಗಳನ್ನು ಆಧರಿಸಿತ್ತು ಮತ್ತು ಆಧರಿಸಿದೆ. ಇಂದಿನ ಸಂಕೀರ್ಣವಾದ ಸಾಮಾಜಿಕ ಸಂದರ್ಭದಲ್ಲಿ ಇಂತಹ ಹಲವು ಗುರುತುಗಳೂ ಮಹಿಳಾ ಚಳವಳಿಗೆ ವೈವಿಧ್ಯವನ್ನು ವ್ಯಾಪಕತೆಯನ್ನು ತಂದುಕೊಡಬಲ್ಲವು. ಆದರೆ ಅಂತೆಯೇ ನಿಖರತೆಯ ಕೊರತೆ ಯಿದ್ದಾಗ ಮಹಿಳೆಯರನ್ನು ಹತ್ತು ಹಲವು ದಿಕ್ಕುಗಳಲ್ಲಿ ತೊಡಗಿಸಿ ಮಹಿಳಾ ಹೋರಾಟಗಳನ್ನು ಸಡಿಗೊಳಿಸಬಲ್ಲವು.

7. ಖಂಡಿತವಾಗಿ ಹಿಂಸೆಗಳ ಪ್ರಮಾಣ ಮತ್ತು ಸ್ವರೂಪ ಹೆಚ್ಚುತ್ತಿದೆ. ಇದು ಸ್ಥಾಪಿತ ಹಿತಾಸಕ್ತಿಗಳನ್ನು ಪ್ರಾಮಾಣಿಕವಾಗಿ-ಗಂಭೀರವಾಗಿ ವಿರೋಧಿಸುವ, ಮುರಿಯಲೆತ್ನಿಸುವ ಮಹಿಳೆಯರಿಗೆ, ಚಳವಳಿಗೆ ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಅಧಿಕಾರದ ಸ್ಥಾನದಲ್ಲಿರು ವವರು ಒಡ್ಡುತ್ತಿರುವ ಪ್ರತಿರೋಧದ ಭಾಗ. ತಮ್ಮ ಮೇಲೆ ದಬ್ಬಾಳಿಕೆ-ಶೋಷಣೆ ನಡೆಸುವ ಹಿತಾಸಕ್ತಿಗಳನ್ನು ಮತ್ತು ಜಾತಿ-ವರ್ಗಗಳನ್ನು ಪಲ್ಲಟಗೊಳಿಸಲೆತ್ನಿಸುವ ಯಾವುದೇ ಸಮುದಾಯವೂ ಹೀಗೆ ಹಿಂದಿಗಿಂತ ಹೆಚ್ಚಿನ ಕ್ರೌರ್ಯವನ್ನು ಎದುರಿಸಬೇಕಾಗಿದೆ. ಇದಕ್ಕೆ ಇರುವ ಪರಿಹಾರವೆಂದರೆ ಇಂತಹ ಸಾಧ್ಯತೆಯ ಬಗೆಗಿನ ಅರಿವು ಮತ್ತು ಅದನ್ನು ಮೀರುವ ಸಿದ್ಧತೆ.

9. 'ಮಹಿಳಾ ಚಳವಳಿ'ಯ ಪರಿಕಲ್ಪನೆ ಇತರೆಲ್ಲಾ ಪರಿಕಲ್ಪನೆಗಳಂತೆಯೇ ಕಾಲಕಾಲಕ್ಕೆ ಪುನರವಲೋಕನಕ್ಕೂ ಮರುನಿರ್ವಚನಕ್ಕೂ ಒಳಗಾಗಲೇ ಬೇಕು. ಆಗಲೇ ಅದು ಸಮಕಾಲೀನ ಸವಾಲುಗಳನ್ನು ಎದುರಿಸಿ ಮುನ್ನಡೆಯಬಲ್ಲದು. ಆದರೆ ಇಂತಹ ಮರುನಿರ್ವಚನಕ್ಕೆ ಮೊದಲು ಮಹಿಳಾ ಚಳವಳಿಗೊಂದು ಸ್ಪಷ್ಟವಾದ ವ್ಯಾಖ್ಯಾನ ಅಗತ್ಯ. ಮಹಿಳಾ ಚಳವಳಿಯಲ್ಲಿದ್ದ, ಇರುವ ಹಲವು ದೃಷ್ಟಿಕೋನಗಳು, ಇಷ್ಟು ವರ್ಷಗಳ ಹೋರಾಟದ ಅನುಭವವನ್ನು ಅದರೆಲ್ಲಾ ಪಾಸಿಟಿವ್ ಮತ್ತು ನೆಗೆಟಿವ್ ಅಂಶಗಳೊಂದಿಗೆ ಅರಗಿಸಿಕೊಂಡು, ಸಮಾನಾಂಶ ಗಳನ್ನು ಗುರುತಿಸಿಕೊಳ್ಳುವ ಅಗತ್ಯ ತುರ್ತಾಗಿದೆ. (ದಿನನಿತ್ಯದ ಚಟುವಟಿಕೆಗಳಲ್ಲಿ ಒಂದು ಮಟ್ಟಕ್ಕೆ ಸಾಧ್ಯವಾಗಿದೆ). ಇವೆಲ್ಲವುಗಳೂ ಮಹಿಳಾ ಚಳವಳಿಯ ತಾತ್ವಿಕತೆಯನ್ನು ನಿರ್ಧರಿಸಿದರೆ, ಅದು ಚರ್ಚೆಗಳಲ್ಲಿ ಅಧ್ಯಯನದಲ್ಲಿ ಮತ್ತು ಆಚರಣೆಯಲ್ಲಿ ಪ್ರತಿಫಲಿಸಿದರೆ ಮರುನಿರ್ವಚನೆ ನಿಜವಾದ ಅರ್ಥದಲ್ಲಿ ಸಾಧ್ಯ ಮತ್ತು ಹೋರಾಟದ ಅನುಭವ ಹಾಗೂ ಆತ್ಮಶೋಧನೆಯ ಫಲವಾಗಿ ಹೊಮ್ಮುವ ಅಂತಃಸತ್ವದ ಸಾಕಾರವೂ ಸಾಧ್ಯ.

❑



## ನಿಟ್ಟುಸಿರು ಬಿರುಗಾಳಿಯಾದಾಗ ಚಳವಳಿ ಅಂತೇವೆ

***ಸವಿತಾ ನಾಗಭೂಷಣ,*** ಚಿಂತಕಿ – ಲೇಖಕಿ – ಕವಯಿತ್ರಿ

1. ಸಾನಿಯಾ ಮಿರ್ಜ಼ಾ ಟೆನ್ನಿಸ್ ಪಂದ್ಯಾವಳಿ ಗೆದ್ದರೆ ನನ್ನಲ್ಲಿ ಪುಳಕ ಉಂಟಾಗುತ್ತೆ. ಅರುಂಧತಿ ರಾಯ್‌ಗೆ ಬಹುಮಾನ ಬಂದರೆ ಹೆಮ್ಮೆ ಆಗುತ್ತೆ. ಸೂಕಿ ಗೃಹಬಂಧನದಲ್ಲಿ ಇದ್ದಾಳಲ್ಲಾ ಅಂತ ದುಃಖ ಆಗುತ್ತೆ. ಮೇಧಾಪಾಟ್ಕರ್ ಉಪವಾಸ ಸತ್ಯಾಗ್ರಹ ಮಾಡ್ದಾಗ ನನ್ನಲ್ಲಿ ಕಳವಳ ಉಂಟಾಗ್ತದೆ.
   ಹೀಗೆ ಮಹಿಳಾ ಚಳವಳಿ ಜೊತೇನೂ ಒಂಥರಾ ಭಾವನಾತ್ಮಕ ಸಂಬಂಧ....
2. ಜ್ಯೋತಿಬಾ ಫುಲೆಯ ಹೆಂಡತಿ ನಾಕು ಅಕ್ಷರ ಕಲಿಯೋಕೆ ಶಾಲೆಗೆ ಹೋಗುವಾಗ ಕಲ್ಲೇಟು ತಿನ್ನಬೇಕಾಯಿತಂತೆ! ಸಗಣಿ ಉಂಡೆಗಳಿಂದ ಅವಳ ಬಿಳಿ ಸೀರೆಯನ್ನ ಸಂಪ್ರದಾಯವಾದಿಗಳು ಮಲಿನಗೊಳಿಸ್ತಾ ಇದ್ದರಂತೆ! ಕಾಲ ಇಂದು ಎಷ್ಟು ಬದಲಾಗಿದೆ.... ಸುಮ್ಮನೆ ಆಗಿದೆಯೇ? ಎಷ್ಟು ಜನ ಹೆಣ್ಣುಮಕ್ಕಳ ಆಶೆ-ಕನಸಿನ ಫಲ! ಜಗತ್ತಿನ ಯಾವ ಯಾವ ಮೂಲೆಯಲ್ಲಿ ಯಾರ‍್ಯಾರು ಕನಸಿನ ಬೀಜ ನೆಟ್ಟರೋ.... ಯಾರು ನೀರು ಗೊಬ್ಬರ ಹಾಕಿ ಬೆಳೆಸಿದರೋ.... ನಾವಂತೂ ಈಗ ಅದರ ಫಲ ಉಣ್ಣುತ್ತಾ ಇದ್ದೇವೆ... ಒಂದಷ್ಟು ಕೃತಜ್ಞತೆ... ಧನ್ಯತೆ....
3. ಕಷ್ಟ-ನಷ್ಟ ಹಂಚಿಕೊಂಡ್ವಿ.... ಸ್ವಲ್ಪ ಸುಖ ಬಂತು... ಮೈ ಮರೆತಿದ್ದೇವೆ..... ಅಷ್ಟೇ....
4. ಎಲ್ಲರ ಪರವಾಗಿ ಎಲ್ಲ ಮಹಿಳೆಯರು ಸದಾ ಹೋರಾಡಬೇಕಾದ ಅಗತ್ಯ ಇಲ್ಲ ಅನಿಸುತ್ತೆ. ನಮ್ಮ ನಮ್ಮ ಶಿಲುಬೆಯನ್ನು ನಾವೇ ಹೊರಬೇಕು.... ಈಗ ಬದಲಾದ ಕಾಲದಲ್ಲಿ ಭಿನ್ನ ಸಮಸ್ಯೆಗಳಿಗೆ ಈಡಾದ ಮಹಿಳೆಯರು ಅವರವರ ಪರಿಮಿತಿಗಳಲ್ಲಿ ಹೋರಾಟ ನಡೆಸಲಿ. ಮಿಕ್ಕವರು ಬೆಂಬಲಿಸಲಿ... ಕೂಗುವವರು ಸಿಕ್ತಾರಂತ ಗೊತ್ತಾದರೆ ಕೆಲವರು ಬಾಯೇ ಬಿಡೋಲ್ಲ.... ಅನ್ಯಾಯವನ್ನು ಪ್ರತಿಭಟಿಸುವ, ಎದುರಿಸುವ ಶಕ್ತಿಯನ್ನು ಎಲ್ಲರೂ ಗಳಿಸಿ ಕೊಳ್ಳಬೇಕು.... ಯಾರೂ ವಿನಾಯಿತಿ ಕೇಳಬಾರದು....
5. ಎಲ್ಲವೂ ಒಡೆದು ಚೂರಾಗಿದೆ. ಕೋಮುವಾದ-ಜಾತಿವಾದ ಅಕ್ಕ-ತಂಗಿ ಇದ್ದ ಹಾಗೆ.... ಯಾರು ಜಾತಿವಾದಿಯಾಗ್ತಾರೋ ಅವರು ನಿಸ್ಸಂಶಯವಾಗಿ ಕೋಮುವಾದಿಯಾಗಿ ಬೇಗ ಪರಿವರ್ತಿತ ರಾಗ್ತಾರೆ.... ತುಂಬ ಪ್ರಗತಿಪರರು ಅಂತ ಹೇಳಿಕೊಳ್ಳುವ ಅನೇಕರು ಪಕ್ಕಾ ಜಾತಿವಾದಿಗಳಾಗಿರುವುದನ್ನ ನೋಡ್ತಾ ಇದ್ದೇವೆ... ಪುರುಷರು ಜಾತಿವಾದಿಗಳಾಗಿ ಹಾಳು ಮಾಡಿದ್ದು ಸಾಲದು ಅಂತ ಈಗ ಮಹಿಳೆಯರಲ್ಲಿ ಕೂಡ ಆ ವಿಷ ಬೀಜ ಬಿತ್ತುತ್ತಾ ಇದ್ದಾರೆ.... ಮೇಲ್ಜಾತಿಯೋ, ಕೆಳಜಾತಿಯೋ... ಸ್ವಧರ್ಮಿಯೋ, ಅನ್ಯ ಧರ್ಮಿಯೋ.... ನಾನೇ ಮೊದಲು ಉಣ್ಣಬೇಕು ಅನ್ನೋ ಸ್ವಾರ್ಥ ಬಿಡಬೇಕು.... ಫಲ ಒಂದಲ್ಲ ಒಂದು ದಿನ ಸಿಕ್ಕೇ ಸಿಗುತ್ತೆ,,,, ನನ್ನ ಸರದೀನೂ ಬಂದೇ ಬರುತ್ತೆ ಅಂತ ತಿಳಿಯೋ ವಿವೇಕಬೇಕು. ಆದರೆ ಏನು ಮಾಡೋದು, ನೀನು ಮೊದಲು ಉಣ್ಣು ಅಂತ ಹೇಳೋ ದೊಡ್ಡತನ ಯಾರಲ್ಲೂ ಉಳಿದಿಲ್ಲ. ಅದಕ್ಕೇ ನ್ಯಾಯಯುತ ವಾಗಿ ಯಾರಿಗೆ ಏನು ಸಿಗಬೇಕೋ ಅದು ಸಿಗ್ತಾ ಇಲ್ಲ.

6. ಹಣ ಇಡೀ ಜಗತ್ತನ್ನ ತನ್ನ ತೆಕ್ಕೆಗೆ ತೆಗೆದುಕೊಳ್ತಾ ಇದೆ. ಕ್ಷಣ ಕ್ಷಣಕ್ಕೂ ಜಗತ್ತು ವಿಷಮತೆಯತ್ತ ಸಾಗ್ತಾ ಇದೆ... ಬಣ್ಣ ಬೆಡಗು ಭಯ ಹುಟ್ಟಿಸ್ತಾ ಇದೆ.... ಊಹೆಗೂ ಮೀರಿದ್ದು... ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯ ಕಳೆದುಕೊಳ್ತಾ ಇರೋದು. ಅದೊಂದನ್ನ ಕಳಕೊಂಡರೆ ಎಲ್ಲ ಕಳಕೊಂಡ ಹಾಗೇ... ಇನ್ನೂ ಪೂರ್ತಿ ಬಿಡುಗಡೆನೇ ಆಗಿಲ್ಲ... ಅಷ್ಟರೊಳಗೆ ಈ ವಿದ್ಯಮಾನ!... ಏನಂತ ವಿಶ್ಲೇಷಿಸೋದು?
7. ದುರ್ಬಲರು ಅಸಹಾಯಕರು ಯಾವತ್ತೂ ಹಿಂಸೆ, ಕ್ರೌರ್ಯಕ್ಕೆ ಬಲಿಯಾಗ್ತಾನೇ ಇರ್ತಾರೆ.... ಕೂಪ ಅದೇ.... ರೂಪ ಮಾತ್ರ ಬೇರೆ....
8. Big thinking ಬೇಕು. ಯಾಕೋ..... ಸ್ವತಂತ್ರವಾದ, ಘನವಾದ, ಅಂತಃಸತ್ವ ಇರೋ ಆಲೋಚನೆಗಳು ಹೊಮ್ತಾ ಇಲ್ಲ. ಬಹುಶಃ ಯಾಕೇಂದ್ರೆ ನಾವು ಸ್ವತಂತ್ರವಾಗಿ, ಘನವಾಗಿ ಆಲೋಚಿಸಬಲ್ಲೆವು ಅನ್ನೋ ಆತ್ಮವಿಶ್ವಾಸ ನಮ್ಮಲ್ಲಿ ಇಲ್ಲವೇ ಇಲ್ಲ! ಶಕ್ತಿ ಇದೆ; ಆದರೆ ಅದು ಇದೆ ಅನ್ನೋ ಅರಿವು ಇಲ್ಲ.
9. ಪ್ರತಿ ಮನೆ ಮನೆಯಲ್ಲೂ, ಕುಟುಂಬದಲ್ಲೂ ಪ್ರತಿಭಟನೆ, ಹೋರಾಟ, ಸತ್ಯಾಗ್ರಹ ನಡೀತಾನೇ ಇರುತ್ತೆ.... ಅದು ಸಾಂಕೇತಿಕವಾಗಿ, ಒಟ್ಟಂದದಲ್ಲಿ ಹೊರಗೆ ಕಾಣಿಸಿಕೊಂಡಾಗ ಮಹಿಳಾ ಚಳವಳಿಯ ಸ್ವರೂಪ ಪಡೆದುಕೊಳ್ಳುತ್ತೆ. ನಿಟ್ಟುಸಿರು ಬಿರುಗಾಳಿಯಾದಾಗ ಚಳವಳಿ ಅಂತೇವೆ ಅಷ್ಟೆ.
10. ನಾನು ಒಬ್ಬ ಕವಿ... ಕವಿತೆಯ ಮೂಲಕ ಏನು ಮಾಡಬಹುದೋ ಅದನ್ನ ಕಳೆದ 25 ವರ್ಷಗಳಿಂದ ಮಾಡ್ತಾ ಇದೇನೆ.... 'ಯಾವುದೂ ಮುಖ್ಯವಲ್ಲ... ನೀರೆಲ್ಲವೂ ತೀರ್ಥ' ಅನ್ನೋ ಕುವೆಂಪು ವಾಣಿಯಲ್ಲಿ ನನಗೆ ಅಪಾರ ನಂಬಿಕೆ.

> **ಯಾರು ಅಭಿಮಾನದ ದೋಣಿ ಹತ್ತಿದರೋ**
> **ಅವರೆಲ್ಲರೂ ಮುಳುಗಿದರು....**
> **ಯಾರು ನಮ್ರವಾಗಿ ಕೆಳ ಕೆಳಗೆ ಇಳಿದರೋ**
> **ಅವರೆಲ್ಲ ಪಾರಾದರು.....**

ಕಬೀರನ ಈ ದೋಹ ನನಗೆ ದಾರಿದೀಪ.

❑



# ಅನೂಹ್ಯ ಅಪಾರವನ್ನು ತೆರೆಯುವ ಉದ್ದೇಶ

***ಡಾ|| ವಿನಯಾ,*** ಚಿಂತಕಿ, ಲೇಖಕಿ, ಧಾರವಾಡ

1. ತೊಂಬತ್ತರ ದಶಕದಲ್ಲಿ ಅದೇ ತಾನೇ ಬರಹ ಮತ್ತು ಪ್ರಜ್ಞಾಪೂರ್ವಕ ಬದುಕಿಗೆ ತೆರೆದುಕೊಳ್ಳುತ್ತಿದ್ದ ನಮಗೆ ಮಳೆಬಿದ್ದ ಮಾರನೆಯ ದಿನದಂತಹ ಪಕ್ವ ವಾತಾವರಣವಿತ್ತು. ಮಹಿಳಾ ಚಿಂತನೆ ಪ್ರಜ್ಞಾ ಪ್ರವಾಹವಾಗಿ ಹರಿದ ಕಾಲವದು. ಅದರ ಫಟಿತವಾಗಿ ಚಳವಳಿಗಳೂ ನಡೆದವು. ಇವುಗಳ ಪರಿಣಾಮದಿಂದ ವೈಯಕ್ತಿಕ ಅನುಭವ, ಅನಿಸಿಕೆಗಳಿಗೆ ನಿರ್ದಿಷ್ಟ ತಾತ್ತ್ವಿಕ ಸ್ಪಷ್ಟತೆ ಒದಗಿತು. ವೈಯಕ್ತಿಕವಾಗಿ ನನಗಿದು ಬದುಕನ್ನು ನೋಡುವ ಗ್ರಹಿಕೆಯ ವಿಧಾನವೇ ಆಯಿತು.

2. ಖಂಡಿತವಾಗಿಯೂ ಈ ಚಳವಳಿ ಪರಿಣಾಮಕಾರಿಯಾಗಿದೆ. ಇವತ್ತು ಸೃಜನಶೀಲವಾಗಿ ತೊಡಗಿಸಿಕೊಂಡವರೆಲ್ಲರೂ ಮಹಿಳಾ ಚಳವಳಿ ನಿರ್ಮಿಸಿದ ವಾತಾವರಣದ ಫಲಾನುಭವಿಗಳೇ. ನನಗಂತೂ ಮಹಿಳಾ ಚಳವಳಿ ಮತ್ತು ಚಿಂತನೆಗಳು ಬೆನ್ನ ಹಿಂದಿನ ಬೆಳಕಾಗಿವೆ. ನನ್ನ ದೇಶ-ಕಾಲಗಳನ್ನು ಗ್ರಹಿಸಿಕೊಳ್ಳಲು, ಭೂತಕಾಲವನ್ನು ಪುನರ್ ಪರಿಶೀಲನೆಗೆ ಒಡ್ಡಿಕೊಳ್ಳಲು ಸಂವೇದನೆಯ ಬೀಜಸ್ವರೂಪಿಯಾಗಿ ಒದಗಿಬಂದಿದೆ.

3. 70-80ರ ದಶಕಗಳಲ್ಲಿ ಸಮಾಜದ ರೂಪು ರೇಷೆಗಳನ್ನು ತಿದ್ದಬಲ್ಲಷ್ಟು ಪರಿಣಾಮಕಾರಿಯಾದ ಹಲವು ಚಳವಳಿಗಳು ಕಂಡುಬಂದವು. ಆದರೆ ಆ ನಂತರದಲ್ಲಿ ಜಾಗತೀಕರಣದ ಪರಿಣಾಮವಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳಾದವು. ಆಧುನಿಕತೆ ಮಹಿಳಾ ಬದುಕಿಗೆ ನೀಡಿದ್ದ ವಿಸ್ತರಣೆ ಹಾಗೂ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಜಾಗತೀಕರಣ ಮೊಟಕುಗೊಳಿಸಿತು. ಮಹಿಳಾ ಬದುಕಿನಲ್ಲಿ ಹೊಸ ಆಘಾತಗಳು ಎದುರಾದವು. ಆಕ್ರಮಣದ ಹೊಸ ವಿನ್ಯಾಸವನ್ನು ಅರ್ಥೈಸಿಕೊಳ್ಳುವುದು ಕಠಿಣವಾಯಿತು. ಕೋಮುವಾದ ಹಾಗೂ ಮತೀಯ ರಾಜಕಾರಣಗಳನ್ನು ಎದುರಿಸುವುದು ಸುಲಭವಾಗಲಿಲ್ಲ. ಇದರಿಂದ ಚಳವಳಿಗಾರರಲ್ಲಿ ಒಂದು ಬಗೆಯ ದಿಗಿಲು, ನಿರಾಸೆ ಕಂಡುಬಂದವು.

4. ಕಳೆದ 25 ವರ್ಷಗಳಲ್ಲಿ ಮಹಿಳಾ ಚರಿತ್ರೆ ತೀವ್ರ ಸಂಘರ್ಷಗಳನ್ನು ಎದುರಿಸಿದೆ. ಇದು ನಿಯತ ಏಕಮುಖಿ ಚಲನೆಯಾಗಲಿಲ್ಲ. ಆಧುನಿಕತೆ ಮತ್ತು ನಾಗರಿಕತೆಗಳು ಪರಸ್ಪರ ವಿರುದ್ಧ ನೆಲೆಗಳಿಂದ ಚಲಿಸಿದವು. ಇವುಗಳ ಆವರಣ ಒಂದೇ ಬಗೆಯದಾದರೂ ಒಳ ಹೂರಣ ಭಿನ್ನವಾದದ್ದು. ಮಹಿಳೆಯರಿಗೆ ಸಾರ್ವತ್ರಿಕ ಶಿಕ್ಷಣ, ಉದ್ಯೋಗಾವಕಾಶಗಳು, ಆ ಮೂಲಕ ಆಧುನಿಕತೆ ಲಭಿಸಿದ್ದು ಪುರುಷ ಹಿತಾಸಕ್ತ ಸಮಾಜದ ಅಗತ್ಯಗಳನ್ನು ಪೂರೈಸುವುದಕ್ಕಾಗಿತ್ತು. ಆದರೆ ಮಹಿಳಾ ಸಂವೇದನೆ ಪ್ರಜ್ಞಾಪೂರ್ವಕವಾಗಿ ಆ ಅವಕಾಶವನ್ನು ತನ್ನ ವಿಮೋಚನೆಯ ಪ್ರಶ್ನೆಯಾಗಿ ವಿಸ್ತರಿಸಿಕೊಂಡಿತು. ಇಂದು ಕೂಡ ಅದೇ ತಂತ್ರವನ್ನು ಮಹಿಳಾ ಹೋರಾಟ ಬಳಸಿಕೊಳ್ಳಬೇಕಿದೆ. ಜಾಗತೀಕರಣದ ಬಂಡವಾಳಶಾಹಿ ಒಡೆತನ ಮಹಿಳಾ ಸಂಘಟನೆಗೆ ಅವಕಾಶವನ್ನು ನೀಡುವುದಿಲ್ಲ. ಮಹಿಳೆಯನ್ನು ಏಕಾಂಗಿಯಾಗಿಡುವ ಪ್ರಯತ್ನದಲ್ಲಿರುತ್ತದೆ. ತನ್ನ ಯಜಮಾನಿಕೆಯನ್ನು ಒಪ್ಪಿಕೊಂಡ 'ಗುಂಪು'ಗಳಾಗಿ ಮಹಿಳೆಯರನ್ನು ಇರಬಯಸುತ್ತದೆಯೇ ವಿನಃ ಸ್ವತಂತ್ರ 'ಸಮುದಾಯ'ಗಳಾಗಿಯಲ್ಲ. ಆದರೆ ನಮ್ಮ ಜೀವನ ವಿಧಾನದಲ್ಲಿ ಸೇರಿಕೊಂಡಿರುವ ಸಂಪರ್ಕ ಸಾಧನಗಳ ಇತ್ಯಾತ್ಮಕ ಬಳಕೆಯ ಮೂಲಕ ಸಂಘಟನೆಯನ್ನು ರೂಪಿಸಿಕೊಳ್ಳಬೇಕು. ಯಾವುದೇ ಮೂಲೆಯಲ್ಲಿ ನಡೆಯುವ ಘಟನೆಗೆ ತಕ್ಷಣದ

ಸಂಘಟನಾತ್ಮಕ ಪ್ರತಿರೋಧ ವ್ಯಕ್ತವಾಗಬೇಕು. ಹೋರಾಟ ಎನ್ನುವುದು ಪ್ರತಿಕ್ರಿಯೆಯ ಮಟ್ಟದಲ್ಲಷ್ಟೆ ಉಳಿಯದೆ ಒಂದು ಪ್ರಜ್ಞಾವಲಯವನ್ನು ನಿರ್ಮಿಸುವ ಪ್ರಯತ್ನ ನಡೆಯಬೇಕು. ಇಲ್ಲದಿದ್ದರೆ ಎಲ್ಲ ಧ್ವನಿಗಳೂ ಅಸಹಾಯಕ ಕೀರಲು ಕಂಠಗಳಾಗುತ್ತವೆ.

5. ಸದ್ಯ ಮಹಿಳಾ ಚಳವಳಿಯ ಎದುರಿರುವ ಅತಿದೊಡ್ಡ ಸವಾಲು ಕೋಮುವಾದವೇ. ಈ ರೋಗಗ್ರಸ್ತ ಸಮಾಜವು ಮಹಿಳೆಯನ್ನು ನಿರ್ದಿಷ್ಟ ಜಾತಿ–ಧರ್ಮಗಳ ಖಾಸಗಿ ವಸ್ತುವಿನಂತೆ ನೋಡುತ್ತದೆ. ಕೋಮುವಾದದ ಕ್ರೌರ್ಯಕ್ಕೆ ಮಹಿಳೆ ಗುರಿಯಾಗುತ್ತಾಳೆ. ಮಹಿಳೆಯ ಬಟ್ಟೆ–ಬರೆ, ಶಿಕ್ಷಣ, ವರ್ತನೆ, ಸಂಚಾರ, ಪ್ರತಿಭೆ ಈ ಎಲ್ಲವೂ ಮೂಲಭೂತವಾದದ ಅಜೆಂಡಾದಲ್ಲಿ ಸೇರುತ್ತದೆ. ಇಂದು ಮಂಗಳೂರಿನಲ್ಲಿ ನಡೆಯುತ್ತಿರುವುದೂ ಇದೇ. ಮಹಿಳೆಯ ಸಮಾನತೆಯ ನಿರೀಕ್ಷೆಗಳು ಸಾಂಪ್ರದಾಯಿಕ ಕಲ್ಪಿತಗಳಲ್ಲಿ ಕರಗಿಬಿಡುತ್ತವೆ. ಕೋಮುವಾದ ಪುರುಷ ಪ್ರಧಾನತೆಯನ್ನು ಮುನ್ನೆಲೆಗೆ ತರುವುದರಿಂದ ಮಹಿಳೆ ಅದನ್ನು ಸಹಜವೆಂಬಂತೆಸ್ವೀಕರಿಸುತ್ತಾಳೆ. ಮಹಿಳಾಸಂವೇದನೆಯಲ್ಲಿಯೇ ಕೋಮುವಾದ ಬೆರೆತುಹೋಗುವ ಅಪಾಯವನ್ನು 'ಗುಜರಾತ್ ಹಿಂಸೆ'ಯ ಸಂದರ್ಭದಲ್ಲಿ ನೋಡಿದ್ದೇವೆ. ಇದರಿಂದಾಗಿ ಸಾಂಸ್ಕೃತಿಕವಾಗಿಯೂ 'ಮಹಿಳೆ ಇಲ್ಲದ ಸಮಾಜ' ನಿರ್ಮಿತಿಯಾಗಬಹುದು. ಮಹಿಳಾ ಚಳವಳಿ ಇಂದು ಮಹಿಳಾ ಪ್ರಜ್ಞೆಗೆ ಆವರಿಸಿರುವ ಸೂತಕವನ್ನು ನಿವಾರಿಸಿಕೊಳ್ಳಬೇಕಿದೆ.

6. ಜಾಗತೀಕರಣ ಖಾಸಗಿ ಸೆಕ್ಟರನ್ನು ಬೆಳೆಸಿದ್ದರಿಂದ ಆರ್ಥಿಕ ವಲಯದಲ್ಲಿ ಪಲ್ಲಟಗಳುಂಟಾದವು. ಇದರಿಂದ ಮೀಸಲಾತಿ, ಸಾಮಾಜಿಕ ನ್ಯಾಯ, ಮಹಿಳಾ ಹಕ್ಕುಗಳು ಅಪ್ರಸ್ತುತಗೊಳ್ಳತೊಡಗಿದವು. ಮಹಿಳೆ ಔದ್ಯೋಗಿಕ ವಲಯದಲ್ಲಿ ನೆಲೆನಿಲ್ಲಲು ಹಲವು ಸಂದಿಗ್ಧತೆಗಳನ್ನು ಎದುರಿಸಬೇಕಾಯಿತು. ಆದರೂ ಉದ್ಯೋಗ ಹಣ ಸಂಪಾದನೆಯ ಹಾದಿಯಾಯಿತೇ ಹೊರತು ಭದ್ರತೆಯ ದಾರಿಯಾಗಲಿಲ್ಲ. ಸಾಮಾಜಿಕವಾಗಿಯೂ ಬಂಡವಾಳಶಾಹಿ ಆಲೋಚನೆಯೇ ಪ್ರಧಾನವಾಗುತ್ತ ಸಮಾಜ 'ಕೊಳ್ಳುವ – ಕೊಡುವ' ಎಂಬ ವರ್ಗೀಕರಣಕ್ಕೊಳಗಾಯಿತು. ಈ ಎರಡೂ ವಲಯಗಳಾಚೆಯವರನ್ನು ಅನುಪಯುಕ್ತ ತ್ಯಾಜ್ಯಗಳಂತೆ ನೋಡಲಾಯ್ತು. ಬಂಡವಾಳವನ್ನೇ ಆಧಾರವಾಗಿಟ್ಟುಕೊಂಡ ಅವಕಾಶವಾದಿ ರಾಜಕಾರಣ ಧರ್ಮವನ್ನು ತನ್ನ ಅಸ್ತ್ರವನ್ನಾಗಿ ಬಳಸತೊಡಗಿದೆ. ಇಂತಹ ಒಟ್ಟು ಸಂದರ್ಭ ಮಹಿಳಾಪರ ಚಿಂತನೆಗೆ ವಿರೋಧಿಯಾದದ್ದು.

7. ಜಾಗತೀಕರಣ ಮತ್ತು ಕೋಮುವಾದಗಳು ತಮ್ಮ ಅಧಿಕಾರ ಕೇಂದ್ರಕ್ಕಾಗಿ ವಿರೋಧಿಸುವ, ಆಳಲು ಬಯಸುವ ವರ್ಗಗಳಲ್ಲಿ ಮುಖ್ಯರಾದವರು ಮಹಿಳೆಯರು. ಅಧಿಕಾರ ಕೇಂದ್ರಗಳೇ ಮಹಿಳೆಯರನ್ನು ಪ್ರತಿಸ್ಪರ್ಧಿಗಳಾಗಿ ನೋಡುವುದರಿಂದ ಕ್ರೌರ್ಯ–ಹಿಂಸೆಗಳ ಸ್ವರೂಪ ಪ್ರಮಾಣಗಳು ಹೆಚ್ಚಾಗಿವೆ.

8. ಮಹಿಳಾ ಚಳವಳಿಯ ಬುನಾದಿಯೇ ಈ ತಾತ್ತ್ವಿಕ ದೃಷ್ಟಿಕೋನ. ಯಾವುದೇ ಚಳವಳಿ ತಾತ್ತ್ವಿಕತೆಯಿಲ್ಲದ ಆವೇಶವಾದಾಗ ಮುಗ್ಗರಿಸುತ್ತದೆ. ಬಹುತೇಕ ಜನಪರ ಚಳವಳಿಗಳು ತಾತ್ತ್ವಿಕ ಅಸ್ಪಷ್ಟತೆ, ತಾತ್ತ್ವಿಕತೆಯನ್ನು ಅನ್ವಯಗೊಳಿಸುವ ಬದ್ಧತೆಯ ಕೊರತೆ, ವ್ಯಕ್ತಿಗತ ದೌರ್ಬಲ್ಯಗಳಿಂದ ಸೋತಿವೆ. ಮಹಿಳಾ ಚಳವಳಿಯಲ್ಲೂ ಇಂತಹ ತಾತ್ತ್ವಿಕತೆಯ ಕೊರತೆಯಿದ್ದುದು ಅಥವಾ ಅನನ್ಯ ಕಾರಣಗಳಿಗಾಗಿ ಚಳವಳಿಯಲ್ಲಿ ಗುರ್ತಿಸಿಕೊಳ್ಳುವುದು ನಿಲ್ಲಬೇಕಿದೆ.

9. i) ಮಹಿಳಾವಾದ ಪ್ರತಿಪಾದಿಸುವ ಜೈವಿಕ ವರ್ಗೀಕರಣದ ನಿರಾಕರಣೆ
   ii) ಮಹಿಳಾವಾದ ಎಲ್ಲರ ಹಿತ ಬಯಸುತ್ತದೆಯೇ ವಿನಃ ಮಹಿಳೆಯ ಹಿತವನ್ನಷ್ಟೇ ಅಲ್ಲ.
   iii) ಮಹಿಳಾವಾದ 'ಮಹಿಳಾ ಜಗತ್ತಿಗೆ' ಸಂಬಂಧಿಸಿದ್ದು ಮಾತ್ರವಾಗದೆ 'ಹೆಣ್ಣಿನ ಜಗತ್ತಿ'ಗೆ ಸಂಬಂಧಿಸಿದ್ದಾಗಿರಬೇಕು ಎಂಬ ನಿಲುವು.

   ಇಂತಹ ಪರಿಕಲ್ಪನೆಗಳನ್ನು ಒಳಗೊಂಡು ಮಹಿಳಾ ಚಳವಳಿ ಮರುನಿರ್ವಚನಗೊಳ್ಳಬೇಕು ಅನ್ನಿಸುತ್ತದೆ.

10. ಮಹಿಳಾವಾದ ಎಂಬ ತಾತ್ತ್ವಿಕತೆ ಬದುಕನ್ನು ಪ್ರವೇಶಿಸುವ ಒಂದು ಕಿರುಬಾಗಿಲು. ಅದು ಕಡೆಗೂ ಬದುಕಿನ ಅನೂಹ್ಯ ಅಪಾರವನ್ನು ತೆರೆಯುವ ಉದ್ದೇಶವನ್ನೇ ಹೊಂದಿದೆ. ಪ್ರತಿಯೊಂದು ಕ್ಷೇತ್ರವೂ ತನ್ನ ಚೌಕಟ್ಟಿನ ಹೊರಗೆ ಬೆಳೆಯಬೇಕಾಗುತ್ತದೆ ಮತ್ತು ಬೆಳೆಯುತ್ತಿರುತ್ತದೆ.

❑



# ಒಂದು ಹೆಜ್ಜೆ ಮುಂದೆ.... ಎರಡು ಹೆಜ್ಜೆ ಹಿಂದೆ...

*ಸಿ.ಜಿ. ಮಂಜುಳಾ,* ಪತ್ರಕರ್ತರು

ಹೆಣ್ಣುಮಕ್ಕಳಿಗೆ ಸಾಂಸ್ಕೃತಿಕ ಮೌಲ್ಯಗಳನ್ನು ಕಲಿಸುವ ಸಾಂಪ್ರದಾಯಿಕವಾದಂತಹ ಕೌಟುಂಬಿಕ, ಸಾಮಾಜಿಕ ವಲಯದಲ್ಲಿ ಅಂತರಂಗದೊಳಗೆ ಬಾಲ್ಯದಲ್ಲೇ ಸ್ಫೋಟಗೊಳ್ಳುತ್ತಿದ್ದ ಮನಃಸ್ಥಿತಿಯೇ ಸ್ವಂತಿಕೆಯ ತುಡಿತದ ಮೂಲ. ಈ ನಿಟ್ಟಿನಲ್ಲಿ ಮನೆಯಲ್ಲಿಯೇ ಹಲವು ಅಸಮಾನತೆಗಳ ವಿರುದ್ಧ ಸೂಕ್ಷ್ಮವಾಗಿ ಸ್ಪಂದಿಸಿ. ಬಂಡೇಳುತ್ತಿದ್ದ ಅಕ್ಕ. ಏನೇನೋ ಆದರ್ಶಗಳ ಬೆನ್ನು ಹತ್ತಿ ಗಾಂಧಿವಾದ, ಬಸವಣ್ಣನ ವಿಚಾರಗಳನ್ನು ತಲೆಯಲ್ಲಿ ತುಂಬಿಸಿಕೊಂಡ ಅಣ್ಣ. ವಿಚಾರ ಆದರ್ಶಗಳೇ ಬದುಕಾಗಿಸಿಕೊಂಡ ಪರಿಣಾಮವಾಗಿ ವ್ಯಾವಹಾರಿಕ ಬದುಕಿನ ಸೋಲುಗಳು ಮನೆಯಲ್ಲಿ ಮೂಡಿಸುತ್ತಿದ್ದ ಸಂಘರ್ಷ. ಇಂತಹ ಸನ್ನಿವೇಶದಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ 40, 50ರ ಸಂಖ್ಯೆಯ ಹುಡುಗರ ಮಧ್ಯೆ ಅನೇಕ ತರಗತಿಗಳಲ್ಲಿ ಏಕೈಕ ವಿದ್ಯಾರ್ಥಿನಿಯಾಗಿ ಓದುವ ಸಂದರ್ಭ ಸಾಮಾಜಿಕವಾಗಿ ಮೂಡಿಸಿದ್ದು ಹೊಸ ಆತ್ಮವಿಶ್ವಾಸ.

ಏನನ್ನಾದರೂ ಸಾಧಿಸಬೇಕೆಂಬ ಹಂಬಲ. ಇದಕ್ಕಾಗಿ ಹೆಣ್ಣುಮಕ್ಕಳ ಪಾತ್ರವನ್ನು ಸೀಮಿತಗೊಳಿಸಿಬಿಡಬಹುದಾದ ಸಾಂಪ್ರದಾಯಿಕ ಚೌಕಟ್ಟುಗಳನ್ನು ಮೀರುವ ಛಲ. ವಿವೇಕಾನಂದರ ಶಿಷ್ಯೆಯಾಗಿ ಆಧ್ಯಾತ್ಮಿಕ ಸಾಧನೆ ಮಾಡಿದ ಸಿಸ್ಟರ್ ನಿವೇದಿತಾ, ಭೈರಪ್ಪನವರ ದಾಟು ಕಾದಂಬರಿಯ ಸತ್ಯಭಾಮೆ, ಕಂಕಣ ಸಿನಿಮಾದ ಪಾತ್ರಗಳು, ಲಂಕೇಶರ 'ಪಲ್ಲವಿ'ಯ ನಾಯಕಿ, ಶಾಂತಿನಾಥ ದೇಸಾಯಿಯವರ ಕಥೆ, ಕಾದಂಬರಿಗಳ ನಾಯಕಿಯರು, ವೀಣಾ ಎಲಬುರ್ಗಿ ಅವರ ಕಥೆಗಳು, 'ಗಂಡಸರು' ಕಾದಂಬರಿ – ಸಾಂಪ್ರದಾಯಿಕತೆಯನ್ನು ಮೀರಿದ ಮಾದರಿಗಳಾಗಿ ಹೊಸ ಆದರ್ಶಗಳ ಕನಸು, ಬದುಕಿನ ಕಟು ವಾಸ್ತವಗಳು ಮನಸ್ಸು ತುಂಬಿಕೊಳ್ಳುತ್ತಿದ್ದ ಕಾಲವದು. ಆಗ ಮೈಸೂರಿನ ಪ್ರಗತಿಪರ ವಾತಾವರಣದಲ್ಲಿ ಮಹಾದೇವಪ್ಪ ಸ್ಮಾರಕ ಲೈಬ್ರರಿಯಲ್ಲಿ ನಿಯಮಿತವಾಗಿ ಉಪನ್ಯಾಸ, ಚರ್ಚೆಗಳನ್ನು ಕೇಳಲು ಸಿಕ್ಕಿದ ಅವಕಾಶಗಳಿಂದಾಗಿ ಹೊಸ ಸೈದ್ಧಾಂತಿಕ ವಿಚಾರಗಳ ಲೋಕದ ಪರಿಚಯ. ದಿನನಿತ್ಯದ ಹಲವು ಕೋಟಲೆಗಳನ್ನು ತಾತ್ವಿಕವಾಗಿ ಅರ್ಥೈಸುವ ವಿಧಾನ ಬದುಕಿಗೆ ತುಂಬಿದ ಅರಿವಿನ ಬೆಳಕು ಹಾಗೂ ಬದುಕಲ್ಲಿ ಮುನ್ನಡೆಯಲು ನೀಡಿದ ಆತ್ಮವಿಶ್ವಾಸ ಮುಖ್ಯವಾದದ್ದು. ಅದೇ ಸಂದರ್ಭದಲ್ಲಿ, ದೆಹಲಿಯಿಂದ ಪ್ರಕಟಣೆ ಆರಂಭಿಸಿದ್ದ 'ಮಾನುಷಿ' ಪತ್ರಿಕೆಗೆ ಚಂದಾದಾರಳಾಗಿದ್ದೆ. ಅಲ್ಲಿ ಆಗ ಪ್ರಕಟವಾಗುತ್ತಿದ್ದ ವರದಕ್ಷಿಣೆ ದಹನದ ಕಥೆಗಳನ್ನು ಮೊದಮೊದಲು ನಂಬುವುದೇ ಅಸಾಧ್ಯವಾಗಿತ್ತು. ಮಹಿಳಾ ಶೋಷಣೆಯ ಹೊಸ ಮುಖಗಳನ್ನು ಪರಿಚಯಿಸಿತ್ತು. ಆ ನಂತರ ಮೈಸೂರಿನಲ್ಲಿ ಓಪನ್ ಏರ್ ಥಿಯೇಟರ್‌ನಲ್ಲಿ ನಡೆದ ಮೊದಲ ಸಮತಾ ಮಹಿಳಾ ಹಕ್ಕುಗಳ ವೇದಿಕೆಯ ಸಭೆಗೂ ನನ್ನ ಅಕ್ಕನ ಜೊತೆ ಹಾಜರಾಗಿದ್ದೆ.

ಅಸಮಾನ ಸಂಸ್ಕೃತಿಯ ನೆಲೆಗಳು ದಿನನಿತ್ಯದ ಬದುಕಲ್ಲಿ ಹೆಣ್ಣನ್ನು ಕುಬ್ಜವಾಗಿಸುವ ಹಾಗೂ ಆಕೆಯ ಚಲನಶೀಲತೆಗೂ ಧಕ್ಕೆ ತರುವಂತಹ ವಾತಾವರಣದ ವಿರುದ್ಧ ಸಿಡಿದ ಮನ ಬರೆದದ್ದು ಬೀಸ್ಟ್ಸ್ ಇನ್ ದಿ ಡಾರ್ಕ್‌ನೆಸ್ ಎಂಬ ಪದ್ಯ. ನಾನು ಬರೆದ ಈ ಇಂಗ್ಲಿಷ್ ಪದ್ಯ 'ಮಾನುಷಿ'ಯಲ್ಲಿ ಪ್ರಕಟಗೊಂಡಾಗ ಮನದಲ್ಲಿ ಕಿಚ್ಚು ಮೂಡಿಸುವ ಭಾವನೆಗಳನ್ನು ಹಂಚಿಕೊಳ್ಳಲು, ಕೇಳಿಸಿಕೊಳ್ಳಲು ನೆಲೆ ಇದೆ ಎಂಬುದು ನೀಡಿದಂತಹ ಸುಭದ್ರ ಭಾವನೆ ಮುಖ್ಯವಾದದ್ದು. ಹೀಗಾಗಿಯೇ ಮಹಿಳಾ ಚಳವಳಿ ಬದುಕಿಗೆ ನೀಡಿದ ದೃಷ್ಟಿಕೋನ ಬಹುಶಃ ನನಗೆ ಮುಖ್ಯವಾದದ್ದು. 1980ರಲ್ಲಿ ನನ್ನ ಅಕ್ಕನ ಸ್ನೇಹಿತರಿಂದಾಗಿ ಓದಲು ಸಿಕ್ಕಿದ ಸಿಮನ್ ದಿ ಬೋವಾ ರ 'ಸೆಕೆಂಡ್ ಸೆಕ್ಸ್' ಪುಸ್ತಕವಂತೂ ಬದುಕಿನ ಗ್ರಹಿಕೆಗೆ ಹೊಸ ದೃಷ್ಟಿಕೋನವನ್ನೇ ನೀಡಿತ್ತು. ವೈಯಕ್ತಿಕವಾಗಿ ಸಂಕೋಚ ಹಾಗೂ ಹಿಂಜರಿಕೆಯ ಸ್ವಭಾವದವಳಾದ ನಾನು ಆಗೆಲ್ಲಾ ಮಹಿಳಾ ಚಳವಳಿಯ ಭಾಗವಾದ ಪ್ರತಿಭಟನಾ ಮೆರವಣಿಗೆಗಳಲ್ಲಿ ಪಾಲ್ಗೊಂಡಿದ್ದರೂ ಆಕ್ಟಿವಿಸ್ಟ್ ಆಗಿ ಪೂರ್ಣ ಪ್ರಮಾಣದಲ್ಲಿ ತೊಡಗಿಕೊಂಡಿಲ್ಲ. ವೈಯಕ್ತಿಕ ಬದುಕಲ್ಲಿ ಸ್ವಂತಿಕೆಗೆ ಧಕ್ಕೆಯಾಗದ ಹಾಗೆ ಬದುಕುವುದು ಹಾಗೂ ವೃತ್ತಿಪರ ಬದುಕಲ್ಲಿ ಅದರೆಲ್ಲಾ ಸವಾಲುಗಳೊಡನೆ ಗಂಭೀರವಾಗಿ ತೊಡಗಿಸಿಕೊಳ್ಳುವ ಬದ್ಧತೆಗೆ ಸ್ತ್ರೀವಾದ ಅಥವಾ ಮಹಿಳಾ ಚಳವಳಿಗಳ ಸೈದ್ಧಾಂತಿಕ ನೆಲೆಗಳು ಮನಕ್ಕೆ ಶಕ್ತಿಯನ್ನು ನೀಡಿವೆ.

ಜಾಗತೀಕರಣ ತಂದ ಮಾರುಕಟ್ಟೆ ಆರ್ಥಿಕತೆ ಒಂದೆಡೆ ಮಹಿಳೆಯರ ಪಾರಂಪರಿಕ ಉದ್ಯೋಗ ನೆಲೆಗಳನ್ನು ಕಿತ್ತುಕೊಂಡಿದೆ. ಮತ್ತೊಂದೆಡೆ ಉದ್ಯೋಗ ಪಡೆಗೆ ಭಾರಿ ಸಂಖ್ಯೆಯಲ್ಲಿ ಮಹಿಳೆಯರನ್ನು ಕರೆ ತಂದಿದೆ. ಹಿಂದೆಲ್ಲಾ ಭಾರತದಲ್ಲಿ ದುಡಿಯುವ ಮಹಿಳೆಯರೆಂದರೆ ಮೇಲ್ವರ್ಗದವರು ಅಥವಾ ಬಡ ವರ್ಗಕ್ಕೆ ಸೇರಿದವರಾಗಿರುತ್ತಿದ್ದರು. ಆದರೆ ಈಗ ಮಾಲ್‌ಗಳು, ಕಾಲ್‌ಸೆಂಟರ್‌ಗಳಿಂದ ಹಿಡಿದು ಮ್ಯಾನೇಜೀರಿಯಲ್ ಮಟ್ಟದವರೆಗೆ ಹಲವು ನೆಲೆಗಳಲ್ಲಿ ಮಹಿಳಾ ಉದ್ಯೋಗಿಗಳಿದ್ದಾರೆ. ವೃತ್ತಿಪರ ಮಹಿಳೆಯರು ತಮ್ಮ ಕ್ಷೇತ್ರಗಳಲ್ಲಿ ಸಾಧಕಿಯರೂ ಆಗುತ್ತಿದ್ದಾರೆ. ಇದಕ್ಕೆ ಅನುಗುಣವಾಗಿ ಕೌಟುಂಬಿಕ ಹಾಗೂ ಸಾಮಾಜಿಕ ಬದುಕಲ್ಲಿ ಸಂಬಂಧಗಳಲ್ಲಿ ಹೊಸ ಬಗೆಯ ಸಮೀಕರಣಗಳು ಸಾಧ್ಯವಾಗದೆ ಸೃಷ್ಟಿಯಾಗುತ್ತಿರುವ ಸಂಘರ್ಷಗಳ ನಿರ್ವಹಣೆ ಹಾಗೂ ಆಳದಲ್ಲಿ ಬದಲಾಗದ ವ್ಯವಸ್ಥೆ ಕುರಿತಂತೆ ಸಮಗ್ರ ದೃಷ್ಟಿಕೋನದ ಸ್ಪಷ್ಟ ಸೈದ್ಧಾಂತಿಕ ನಿಲುವುಗಳ ಮಂಡನೆ ಇಂದು ಮಹಿಳಾ ಚಳವಳಿಯ ಮುಂದಿರುವ ಸವಾಲು.

ಮಹಿಳಾ ಹಕ್ಕುಗಳ ಬಗೆಗಿನ ಅರಿವು ಹೆಚ್ಚಿದಂತೆಯೆ ಮಹಿಳೆ ಮೇಲೆ ಹೆಚ್ಚುತ್ತಿರುವ ಹಿಂಸೆ ಹಾಗೂ ಅದು ಪಡೆದುಕೊಳ್ಳುತ್ತಿರುವ ಸ್ವರೂಪಗಳು, 'ಪ್ರಗತಿಯತ್ತ ಒಂದು ಹೆಜ್ಜೆ ಮುಂದೆ ಎರಡು ಹೆಜ್ಜೆ ಹಿಂದೆ' ಎಂಬಂತಾಗಿದೆ. ಅದರಲ್ಲೂ ಹೆಣ್ಣುಭ್ರೂಣ ಹತ್ಯೆಯ ಪಿಡುಗು ಹೆಣ್ಣುಕುಲಕ್ಕೇ ವಿನಾಶಕಾರಿಯಾಗಿದೆ. ಹೆಣ್ಣಿನ ವೈಯಕ್ತಿಕ ಹಾಗೂ ಸಾರ್ವಜನಿಕ ಬದುಕನ್ನು ನಿಯಂತ್ರಿಸಲು ಯತ್ನಿಸುತ್ತಿರುವ ಬಲ ಪಂಥೀಯ ಶಕ್ತಿಗಳು ಹಾಗೂ ಕೋಮುವಾದ ಈಗಿನ ಮುಖ್ಯ ವಿಚಾರಗಳಾಗಿವೆ. ಅಭಿವೃದ್ಧಿ, ಆಧುನೀಕರಣ, ಸಂಸ್ಕೃತಿ, ರಾಷ್ಟ್ರೀಯತೆ, ಜಾತಿ–ವರ್ಗ ಈ ಎಲ್ಲದರ ಮಧ್ಯೆ ಹೆಣ್ಣಿನ ಅಸ್ಮಿತೆಯನ್ನು ಕಂಡುಕೊಳ್ಳುವ, ನಿರ್ವಚಿಸುವ ಪ್ರಯತ್ನಗಳು, ತಾತ್ವಿಕ ನೆಲೆಗಳನ್ನು ರೂಪಿಸುವ ಪ್ರಯತ್ನಗಳು ಸಾಕಷ್ಟು ಪ್ರಮಾಣದಲ್ಲಿ ಆಗುತ್ತಿಲ್ಲ.

ಮಾರುಕಟ್ಟೆಯ ಸರಕಾಗಿ ಹೆಣ್ಣನ್ನು ಬಳಸಿಕೊಳ್ಳುವ ಮಾಧ್ಯಮಗಳೇ ಮಹಿಳಾ ಹಕ್ಕುಗಳಿಗೆ ಸಂಚಕಾರ ಬಂದಾಗ ಅಂತಹ ವಿಚಾರಗಳನ್ನು ದೊಡ್ಡ ನೆಲೆಯಲ್ಲೇ ಮುನ್ನೆಲೆಗೂ ತಂದಿವೆ. ಮಹಿಳೆಗೆ ರಾತ್ರಿಪಾಳಿ ನಿಷೇಧ ಕುರಿತಂತೆ ರಾಜ್ಯ ಸರ್ಕಾರದ ಸಚಿವರೊಬ್ಬರ ಹೇಳಿಕೆ ಹಾಗೂ ಇತ್ತೀಚೆಗೆ ಮಂಗಳೂರಿನ ಪಬ್ ದಾಳಿ ಪ್ರಕರಣದ ಸಂದರ್ಭದಲ್ಲಿ ಈ ವಿಚಾರವನ್ನು ಆಂದೋಲನದ ರೂಪದಲ್ಲಿ ಹೈಲೈಟ್ ಮಾಡಿ ಸಾರ್ವಜನಿಕ ಚರ್ಚೆಗೆ ತಂದಿದ್ದು ರಾಷ್ಟ್ರೀಯ ಮಾಧ್ಯಮಗಳು. ಪ್ರಾದೇಶಿಕ ನೆಲೆಯಲ್ಲಿ ಮುಖ್ಯವಾಹಿನಿಯ ಹಲವು ಪತ್ರಿಕೆಗಳಲ್ಲಿ ಈ ವಿಚಾರದಲ್ಲಿ ಹಲ ಬಗೆಯ ಗೊಂದಲಗಳು, ಸೈದ್ಧಾಂತಿಕ ನಿಲುವುಗಳ ಬಿಕ್ಕಟ್ಟುಗಳು ಧ್ವನಿಸಿದ್ದು ಯಾವುದೇ ಮಹಿಳಾ ವಿಚಾರದಲ್ಲಿ ಸಮಾಜಲ್ಲಿ ಕಂಡು ಬರುವ ವೈರುಧ್ಯ ಹಾಗೂ ದ್ವಂದ್ವ ನಿಲುವುಗಳಿಗೆ ಸಂಕೇತವೇ ಆಗಿತ್ತು.

ಈಗಿನ ಡಿಜಿಟಲ್ ಯುಗದಲ್ಲಿ ಮಹಿಳಾ ವಿಚಾರಗಳನ್ನು ಕುರಿತಂತೆ ವಿಭಿನ್ನ ಬಗೆಯ ಧ್ವನಿಗಳು ದಾಖಲಾಗುತ್ತಿರುವ ಪ್ರಸಕ್ತ ಸಂದರ್ಭದಲ್ಲಿ ನಿಯಂತ್ರಣಗಳಿಲ್ಲದ ಅಭಿವ್ಯಕ್ತಿ ಕ್ರಮ ಮಹಿಳಾ ವಿಚಾರಗಳನ್ನು ಡೈಲ್ಯೂಟ್ ಮಾಡುವ ಸಂದರ್ಭಗಳೂ ಇವೆ. ತಂತ್ರಜ್ಞಾನದ ಬೆಳವಣಿಗೆ ಹಾಗೂ ಹೊಸ ಆರ್ಥಿಕ ಸಂರಚನೆಗಳಿಂದಾಗಿ ಸೃಷ್ಟಿಯಾಗಿರುವ 'ಜಾಗತಿಕ ಹಳ್ಳಿ'ಯಲ್ಲಿ ಉದ್ಭವವಾಗುತ್ತಿರುವ ವೈವಿಧ್ಯಮಯ ಜೀವನಶೈಲಿಗಳು ಮಹಿಳಾ ಬದುಕಲ್ಲಿ ತರುತ್ತಿರುವ ಪರಿವರ್ತನೆಗಳು, ಸವಾಲುಗಳೆಲ್ಲವನ್ನೂ ಬಿಂಬಿಸುವ ತಾತ್ವಿಕ ದೃಷ್ಟಿಕೋನಗಳನ್ನು 'ಮಹಿಳಾ ಚಳವಳಿ' ಬೆಳೆಸಬೇಕಿರುವುದು ಸದ್ಯದ ಸವಾಲು.

❑

# ಪಿಂಕ್ ಚಡ್ಡಿ ಪ್ರತಾಪ

• ಪ್ರತಿಭಾ ನಂದಕುಮಾರ್

-೧-

## ದೇವಿ

ಅವಳು ಮಲವಿಲ್ಲದ ನಿರ್ಮಲೆ.
ಅವಳು ಲೋಲಾಕ್ಷಿಕಾಮರೂಪಿಣಿ

ಕಾಮಕ್ಕೆ ಯೋಗೇಶ್ವರಿ, ಕ್ರೋಧಕ್ಕೆ ಮಾಹೇಶ್ವರಿ
ಲೋಭಕ್ಕೆ ವೈಷ್ಣವಿ, ಮದಕ್ಕೆ ಬ್ರಹ್ಮಾಣಿ,
ಮೋಹಕ್ಕೆ ಸ್ವಯಂಭು ಕಲ್ಯಾಣಿ, ಮಾತ್ಸರ್ಯಕ್ಕೆ ಇಂದ್ರಜಾ
ಪೈಶುನ್ಯಕ್ಕೆ ಯಮದಂಡಭದ್ರಾ, ಅಸೂಯೆಗೆ ವಾರಾಹೀ.

ದೇವಿಯೆಂದರೆ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಸ್ವರೂಪಿಣಿ.

ಅವಳು ರುಧಿರಸ್ಥಿತಾ, ಮಾಂಸನಿಷ್ಠಾ, ಮಧುಪ್ರೀತಾ,
ಮಾಧ್ವೀಪಾನಾಲಸಾಮತ್ತಾ, ಬಲಿಪ್ರಿಯಾ, ಸುಖಾರಾಧ್ಯಾ,
ಲಾಸ್ಯಪ್ರಿಯಾ, ವಿಶ್ರುಂಖಲಾ, ರತಿಪ್ರಿಯಾ, ಕಾಮಕೇಲಿತರಂಗಿತಾ

ಶಕ್ತಿ ದೇವಿಯ ಯೋಗವಿಲ್ಲದಿದ್ದರೆ
ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರು
ಪ್ರೇತಗಳಂತೆ ನಿಶ್ಚಲರು
ಅವಳು ಅವರನ್ನೇರಿ ಕುಳಿತ ಪಂಚಪ್ರೇತಾಸನಾಸೀನಾ

ಅವನು ಶುದ್ಧಜ್ಞಾನಸ್ವರೂಪನಾದರೆ ಅವಳು ವಿಮರ್ಶಾಸ್ವರೂಪಳು.
ಅವಳು ಅಂತರ್ಮುಖಸಮಾರಾಧ್ಯಾ ಬಹಿರ್ಮುಖಸುದುರ್ಲಭಾ
ಅವಳು ಕಾಮೇಶಿ, ಕಾಮಿತಾರ್ಥದಾ, ಕಾಮಸಂಜೀವಿನೀ, ಕಾಮದಾಯಿನೀ
ಅವಳು ಲಬ್ಧಪತಿಃ ಲಬ್ಧಭೋಗಾ ಲಬ್ಧಸುಖಾ ಲಬ್ಧಕಾಮಾ
ತನ್ನಿಚ್ಛೆಯಂತೆ ಪತಿ, ಭೋಗ, ಸುಖ, ಕಾಮವನ್ನು ಹೊಂದಿದವಳು.

ಅವಳು ಕುಡಿಯಬಹುದು, ಕುಣಿಯಬಹುದು,
ಕೇಳಿಯಲ್ಲಿ ಮುಳುಗಿ ತೇಲಬಹುದು
ಹಿಡಿಯಲಾರಿರಿ ನೀವು ಅವಳನ್ನು ಪಬ್ಬುಗಳಲ್ಲಿ
ಹೊಡೆದು ಕೆಡವಿ ದಕ್ಕಿಸಿಕೊಳ್ಳಲಾರಿರಿ
ಮಬ್ಬು ಬೆಳಕಲ್ಲಿ ಕಾಣಲಾರಿರಿ ನಿಮ್ಮ ಮಂಜುಕಣ್ಣುಗಳಲ್ಲಿ
ಎದ್ದುಬರುತ್ತಾಳೆ ನೂರು ನಾಲಿಗೆ ಚಾಚಿ ರಕ್ತ ಹೀರುತ್ತ
ಅವಳ ಬೊಗಸೆಯೊಳಗೆ ನೀವು ಆಪೋಶನ
ಸಿಂಧೂರ ಕೇಸರಿಗೆ ಅವಳೇ ಅಧಿದೇವತೆ
ನಿಮ್ಮದೆಲ್ಲ ಬರಿ ನೀರಿಗೆ ಕರಗುವ ಗುಲಾಲು
ಗಲ್ಲಿಯಲ್ಲಿ ನುಸುಳಿ ಕಂಬದ ಮರೆಯಿಂದ ಮುಲುಗುಡುವ
ನಿರ್ವೀರ್ಯರು ಬಲ್ಲಿರೇನಯ್ಯಾ ಅವಳ ಹುಟ್ಟಿನ ಕುಲವ
ಪೀಠಸ್ಥೆಯನ್ನು ಅರ್ಚಿಸಿ ಭಜಿಸಿ ನೈವೇದ್ಯ ಭುಜಿಸಿ ತಿಲಕ ಧರಿಸಿ
ಮಡದಿಯ ಕಾಡಿಗಟ್ಟಿದವನ ಹೆಸರಲ್ಲಿ ಕವಿದು ಬಿದ್ದರು
ಹರಿಯ ಚರಣದಲಿ ಹರನ ಸತಿಯ ಮರೆತು

ಕಲಿತು ಬನ್ನಿರಿ ಮೊದಲು ಸ್ವರ ಅಕ್ಷರಗಳ
ಹ್ರಸ್ವ ದೀರ್ಘ ಒತ್ತಕ್ಷರ ಓತ್ವ ಅಲ್ಪ ಮಹಾಪ್ರಾಣಗಳ
ತೊಳೆದುಬನ್ನಿರಿ ಕಾಲು ಕಳೆದು ಹೊರಗಿನ ಮಲಗಳ
ಎರಗಿ ನಿಲ್ಲಿರಿ ಅಲ್ಲೇ ಬಾಗಿ ಮೈಕೈಗಳ
ಹೂಹಣ್ಣುಗಳ ಬಿಡಿ ಕಾಯಿ ಕರ್ಪೂರವೂ ಬೇಡಾ
ದಕ್ಷಿಣೆಯು ತಟ್ಟೆಗೆ ಬೀಳದಿದ್ದರು ಝುಣಝುಣ
ತೊದಲು ನಾಲಿಗೆಯಲ್ಲಿ ರಾತ್ರಿಯ ಇಳಿಯದ ನಶೆಯುಲ್ಲಿ
ಮಂತ್ರ ಬಾರದು ಸ್ವಸ್ತಿ ಸರಾಗವಲ್ಲ ಅರ್ಚನೆಯ ಕುಂಕುಮ ಗಂಧವಿಲ್ಲ

ಆದರೂ ಒಲಿಯಬಹುದು ಅವಳು ಹೇಳಲಾಗದು
ನಿಮ್ಮ ಎದೆಯೊಳಗೆ ಇದ್ದರೆ ಪ್ರೇಮ
ಅರಿತರೆ ನೀವು ಅವಳು ಬರಿಯ ಬೊಂಬೆಯಲ್ಲ
ಹಾಡಿದರೆ ತಾಯಿ ಹರಸಿದರೆ ದೇವಿ.
ಒಲಿದರೆ ರತಿ ಕೆರಳಿದರೆ ಕಾಳಿ.

ಅದಕ್ಕಿಂತ ಸಕ್ಸಸ್ ಸ್ಟೋರಿ ಬೇರೆ ಇಲ್ಲ. ಖಾಕಿ ಚಡ್ಡಿಗಳು ಮಾಡಿದ್ದಕ್ಕೆಲ್ಲ ಇಡೀ ದೇಶ ಚರ್ಚೆ, ವಿತಂಡವಾದ, ಪರ–ವಿರೋಧ ಸಮಜಾಯಿಷಿ ಇತ್ಯಾದಿಗಳಲ್ಲಿ ತೊಡಗಿಕೊಂಡು ಸಾಕಷ್ಟು ಜನರ ಸಮಯ, ವ್ಯವಧಾನ, ಮಾಧ್ಯಮದ ಅವಕಾಶಗಳನ್ನು ಕಳೆದು ಕೊಟ್ಟಕೊನೆಗೆ ಕೈಚೆಲ್ಲಿ ನಾವು ಇರೋದೇ ಹೀಗೆ ಅನ್ನುತ್ತಿದ್ದುದೂ ರೂಢಿಯಾಗಿಬಿಟ್ಟಿತ್ತು. ಮಾತಾಡುವಾಗಲೇ ಗೊತ್ತಾಗಿಬಿಡುತ್ತಿತ್ತು ಇದು ಇಷ್ಟೇ ಅಂತ. ಅಪರಾಧಿಗಳು ಯಾವುದೇ ಅಡೆತಡೆಯಿಲ್ಲದೇ ಸರಾಗವಾಗಿ, ಸಹಜವಾಗಿ ತಮ್ಮ ದಾಳಿಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದರು (ದ್ದಾರೆ).

ನಮ್ಮ ನಿಶಾ ಸೂಸನ್‌ಗೆ ಅದ್ಯಾವ ಗಳಿಗೆಯಲ್ಲಿ ಹೊಳೆಯಿತೋ ಏನೋ ಅಥವಾ ಎಲ್ಲ ಹೆಂಗಸರೂ ಹೀಗೇ, ಹಠಾತ್ತನೆ ಯಾರೂ ನಿರೀಕ್ಷಿಸಿರದ ಹೊತ್ತಲ್ಲಿ ಥಟ್ಟನೆ ಎತ್ತಿ ಒಗೆಯುತ್ತಾರೆ ತಮ್ಮ ಕಾಣದ ಬತ್ತಳಿಕೆಯಲ್ಲಿ ಕಾದಿಟ್ಟಿರುವ ಅತ್ಯಂತ ತೀಕ್ಷ್ಣ ಬಾಣವನ್ನು. ಖಾಕಿ ಚಡ್ಡಿಯನ್ನು ಎದುರಿಸಲು ಪಿಂಕ್ ಚಡ್ಡಿಯೇ ಸರಿ ಅಂತ ಯಾವ ಗಳಿಗೆಯಲ್ಲಿ ತೋರಿತೋ ಅಂತೂ ಅದರ ಪಾಟಿ ಸವಾಲಿಗೆ ಉಸಿರಿಲ್ಲದ ಹಾಗೆ ಅಡಗಿಬಿಟ್ಟರು ಅಬ್ಬರಿಸುತ್ತಿದ್ದವರು. ಇದು ಹೀಗೇ. ಶತಶತಮಾನ ಗಳಿಂದ ಆಗುತ್ತಿರುವುದೂ ಹೀಗೇ. ಎಲ್ಲೆಲ್ಲಿ ಯಾವ್ಯಾವಾಗ ಹೆಣ್ಣನ್ನು ವಸ್ತುವಾಗಿಸಿ ಬಿಕರಿಗಿಳಿಯುತ್ತಾರೋ ಆವಾಗಾವಾಗೆಲ್ಲ ಸಂಭವಾಮೀ ಯುಗೇ ಯುಗೇ ಪಿಂಖಿ ಚಡ್ಡಿ ಮಹಾತ್ಯ್ಮಂ. ಬೇರೆ ರೂಪದಲ್ಲಿ ಬೇರೆ ರೀತಿಯಲ್ಲಿ. ಹೆಣ್ಣು ಶಕ್ತಿ ಅನ್ನುವುದು ಆಗೆಲ್ಲ ಪುನರ್ ಪ್ರತಿಪಾದಿತವಾಗುತ್ತಿರುತ್ತದೆ. ಹೆಣ್ಣು ಬರೀ ರಿಸೀವರ್ – ಸ್ವೀಕೃತಿಯಷ್ಟೇ ಅವಳದು ಅನ್ನುವ ವಾದಕ್ಕೆ ಧ್ವನಿ ಹೆಚ್ಚಾದಾಗಲೆಲ್ಲಾ, ಅಲ್ಲ ಅವಳು ಡೋನರ್, ನೀಡುವವಳು, ಅವಳೇ ನಿಜ ಸೃಷ್ಟಿಕರ್ತೆ ಅನ್ನುವುದು ಸಾಬೀತಾಗುತ್ತಲೇ ಇರುತ್ತದೆ. ಅದರಲ್ಲಿ ಯಾರಿಗೂ ಯಾವುದೇ ಅನುಮಾನಗಳಿಲ್ಲ, ಇರಬಾರದು ಕೂಡಾ.

ಕಟ್ಟುಪಾಡುಗಳಲ್ಲಿ ಜನರನ್ನು ಬಂಧಿಸುವ ಒಂದು ತೀಟೆ ಎಲ್ಲಾ ಕಾಲದಲ್ಲೂ ಇರುತ್ತದೆ. ಅದು ಒಪ್ಪಿತ ನಡವಳಿಕೆಗಳನ್ನು ಎಲ್ಲರ ಮೇಲೆ ಹೇರುತ್ತಿರುತ್ತದೆ. ಅದನ್ನು ದಾಟುವ ಪ್ರಯತ್ನಗಳನ್ನು ಮಾಡುವುದೂ ಮನುಷ್ಯ ಸಹಜ ಗುಣ ಅನ್ನುವುದು ಗೊತ್ತಿದ್ದೂ, ನಮ್ಮ ಸಂಸ್ಕೃತಿಯಲ್ಲಿ ಇಲ್ಲ ಅನ್ನುವ ಚಾಟಿ ಬೀಸಿ "ಹೆಣ್ಣುಮಂದೆಯನ್ನು" ದೊಡ್ಡಿಗೆ ಅಟ್ಟುವ ವಾದ ಕೂಡಾ ಯಾವಾಗಲೂ ಇರುತ್ತದೆ. ಅದು ಯಾವ ಹಂತದಲ್ಲೂ ನಿಲ್ಲುವುದಿಲ್ಲ. ಯಾಕೆಂದರೆ ನಮ್ಮಲ್ಲಿ ಎಲ್ಲಾ ಕಾಲದಲ್ಲೂ ಎಲ್ಲದಕ್ಕೂ ಒಂದು ಅಪವಾದ – ಎಕ್ಸೆಪ್ಷನ್ – ಇದ್ದೇ ಇರುತ್ತದೆ. ಒಬ್ಬಳು ಸೀತೆ ಇದ್ದರೆ, ಒಬ್ಬಳು ಶೂರ್ಪನಖಿ ಇರುತ್ತಾಳೆ. ಇಬ್ಬರೂ ಹೆಣ್ಣೆ, ಇಬ್ಬರಿಗೂ ಸ್ತ್ರೀ ಸಹಜ ಆಸೆ ಆಕಾಂಕ್ಷೆಗಳೇ ಇದ್ದವು. ಆಯಾ 'ಸಂಸ್ಕೃತಿ'ಗೆ ಒಳಪಟ್ಟಂತೆ ಒಬ್ಬಳು ಅರಮನೆಯ ಗವಾಕ್ಷಿಯಿಂದ ರಾಮನನ್ನು ನೋಡಿ ವರಿಸಿದರೆ, ಇನ್ನೊಬ್ಬಳು ಕಾಡಿನಲ್ಲಿ ಅಲೆಯುತ್ತಿದ್ದ ಸುಂದರಾಂಗನನ್ನು ನೋಡಿ ಮೋಹಿತಳಾದಳು. ಅಲ್ಲಿ ಬಿಲ್ಲು ಮುರಿದು ಸೀತೆಯನ್ನು ಗೆದ್ದ ರಾಮ, ಇಲ್ಲಿ ಅವಳ ಮೂಗು ಕುಯ್ಯಿಸಿ ತಿರಸ್ಕರಿಸಿದ. ರಾಮಾಯಣ ನಮ್ಮ ಸಂಸ್ಕೃತಿಯಾದರೆ ಶೂರ್ಪನಖಿಯೂ ನಮ್ಮವಳೇ. ಆಗಲೂ ಲಕ್ಷ್ಮಣ ಮಾರಲ್ ಪೋಲೀಸಿಂಗ್ ಮಾಡಿ ಅವಳ ಮೂಗು ಮೊಲೆ ಕುಯ್ದು ಓಡಿಸಿದ. ಹಾಗಂತ ಇವರೇನು ಗೆದ್ದರೆ? ಇವರ ಮಾತೇನು ನಡೆಯಿತೇ? ಆಯಿತಲ್ಲ ರಾಮಾಯಣ!

ಕ್ರಿಸ್ತಪೂರ್ವಕ್ಕಿಂತ ಹಿಂದೆಯೇ ಬರೆದ ಗುಣಾಢ್ಯನ 'ಬೃಹತ್ಕಥೆ' ಯಲ್ಲಿಯೇ ಹೆಣ್ಣುಮನಸ್ಸಿನ ಎಲ್ಲ ಸಂಕೀರ್ಣಗಳನ್ನು ಎಳೆ ಎಳೆಯಾಗಿ ಬಿಡಿಸಿ, ವರ್ಣಿಸಿ ಬಿಟ್ಟಿದ್ದಾರೆ. ಅಲ್ಲಿ ಕಾಣದ ಗೃಹಿಣಿ, ಪತಿವ್ರತೆ, ಸಾಧ್ವಿ, ಕುಟಿಲೆ, ಕುಂಟಿಲೆ, ಕುಂಟಲಗಿತ್ತಿ, ಹಾದರಗಿತ್ತಿ, ಕಳ್ಳಿ, ಕೊಲೆಗಾರ್ತಿ, ಮೋಸಗಾರ್ತಿ ಇತ್ಯಾದಿ ಥರಹಾವರಿ ಗುಣಗಳ ಹೆಂಗಸರು ಬೇರೆ ಎಲ್ಲೂ ಸಿಗುವುದಿಲ್ಲ. ಅದು ದೇಶ ಕಾಲ ಮೀರಿದ ದಾಖಲೆ. ಅತ್ಯಂತ ಪುರಾತನವೂ ಅತೀ ನವನವೀನವೂ ಆಗಿದೆ. ಹಾಗಿದ್ದ ಮೇಲೆ ಹೆಣ್ಣನ್ನು ತಿದ್ದಿ ತೀಡಿ ತಮಗೆ ಬೇಕಾದ ಹಾಗೆ ಮಾಡಿಕೊಳ್ಳುತ್ತೇವೆ ಅನ್ನುವ ಹುಚ್ಚೂ ಕೂಡಾ ಶತಶತಮಾನಗಳಾದರೂ ತೊಲಗುವುದಿಲ್ಲ ಅಂದ ಹಾಗಾಯಿತು. ಹಾಗೆಂದು ಹೆಣ್ಣುಗಳು ಭೂಮಿಯ ಮೇಲಿಂದ ಮರೆಯಾಗಿದ್ದಾರೆಯೇ? ಇಲ್ಲ. ಅವರ ಸ್ವಭಾವದಲ್ಲಿ ಬದಲಾಗಿದೆಯೇ? ಇಲ್ಲ. ಅವರನ್ನು ಯಾರಾದರೂ ತಮ್ಮ ಅಂಕೆಯೊಳಗೆ ಇಟ್ಟುಕೊಳ್ಳಲು ಆಗಿದೆಯೇ? ಇಲ್ಲ. ಮತ್ಯಾಕೆ ಹೆಣ್ಣಿನ ಮೇಲೆ ಪ್ರಭುತ್ವ ಸಾಧಿಸುವ ಈ ಹುಚ್ಚು?

ಅಲ್ಲೇ ಇರುವುದು ಸ್ವಾರಸ್ಯ. ಅವರು ಹೊಡೆದ ಹಾಗೆ ಮಾಡುತ್ತಾರೆ, ನಾವು ಅತ್ತ ಹಾಗೆ ಮಾಡುತ್ತೀವಿ. ಅವರಿಗೆ ಹೊಡೆದೆ ಅನ್ನುವ ಸಮಾಧಾನ ನೀಡುವವರೂ ನಾವೇ, ಅತ್ತ ಹಾಗೆ ಮಾಡಿ ಒಳಗೊಳಗೆ ನಗುವವರೂ ನಾವೇ. ಇಲ್ಲೇ ಇರೋದು ನಮ್ಮ ಶಕ್ತಿ.

ಆದರೆ ತೊಂದರೆ ಇರೋದು ನಮ್ಮ ಎಲ್ಲಾ ಶಕ್ತಿಯೂ ಈ ವಿಪರೀತಗಳನ್ನು ಸಂಭಾಳಿಸುವುದರಲ್ಲಿಯೇ ಕಳೆದುಹೋಗುವುದರಲ್ಲಿ. ಸದಾಕಾಲ ಅಡೆತಡೆಗಳನ್ನು ಮೀರುವುದರಲ್ಲಿ, ಕಟ್ಟುಗಳನ್ನು ಕತ್ತರಿಸುವುದರಲ್ಲಿ, ಸಂದಿ ಹುಡುಕಿ ನುಸುಳುವುದರಲ್ಲಿಯೇ ನಮ್ಮ ಹರಿವಿನ ರಭಸ ಕಡಿಮೆಯಾಗುತ್ತಿರುತ್ತದೆ. ಆದರೂ ಪರವಾಗಿಲ್ಲ, ನಿಲ್ಲುವ ಮಾತೇ ಇಲ್ಲ. ಸದಾ ಹರಿಯುತ್ತಿರುವುದೇ ನೀರಿನ ಗುಣ. ಅದಕ್ಕೆ ತಡೆಯಿಲ್ಲ. ಹೆಣ್ಣನ್ನು ಭೂಮಿಗೆ ಹೋಲಿಸುವುದು ಅವಳಲ್ಲಿ ಇನ್ನಷ್ಟು ಸಹನಶೀಲತೆ ಯನ್ನು ಆರೋಪಿಸಲು, ಹಾಗಿರಲಿ ಅನ್ನುವ ನಿರೀಕ್ಷೆಯಿಂದ. ವಾಸ್ತವ ವಾಗಿ ನಾವಿರೋದೇ ಹೀಗೆ. ನಮಗೆ ಅತೀ ತಾಳ್ಮೆ. ನಮಗೆ ಕೋಪ ಬರಬೇಕಾದರೆ ಪರಿಸ್ಥಿತಿ ಅತೀ ಪ್ರಕೋಪಕ್ಕೆ ಹೋಗಬೇಕು, ಅಲ್ಪ ಸ್ವಲ್ಪದರಲ್ಲಾದರೆ ನಾವು ಹೋಗ್ಲಿ ಬಿಡಿ ಅನ್ನುತ್ತಾ ಹೊಂದಿಕೊಂಡು ಹೋಗಿಬಿಡುತ್ತೇವೆ. ನಾವು ಸೆಡ್ಡು ಹೊಡೆದು ಎದ್ದು ನಿಲ್ಲಬೇಕಾದರೆ ಒಬ್ಬ ಚಡ್ಡಿ 'ತಾಳಿಕಟ್ಟಿ ಇಲ್ಲ ರಾಖಿಕಟ್ಟಿ' ಅಂತ ದಬ್ಬಾಳಿಕೆ ಮಾಡ ಬೇಕಾಯಿತು. ಆದರೆ ಪಿಂಕು ಚಡ್ಡಿಯ ಮುಂದೆ ಖಾಕಿ ಚಡ್ಡಿ ಎಷ್ಟು ಮಂಕಾಗಿಬಿಟ್ಟಿತು!

'ದೇವಿ' ಪದ್ಯ ಬರೆದು ಓದಿದಾಗ ಗೆಳತಿಯೊಬ್ಬರು "... ಹೆಣ್ಣುಗಳೆಲ್ಲ ದೇವಿಯರೇ ಸರಿ, ದೇವಿಗೆ ಯಾವ ತಡೆಯೂ ಇಲ್ಲ ಸರಿ, ಆದರೆ ಪಬ್ಬಿಗೆ ಹೋಗುವ ಆ ಹೆಣ್ಣುಗಳಿಗೆ ಅದು ಗೊತ್ತೇ?" ಅಂದರು.

ಯಾಕೆ ಗೊತ್ತಾಗಬೇಕು? ಎಲ್ಲವನ್ನೂ ಪ್ರಜ್ಞಾಪೂರ್ವಕವಾಗಿಯೇ ಮಾಡಬೇಕು, ಆಗಲೇ ಅದಕ್ಕೆ ತಾತ್ವಿಕ, ಸೈದ್ಧಾಂತಿಕ ಚೌಕಟ್ಟು ಒದಗುವುದು ಅನ್ನುವುದೆಲ್ಲ ಹೆಣ್ಣಿನ ವಿಷಯಕ್ಕೆ ಬಂದಾಗ 'ವರ್ಕ್ ಔಟ್' ಆಗುವುದಿಲ್ಲ. ಯಾಕೆಂದರೆ ಶತಮಾನಗಳಿಂದಲೂ ಅಂತಹ ತಾತ್ವಿಕ ಸಿದ್ಧಾಂತದ ಚೌಕಟ್ಟಿನೊಳಗೇ ಇದ್ದರೂ ಅದು ಸರಾಸರಿ ಲೆಕ್ಕದಲ್ಲಿ ಹೆಣ್ಣಿಗೆ ಅಂತಹ ಬಿಡುಗಡೆಯನ್ನೇನೂ ಕೊಟ್ಟಿಲ್ಲ. ಹಾಗಾಗಿ ಯಾವುದು 'ವರ್ಕಬಲ್' ಉಪಾಯವೋ ಅದನ್ನೇ ಹೆಚ್ಚಿನ ಹೆಣ್ಣುಗಳು

ಅವಲಂಬಿಸುತ್ತಾರೆ. ಅವರಿಗೆ ನಾನು ಮೀರಾ, ಅಕ್ಕಮಹಾದೇವಿ ಇತ್ಯಾದಿ ಇತ್ಯಾದಿ ಉದಾಹರಣೆಗಳನ್ನು ಕೊಟ್ಟರೆ, ಮತ್ತೆ ಅದೇ ಮಹಾಸತಿಯರ ದೃಷ್ಟಾಂತಗಳನ್ನು ನೀಡಿ ಹಾಗಿರು ಎಂದು ಅಪ್ಪಣೆ ಕೊಡಿಸಿದವರಿಗಿಂತ ಬಹಳ ಭಿನ್ನವಾಗೇನೂ ಕಾಣುವುದಿಲ್ಲ. ಅದಕ್ಕೇ ನನಗೆ ಯಾವಾಗಲೂ ಹೆಣ್ಣುಗಳು ವ್ಯವಸ್ಥೆಯನ್ನು ಮುರಿದರೆ ಆಗುವಷ್ಟೇ ಸಂತೋಷ ಅದರೊಳಗೇ ಇದ್ದೂ ಒಳಗೊಳಗೇ ತನ್ನ 'ಸ್ಪೇಸ್'ನ ಸಾಧಿಸಿಕೊಳ್ಳುವಂತಹವರಿಂದಲೂ ಆಗುತ್ತದೆ. ಅದು ಕಡಿಮೆ ಸಾಧನೆಯೇನಲ್ಲ. ಅಲ್ಲದೆ ಅದು ಅವರ ದೌರ್ಬಲ್ಯವೂ ಅಲ್ಲ. ಅದು ಅವರ ವಿಚಿತ್ರ ಶಕ್ತಿ. ಇದನ್ನು ನಾವು ದಿನನಿತ್ಯದ ಬದುಕಿನಲ್ಲಿಯೇ ಕಾಣಬಹುದು. ಅದಕ್ಕೇ ಹೆಣ್ಣುಗಳ ಸಾಧನೆಯನ್ನು ಗಂಡುಗಳ ಸಾಧನೆ ಅಳೆಯುವ ಹಾಗೆ ಅಳೆಯಬೇಡಿ, ಅದಕ್ಕೆ ಬೇರೆಯೇ ಮಾನದಂಡ ಬೇಕು ಅನ್ನುವುದು. ನಾವು ದಾಪುಗಾಲಿನಲ್ಲಿ ಹಾರಿ ಸಾಧನೆಯ ಮೈಲಿಗಲ್ಲು ತೋರಿಸಬೇಕಿಲ್ಲ. ಸಣ್ಣ ಸಣ್ಣ ಹೆಜ್ಜೆಗಳಲ್ಲಿ ಇಂಚಿಂಚೇ ಕ್ರಮಿಸುವ ಹಾದಿ ಗಂಡುಗಳ ಮೈಲಿಗಲ್ಲುಗಳಿಗೆ ಸಮಗಟ್ಟುತ್ತವೆ.

ಒಂದು ಸಣ್ಣ ಉದಾಹರಣೆ: ಕೂಡ್ಲಗಿಯಲ್ಲಿ ಒಂದು ಗ್ರಾಮೀಣ ಮಹಿಳೆಯರ ಅಧಿವೇಶನಕ್ಕೆ ಹೋಗಿದ್ದೆ. ಅಲ್ಲಿ ಮಹಿಳಾ ಸಮಾಖ್ಯಾದವರು 'ಚಹಾ ಪ್ರಸಂಗ' ಅನ್ನುವ ಕಿರು ನಾಟಕ ಆಡಿದರು. ಅದು, ಒಂದು ಹಳ್ಳಿಯಲ್ಲಿ ಮೀಸಲಾತಿಯಿಂದಾಗಿ ಪಂಚಾಯತ್ ಚುನಾವಣೆಗೆ ದಲಿತ ಮಹಿಳೆಯೊಬ್ಬರು ನಿಂತು ಗೆದ್ದು ಬಂದಿದ್ದರು. ಪಂಚಾಯತ್ ಸಭೆ ಸೇರಿದಾಗ ಅವರು ಆಕೆ ದಲಿತಳಾದ್ದರಿಂದ ಕೊಠಡಿಯ ಒಳಗೆ ಬರಬಾರದು, ಕಿಟಕಿಯ ಹೊರಗೇ ಕೂತು ಅಲ್ಲಿಂದಲೇ ಸಭೆ ನಡೆಸಲಿ ಅಂತ ಹೇಳಿದರು. ಆಕೆಯೇ ಅಧ್ಯಕ್ಷಳಾದ್ದರಿಂದ ಆಕೆ ಸಭೆಯಲ್ಲಿ ಇರುವುದು ಅನಿವಾರ್ಯವಾಗಿತ್ತು. ಆದರೆ ಆಕೆಯನ್ನೇ ಒಳ ಸೇರಿಸಲು ಅವರು ತಯಾರಿರಲಿಲ್ಲ. ಆಕೆ ಮೊದಲು ನಾನು ಒಳಗೆ ಕೂರುವ ಏರ್ಪಾಟು ಮಾಡಿ, ಆಮೇಲೆ ಸಭೆ ಅಂದಳು. ಅನಿವಾರ್ಯವಾಗಿ ಸಾಕಷ್ಟು ಜಗಳಗಳಾದ ಮೇಲೆ ಆಕೆಯನ್ನು ಒಳಗೆ ಕೂರಲು ಅನುಮತಿಸಿದರು. ಆಮೇಲೆ ಎಲ್ಲರಿಗೂ ಚಹಾ ಕೊಟ್ಟರೂ ಅವಳಿಗೆ ಕೊಡುತ್ತಿರಲಿಲ್ಲ. ಆಕೆ ಮೊದಲು ನನಗೂ ಚಹಾ ಕೊಡಿ ನಂತರ ಸಭೆ ಮಾಡೋಣಾ ಅಂದಳು. ಅದಕ್ಕೂ ಸಾಕಷ್ಟು ಗಲಾಟೆಯಾಗಿ ಕೊನೆಗೆ ಚಹಾ ಕೊಡುವವರೆಗೂ ಆಕೆ ಬಿಡಲಿಲ್ಲ. ನಂತರ ಆಕೆ ಇಡೀ ಹಳ್ಳಿಯ ಹೆಂಗಸರನ್ನು ಒಟ್ಟು ಮಾಡಿ ಇಡೀ ಹಳ್ಳಿಯಲ್ಲಿ ದಲಿತರಿಗೆ ಚಹಾ ಕೊಡಲು ಹೊರಗೆ ಬುಟ್ಟಿಯಲ್ಲಿ ಗ್ಲಾಸ್ ನೇತು ಹಾಕುವ 'ಸಂಪ್ರದಾಯ'ವನ್ನು ಮುರಿದಳು. ಅದು ಅವಳ ಸಾಧನೆ. ಇದನ್ನು ಚರಿತ್ರೆಕಾರರು ಅದೇನೂ ಅಂತಹ ಮಹಾ ಸಾಧನೆಯಲ್ಲ ಅಂತ ದಾಖಲಿಸ ಲಿಲ್ಲ, ದಾಖಲಿಸುವುದೂ ಇಲ್ಲ. ಅವಳ ಅಧಿಕಾರಾವಧಿಯಲ್ಲಿ ಆಕೆ ಉಳಿದ ಪಂಚಾಯತ್ ಅಧ್ಯಕ್ಷರುಗಳಿಗೆ ಹೋಲಿಸಿದರೆ ಬೇರೆ ಏನೂ ಮಾಡಲಿಲ್ಲ ಅಂತ ತೆಗೆದು ಹಾಕುವುದು ವಾಡಿಕೆ. ಆದರೆ ಅದು ಸಾಮಾನ್ಯ ಸಾಧನೆ ಅಲ್ಲ. ಅದೇ ಮಹಿಳೆಯರಿಗೆ ಮಹಾನ್ ಸಾಧನೆ. ಅದು ದೇಶದ ಉಳಿದ ಯಾವುದೇ ಮಹಿಳೆಯರು ಮಾಡಿದ ಸಾಧನೆಗಿಂತ ಕಡಿಮೆ ಅಲ್ಲ. ಅದನ್ನು ಗುರುತಿಸಿದರೆ ಸಾಕು.

ನಿನ್ನೆ ರಾಜಸ್ಥಾನದ ಒಬ್ಬಳು ಹದಿನಾಲ್ಕು ವರ್ಷದ ಹುಡುಗಿ ತನ್ನನ್ನು ನಲವತ್ತು ವರ್ಷದ ವಿಕಲಾಂಗನಿಗೆ ಮದುವೆ ಮಾಡಿಕೊಳ್ಳಲು / ಮಾರಲು ಇಡೀ ಹಳ್ಳಿಯೇ ಎದ್ದು ನಿಂತಿದೆ ಅಂದಾಗ ಜೋಧಪುರದ ಒಬ್ಬರು ಮಹಿಳಾ ಅಭಿವೃದ್ಧಿ ಇಲಾಖೆಯ ಅಧಿಕಾರಿಗೆ ಬರೇ ಫೋನ್ ಮಾಡುತ್ತಾಳೆಂದರೆ ಅದು ಶೌರ್ಯಪ್ರಶಸ್ತಿ ಯೋಗ್ಯ ಕೃತ್ಯವೇ, ಅನುಮಾನವಿಲ್ಲ. ಅದೇ ಶಕ್ತಿ. ಅಲ್ಲೇ ದೇವಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಸ್ವರೂಪಿಣಿಯಾಗಿ ಪ್ರಕಟಗೊಳ್ಳುತ್ತಾಳೆ. ಅದೇನೂ ದೊಡ್ಡ ತಾಂತ್ರಿಕ ಸಾಧನೆಯ ಪರಾಕಾಷ್ಠೆಯಾಗಬೇಕಾಗಿಲ್ಲ, ಅಥವಾ ಅದೇ ಆ ಕಾಲಘಟ್ಟದ ಸಾಧನೆಯ ಪರಾಕಾಷ್ಠೆ ಅಂದರೂ ತಪ್ಪೇನಿದೆ?

['ಮಿರ್ಚ್ ಮಸಾಲಾ' ಚಿತ್ರದಲ್ಲಿ ಹೆಂಗಸರನ್ನೆಲ್ಲ ಒಂದು ವಾಡೆಯೊಳಗೆ ಕೂಡಿಹಾಕಿ ಅವರನ್ನು ಹೊರಬರದಂತೆ ಮಾಡಿ ತನ್ನ ತೀಟೆ ತೀರಿಸಿಕೊಳ್ಳಲು



ಮುಂದಾದ ದುಷ್ಟ ಬ್ರಿಟಿಷ್ ಅಧಿಕಾರಿಯನ್ನು ಸೋಲಿಸಲು ಆ ಹೆಂಗಸರು ಮೆಣಸಿನ ಪುಡಿಯನ್ನೇ ಬಳಸಿದ್ದು ಅವರ ಫಿರಂಗಿಗಳಿಗಿಂತ ಶಕ್ತಿಶಾಲಿ ಯಾಯಿತು. ತೊಟ್ಟಿಲು ತೂಗುವ ಕೈಗಳಿಗೆ ಗನ್ನು ಬಂದರೇನೇ ಶಕ್ತಿ ಬಂದಂತಲ್ಲ, ತೊಟ್ಟಿಲ ಹಗ್ಗವೂ ಶತ್ರುವಿನ ಯಮಪಾಶವಾದರೆ ಆಶ್ಚರ್ಯವಿಲ್ಲ.]

ಇಲ್ಲದಿದ್ದರೆ ತಾಳಿಯನ್ನು ಹಿಡಿದುಕೊಂಡು ಜೊತೆಗಿದ್ದ ಹುಡುಗನ ಕೈಲಿ ಕಟ್ಟಿಸುತ್ತೇವೆ ಅಂತ ಹೊರಟ ಹುಚ್ಚ ಮುತಾಲಿಕ ಒಂದು ಪಿಂಕ್ ಚಡ್ಡಿಗೆ ಹೆದರುತ್ತಿದ್ದನೇ? ಬೆದರಿಕೆಯನ್ನು ಹಿಂತೆಗೆದು ಕೊಳ್ಳುತ್ತಿದ್ದನೇ? ಉಳಿದ ನೂರೆಂಟು ಸಂಘ ಸಂಸ್ಥೆಗಳೂ ಸಹ ವಿರೋಧಿಸಿದರೂ ಅವರ ಪ್ರತಿಕ್ರಿಯೆಗೂ ನಿಶಾ ಸೂಸನ್ ಪ್ರತಿಕ್ರಿಯೆಗೂ ಇರುವ ವ್ಯತ್ಯಾಸವೇ ಸಾಧಿಸಿಬಿಟ್ಟಿತು, ನಾವೇ ಬೇರೆ, ನಮ್ಮ ದಾರಿಯೇ ಬೇರೆ. ನಾವೂ ಇತರರ ಹಾಗೆ ಎಕೆ47 ಹಿಡಿದೇ ಹೋರಾಡಿದರೆ ಮಾತ್ರ ಅದು ಕ್ರಾಂತಿ ಅನ್ನಿಸಿಕೊಳ್ಳುತ್ತದೆ ಅನ್ನುವ ಭ್ರಮೆ ಇಟ್ಟುಕೊಳ್ಳ ಬಾರದು. ಒಂದು ಹುಲ್ಲುಗರಿಕೆಯನ್ನು ಅಡ್ಡ ಇಟ್ರೂ ಕೂಡಾ ಒಬ್ಬ ರಾವಣನನ್ನು ತಡೆಯಬಹುದು.

ಇದರ ಜೊತೆಗೇ ಹುಟ್ಟಿಕೊಂಡಿತು ಹೆಂಗಸರು ಪಬ್ಬಿಗೆ ಹೋಗಬಹುದೇ ಅನ್ನುವ ಪ್ರಚಂಡ ವಾದ. ಗಂಡಸ್ರು ಪಬ್ಬಿಗೆ ಹೋಗಬಹುದಾದರೆ ಹೆಂಗಸರು ಯಾಕೆ ಬೇಡಾ ಅನ್ನುವ ಪ್ರಶ್ನೆ ಕೇಳಲು ಯಾರಿಗೂ ಇಷ್ಟವಿಲ್ಲ. ಯಾಕೆಂದರೆ ಭೋಗ ಸಂಸ್ಕೃತಿಯಲ್ಲಿ ಹೆಣ್ಣು ಭೋಗವಸ್ತು ಮಾತ್ರ ಆಗಬಹುದೇ ಹೊರತು ತಾನು ಭೋಗಿ ಆಗಬಾರದು. ಇತರರ ಸಂತೋಷಕ್ಕೆ ಅವಳೊಂದು ಐಟಂ ನಂಬರ್ ಆಗಬಹುದಾದರೆ ಅವಳು ತನ್ನ ಸಂತೋಷಕ್ಕೆ ಅದನ್ನೇ ಮಾಡಿದರೆ ಏನು?

ಇದು ಗೊತ್ತಿಲ್ಲವೆಂದಲ್ಲ, ಪುರುಷರಿಗೂ ಗೊತ್ತು, ಮಹಿಳೆಯರಿಗೂ ಗೊತ್ತು. ಸಾನಿಯಾ ಮಿರ್ಜಾ ಟೆನ್ನಿಸ್ ಆಡುವಾಗಲೂ ಚಿಕ್ಕ ಸ್ಕರ್ಟ್ ತೊಡಬಾರದು ಅನ್ನುವ ವಾದ ಹೂಡುವ ಮೂರ್ಖರೇ ಇರುವಾಗ ಇನ್ನು ಉಳಿದವರ ಪಾಡೇನು, ಹಾಗಂತ ಜಗತ್ತಿನ ಹೆಂಗಸರೇನು ಅಂತಹ ಎಲ್ಲ ಮಾತುಗಳಿಗೂ ಕಟ್ಟು ಬಿದ್ದು ಮೈ ಮುಚ್ಚಿಕೊಂಡಿದ್ದಾರೆಯೇ? ಖಂಡಿತಾ ಇಲ್ಲ. ಪಾಕಿಸ್ತಾನದಲ್ಲಿ ಪುಂಡ ಹುಡುಗರು ಕೆಲವರು ಮೆರವಣಿಗೆ ತೆಗೆದು ಕಲ್ಲು ತೂರಿ ಸಾಮಾನು ಒಡೆದು ಸಿಕ್ಕಾಪಟ್ಟೆ ಗಲಾಟೆ ಮಾಡಿದಾಗ ಅಲ್ಲಿಯ ಗೃಹಮಂತ್ರಿ ಹಾಗೂ ಪೊಲೀಸರು 'ಪಾಪ ಬಿಡಿ, ಚಿಕ್ಕ ಹುಡುಗರು ಮಾಡಿದರು ಅದಕ್ಕೇನು' ಅಂದು ಸುಮ್ಮನಾದರು. ಅದೇ ಮಹಿಳಾ ಲಾಯರುಗಳು ಸಮಾನ ವೇತನಕ್ಕೆ ಒತ್ತಾಯಿಸಿ ಮೌನ ಮೆರವಣಿಗೆ ಹೊರಟಾಗ ಅದೇ ಪೊಲೀಸರು ಅವರ ಮೇಲೆ ಲಾಠಿ ಚಾರ್ಜ್ ಮಾಡಿ



ಹೆಣ್ಣುಮಕ್ಕಳನ್ನು ಬಂಧಿಸಿದರು. ಹಾಗಂತ ಅವರೇನು ಸುಮ್ಮನೇ ಕೂತರೇ? ಅಂತರರಾಷ್ಟ್ರೀಯ ಮಾಧ್ಯಮದಲ್ಲಿ ಸುದ್ದಿ ಮಾಡಿದರು, ಪಾಕಿಸ್ತಾನ ಸರ್ಕಾರ ಎಲ್ಲರಿಂದಲೂ ಛೀಮಾರಿ ಹಾಕಿಸಿಕೊಂಡಿತು. ಅವರನ್ನು ನೇರವಾಗಿ ಹೊಡೆಯಲಾಗದಿದ್ದರೆ ಬುರ್ಖಾದೊಳಗಿಂದ ಚಿವುಟಬಹುದು. ಅದನ್ನೇನೂ ಸಣ್ಣ ವಿಷಯ ಅಂತ ತೆಗೆದುಹಾಕಬೇಕಾಗಿಲ್ಲ.

ನಾವು ಹೋರಾಟದ ದಾರಿಯಲ್ಲಿ ನಮ್ಮ ಸಂಭ್ರಮಗಳನ್ನು ಮರೆತುಬಿಟ್ಟರೆ ಅವರ ಉದ್ದೇಶ ಈಡೇರಿಸಿದಂತೆ. ಅದಕ್ಕೇ ಎಲ್ಲ ಅಡೆತಡೆಗಳ ನಡುವೆಯೂ ನಾವು ನಮ್ಮ ಬಣ್ಣಗಳಲ್ಲಿ, ವೇಷಭೂಷಣಗಳಲ್ಲಿ, ನಮ್ಮನಮ್ಮದೇ ಚಿಕ್ಕ ಚಿಕ್ಕ ರೀತಿಯಲ್ಲಿ ದೊಡ್ಡ ದೊಡ್ಡ ಸಾಮ್ರಾಜ್ಯಗಳನ್ನು ಉರುಳಿಸುತ್ತಲೇ ಇರುತ್ತೇವೆ. ಕಸೂತಿಯ ಸೂಜಿಯಲ್ಲೇ ತುಳಿಯುವ ಕಾಲು ಹೊಲಿಯುತ್ತೇವೆ. ಅದಕ್ಕೇ ನಾವು ನಾವೇ. ನಮ್ಮ ಭಾಷೆ ಬೇರೆಯೇ. ನಮ್ಮ ಗೆಲುವೇ ಬೇರೆ.

## ನನ್ನದೊಂದು ಸಾಲು ಕಾಲನ ದಸ್ತಾವೇಜಿಗೆ....

ಕನ್ನಡ ಕಾವ್ಯದಲ್ಲಿ ಈಚೆಗೆ ಆಗುತ್ತಿರುವ ಬಹಳ ದೊಡ್ಡ ಬದಲಾವಣೆ ಅಂದರೆ ಹೆಚ್ಚು ಹೆಚ್ಚು ಹೆಂಗಸರು ಕಾವ್ಯ ರಚನೆಯಲ್ಲಿ ತೊಡಗಿಕೊಂಡಿರುವುದು. ಕೇವಲ 25 ವರ್ಷಗಳ ಕೆಳಗೆ ಒಬ್ಬಳು ಮಹಿಳೆಯ ಕವನವನ್ನು ಪ್ರಾತಿನಿಧಿಕವಾಗಿಯೂ ತೆಗೆದುಕೊಳ್ಳಲಾಗದೇ "ಅಕ್ಷರ ಹೊಸ ಕಾವ್ಯ"ದಲ್ಲಿ ಕಲ್ಪಿತ ನಳಿನಿ ದೇಶಪಾಂಡೆ ಅನ್ನುವ ಸುಳ್ಳು ಹೆಸರಿನಲ್ಲಿ ಪುರುಷನೊಬ್ಬನೇ ಮಹಿಳಾ ಕಾವ್ಯ ಬರೆದು ಪ್ರಕಟಿಸಿದ್ದು ಬಹಳ ದೊಡ್ಡ ಸುದ್ದಿಯಾಯಿತು. ಕವನ ನಿಜವಾಗಿಯೂ ಚೆನ್ನಾಗಿದೆ. "ತುಂಟ ಹುಡುಗನ ಸೊಂಟಾ ಸುತ್ತಿ ಲ್ಯಾಂಬ್ರೆಟ್ಟ ವೆಸ್ಪಾ ಬೆನ್ನನು ಹತ್ತಿ ಕೀಲುಕುದುರೆ ರಾಜಕುಮಾರಿ ಒಮ್ಮೆಯಾದರೂ ಆದೇನು ನರಕಕ್ಕೂ ಹೋದೇನು" ಅಂತ ಸಡ್ಡು ಹೊಡೆದು ನಿಂತ ಹೆಣ್ಣನ್ನು ದಾಖಲಿಸುವುದರಲ್ಲಿ ಅದು ಅತ್ಯಂತ ಯಶಸ್ವಿಯಾಯಿತು.

ಅದಾಗಿ ಹತ್ತು ವರ್ಷದಲ್ಲಿ ನಾವೆಲ್ಲಾ ಬರೆಯಲು ತೊಡಗಿದೆವು. ಪ್ರೇಮ, ಪ್ರಣಯ, ಮನೆ, ಚಾಕರಿ, ಕುಟುಂಬ ಕ್ರೌರ್ಯ ಹೀಗೇ ಹೆಣ್ಣಿನ ಜಗತ್ತಿನ ಎಲ್ಲಾ ಮಜಲುಗಳನ್ನೂ ಎಗ್ಗಿಲ್ಲದೇ ದಾಖಲಿಸತೊಡಗಿದೆವು.

ಇಪ್ಪತ್ತೈದು ವರ್ಷಗಳಲ್ಲಿ ಕನಿಷ್ಠ ಇನ್ನೂರು ಕವನ ಬರೆಯುವ ಹೆಂಗಸರ ಹೆಸರುಗಳು ಸಿಗುತ್ತವೆಂದರೆ ಅದು ಯಾವ ಬುದ್ಧಿವಂತ ಸಾಹಿತ್ಯ ಚರಿತ್ರಕಾರನೂ ತಳ್ಳಿಹಾಕುವಂಥ ವಿಚಾರವಲ್ಲ.

ಹೆಂಗಸರು ಯಾಕೆ ಕಾವ್ಯವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮ ಮಾಡಿಕೊಂಡರು ಅನ್ನುವುದು ಕುತೂಹಲಕಾರಿ ಅಂಶ. ಇವೆಲ್ಲಕ್ಕಿಂತ ಮೊದಲೇ ತ್ರಿವೇಣಿ, ರಾಜಲಕ್ಷ್ಮಿ ಬರೆಯುವಾಗ ಯಾರನ್ನೂ ಕೇರ್ ಮಾಡಬೇಕಾಗಿಲ್ಲ ಅಂತ ತೋರಿಸಿಕೊಟ್ಟಿದ್ದರು. ಗದ್ಯ ಬರೆಯುವುದು ಪದ್ಯ ಬರೆಯುವುದಕ್ಕಿಂತ ಹೆಚ್ಚು ಸುಲಭ. ಆದರೂ ಮಹಿಳೆಯರು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಎದ್ದರೆ ಕೂತರೆ ಪದ್ಯ ಬರೆದು ಹೇಗಾಗುತ್ತೋ ಹಾಗೆ ಪ್ರಕಟಣೆಯನ್ನೂ ಮಾಡಿಬಿಟ್ಟಿದ್ದಾರೆ. ಹಾಗೆ ಪ್ರಕಟವಾದದ್ದೆಲ್ಲವೂ ಗಟ್ಟಿಯಲ್ಲ, ಜೊಳ್ಳೇ ಹೆಚ್ಚು – ಕಾವ್ಯದ ಪರಿಭಾಷೆಯಲ್ಲಿ ಹೇಳಬೇಕಾದರೆ. ಸಾಹಿತ್ಯ ಮೀಮಾಂಸೆಕಾರರು ಹೆಂಗಸರ ಕವನಗಳನ್ನು ಹೆಸರಿಟ್ಟು ಟೀಕಿಸಿ ಆಡಿಕೊಂಡು ನಕ್ಕು ಬೈದು ಏನೇ ಮಾಡಿರಲಿ ಯಾವುದೂ ಹೆಂಗಸರ ಕವನ ರಚನೆಯ ಹುಚ್ಚನ್ನು ಮೊಟಕುಮಾಡಲಿಲ್ಲ. ಅವರೇನೂ ಅಧೈರ್ಯದಿಂದ ಕುಗ್ಗಿ ಹಿಂಜರಿಯಲಿಲ್ಲ. ಯಾಕೆ?

ಯಾಕೆಂದರೆ ಯಾವ ಮಹಿಳಾ ಕವಿಯೂ ಯಾರನ್ನೋ ಮೆಚ್ಚಿಸಲು ಕವನ ಬರೆಯಲಿಲ್ಲ. ತನ್ನ ಬಗ್ಗೆ ತನಗೇ ಆತ್ಮವಿಶ್ವಾಸ ಹುಟ್ಟಿಸಿಕೊಳ್ಳಲು, ತನ್ನ ಬಗ್ಗೆ ತನಗೇ ಸಾಧನೆಯ ಅವಕಾಶವಿದೆ ಎಂದು ಸಾಬೀತುಪಡಿಸಿಕೊಳ್ಳಲು ಬರೆದರು. ಅದು ಏನಾದರೂ ಆಗಿರಲಿ, ಎಷ್ಟೇ ಕಳಪೆಯಾಗಿರಲಿ ಹೆಂಗಸರು ಅಷ್ಟೊಂದು ಅಧಿಕ ಸಂಖ್ಯೆಯಲ್ಲಿ ತಮ್ಮ ಮನಸ್ಸನ್ನು ಬಿಚ್ಚಿ ಹೇಳಲು ನಿರ್ಧರಿಸಿದ್ದು ಹಾಗೂ ಅದಕ್ಕೆ ಕಾವ್ಯ ಮಾಧ್ಯಮವನ್ನು ಬಳಸಿಕೊಂಡಿದ್ದು ಜಾನಪದ ಹೆಣ್ಣು ಹಾಡುಕಟ್ಟುವುದಕ್ಕೆ ಸಮಾನ. ಇದನ್ನು ಯಾವ ಸಾಹಿತ್ಯ ವಿಮರ್ಶಕನೂ ಗುರುತಿಸಿಲ್ಲ ಮತ್ತು ದಾಖಲಿಸಿಲ್ಲ. ಎಲ್ಲರೂ ಮಹಿಳೆಯೊಬ್ಬಳು ಕವನ ಬರೆಯುತ್ತಾಳೆಂದರೆ ಅದನ್ನು ಅಡಿಗರ ಕವನಕ್ಕೆ ಹೋಲಿಸಿದರು, ಅದರ ಮಾನದಂಡದಲ್ಲಿ ಅಳೆದು ಛೀ ಥೂ ಅಂತ ಪಕ್ಕಕ್ಕಿಟ್ಟುಬಿಟ್ಟರು. ಆದರೆ ಯಾವ ಊರಿಗೆ ಯಾವುದೇ ಸಾಹಿತ್ಯ ಕಾರ್ಯಕ್ರಮಕ್ಕೆ ಹೋದರೂ ಕನಿಷ್ಠ ಮೂರಾದರೂ ಹೆಂಗಸರು ಬಂದು ಚಿಕ್ಕ ಕವನ ಸಂಕಲನವನ್ನು "ಗೌರವಪೂರ್ವಕವಾಗಿ" ಅಂತ ಬರೆದು ಸಹಿ ಹಾಕಿ ಕೊಡುವುದು ನನಗೊಂದು ರೀತಿಯ ಫ್ಯಾಸಿನೇಷನ್. ಯಾಕೆಂದರೆ ಹಾಗೆ ಪುಸ್ತಕ ಕೊಡುವಾಗ ಅವರ ಮುಖದಲ್ಲಿ ತಾವೇನೋ ದೊಡ್ಡ ಸಾಧನೆ ಮಾಡಿದ ಮುಗುಳ್ನಗೆಯಿರುತ್ತದೆ. ಅದಕ್ಕೆ ಅವರ ಗಂಡ, ಅಪ್ಪ, ಅಮ್ಮ ಕಾರಣರಾಗಿರುವುದಿಲ್ಲ. ಅದು ಎಷ್ಟೇ ಚಿಕ್ಕದಾಗಿದ್ದರೂ ಸರಿ ಅವರದೇ ಯಶಸ್ಸಿನ ಗಳಿಗೆ. ಅದು ದೊಡ್ಡ ಆಸ್ಕರ್ ತೆಗೆದುಕೊಳ್ಳುವಾಗಿನ ಸಂಭ್ರಮಕ್ಕಿಂತ ಕಡಿಮೆಯೇನೂ ಆಗಿರುವುದಿಲ್ಲ. ಹಾಗೇ ವಾಪಸ್ಸಾಗುವಾಗ ನಾನು ಬಸ್ಸಿನಲ್ಲೇ ಆ ಪುಸ್ತಕವನ್ನು ತಿರುವಿ ಹಾಕುತ್ತೀನಿ. ಹೆಚ್ಚಿನವು ಯಾವುದೋ ಶೈಲಿಯ ಅನುಕರಣೆಯೋ, ಕೆಟ್ಟ ಪ್ರಯತ್ನವೋ ಆಗಿರುತ್ತವೆ. ಆದರೆ ಅದು ಆ ಹೆಂಗಸಿನ ಅಭಿವ್ಯಕ್ತಿಯ ಅತ್ಯಂತ ಪ್ರಾಮಾಣಿಕ ಪ್ರಯತ್ನವಾಗಿರುತ್ತದೆ. ಅದನ್ನು ನಾನು ಜಡ್ಜ್ ಮಾಡಬಾರದು ಅನ್ನಿಸುತ್ತದೆ. ಯಾಕೆಂದರೆ ಎಲ್ಲ ಕಾಲದಲ್ಲೂ ಜಾನಪದ ಕಲಾವಿದೆಯರು ಸಾವಿರಾರಿದ್ದರು. ಅವರ ರಚನೆಯಲ್ಲಿ ಕೆಲವು ಮಾತ್ರ ಇಂದಿಗೂ ಬದುಕಿವೆ. ಉಳಿದವು ಕಾಲನ ಸುಳಿಯಲ್ಲಿ ಕೊಚ್ಚಿಹೋಗಿವೆ. ಆ ಕೊಚ್ಚಿಹೋದವು ಆಯಾ ಕಾಲದ ಹೆಂಗಸರ ಅಭಿವ್ಯಕ್ತಿಯಾಗಿದ್ದು ಸುಳ್ಳೇ? "ಹಚ್ಚಡದ ಪದರಾಗ ಅಚ್ಚ ಮಲ್ಲಿಗಿ ಹೂವ ಬಿಚ್ಚಿ ನನ ಮ್ಯಾಲ ಒಗೆವಂಥ ರಾಯನ ಬಿಟ್ಯಾಂಗ ಬರಲೇ ಹಡದವ್ವ?" ಅನ್ನುವ ಸಾಲನ್ನು ಕೇವಲ ಕಾವ್ಯಾಭಿವ್ಯಕ್ತಿಯಾಗಿಯೋ ಅಥವಾ ಕೇವಲ ಫೆಮಿನಿಸಂ ದೃಷ್ಟಿಯಿಂದ ಮಾತ್ರವೋ ಅಥವಾ ಎರಡನ್ನೂ ಬಿಟ್ಟು ಕೇವಲ ಸೈಕಿಯಾಟ್ರಿಸ್ಟ್ ದೃಷ್ಟಿಯಿಂದಲೋ ನೋಡಿ ಥರಥರದ ವ್ಯಾಖ್ಯಾನ ಕೊಟ್ಟು ತಮತಮಗೆ ಬೇಕಾದ ತೀರ್ಮಾನಗಳನ್ನು ಕೊಟ್ಟರೆ ಅದು ಆ ಕ್ಷಣದ ಅತ್ಯಂತ ಉತ್ಕಟ ಲೈಂಗಿಕ ಅಭಿವ್ಯಕ್ತಿಯನ್ನು ಅತ್ಯಂತ ಸುಂದರವಾಗಿ ಹೇಳಿದ ಹೆಣ್ಣಿಗೆ ಅಪಚಾರ ಮಾಡಿದ ಹಾಗೆ.

ಈಚಿನ ಹತ್ತು ವರ್ಷಗಳಲ್ಲಿ ಹೆಂಗಸರು ಕಾವ್ಯಾಭಿವ್ಯಕ್ತಿಯನ್ನು ಅದೇ ತೀವ್ರತೆಯಲ್ಲಿ ದಾಖಲಿಸುತ್ತಿದ್ದಾರೆ. ಅದರ ವೈಚಾರಿಕ ಗುಣಾವಗುಣಗಳ ಬಗ್ಗೆ ನನಗೆ ಯಾವತ್ತಿಗೂ ಗಮನವಿಲ್ಲ. ಯಾರೂ ಪಿಎಚ್.ಡಿ. ಪಡೆಯಲು ಕವನ ಬರೆಯುವುದಿಲ್ಲ. ನನ್ನದೊಂದು ಸಾಲು ಕಾಲನ ದಸ್ತಾವೇಜಿನಲ್ಲಿ ದಾಖಲೆಯಾಗಲಿ ಅನ್ನುವ ಹುಮ್ಮಸ್ಸು ಮಾತ್ರ ಅವರಿಗಿರುತ್ತದೆ. ಅದು ಪ್ರತಿ ಬರಹಗಾರರಿಗಿರುವ ಹಕ್ಕಿನ ನಿರೀಕ್ಷೆ. ತರತಮಗಳ ಹೋಲಿಕೆಯ ಕಷ್ಟಗಳೆಲ್ಲ ಉಳಿದವರಿಗೆ.

ನನಗೆ ಆಶ್ಚರ್ಯವಾಗುವುದು ಭಾಷೆಯನ್ನು / ಕಾವ್ಯವನ್ನು ಅಭಿವ್ಯಕ್ತಿ ಮಾಧ್ಯಮ ಮಾಡಿಕೊಳ್ಳುವಲ್ಲಿ ತಡವಾಗಿಯಾದರೂ ಮಹಿಳೆಯರು ಯಶಸ್ವಿಯಾದರಲ್ಲಾ ಅನ್ನುವುದು. ಮೊನ್ನೆ ತುಮಕೂರಿನಲ್ಲಿ ನಡೆದ ಸುಗಮ ಸಂಗೀತ ಸಮ್ಮೇಳನದಲ್ಲಿ ನಡೆದ ಕವಿ ಗೋಷ್ಠಿಯಲ್ಲಿ ಅಧ್ಯಕ್ಷತೆ ಎಚ್.ಎಸ್. ವೆಂಕಟೇಶ ಮೂರ್ತಿಯವರದು. ನಾವು ನಾಲ್ವರು ಮಹಿಳೆಯರು. ಇನ್ನೊಬ್ಬರು ಮಾತ್ರ ಪುರುಷ ಕವಿ ಇದ್ದೆವು. ನಾನು ಅಂದುಕೊಂಡೆ ಒಂದು ಕಾಲದಲ್ಲಿ ಬರೀ ಪುರುಷರೇ ಇದ್ದು ಹೆಸರಿಗೆ ಮಾತ್ರ ಒಂದೋ ಎರಡೋ ಹೆಂಗಸರನ್ನು ಕರೆಯುತ್ತಿದ್ದುದಕ್ಕೆ ಇದು ಕಾಲವೇ ಕಲಿಸಿದ ಪಾಠ ಅಂತ. ಆದರೆ ಗೋಷ್ಠಿಯಲ್ಲಿ ಲಲಿತಾ ಸಿದ್ಧಬಸವಯ್ಯ ಒಂದು ಪ್ರಶ್ನೆ ಎತ್ತಿದರು. "ನಿನ್ನೆಯಿಂದ ಇಲ್ಲಿ ಬೇಕಾದಷ್ಟು ಹಾಡುಗಳನ್ನು ಹಾಡಿದ್ರಿ, ಆದರೆ ಒಬ್ಬಳೇ ಒಬ್ಬಳು ಮಹಿಳೆಯ ಕವನವನ್ನು ನೀವು ಹಾಡಲಿಲ್ಲ" ಅಂತ. ನಾನು ಅವರಿಗೆ ನಂತರ ಹೇಳಿದೆ "ಯಾಕೆಂದರೆ, ಅವರು ಕಾಲಕ್ಕೆ ತಕ್ಕ ಹೆಜ್ಜೆ ಹಾಕಿಲ್ಲ, ಅವರು ಬಹಳ ಹಿಂದಿದ್ದಾರೆ, ಅವರು ಮಹಿಳೆಯ ಕಾವ್ಯಾಭಿವ್ಯಕ್ತಿಯನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ. ಇಲ್ಲದಿದ್ದರೆ ಅವರು ಹಾಡಿದ ಎಷ್ಟೋ ಹಾಡುಗಳಿಗಿಂತ ಸಾವಿರ ಪಾಲು ಚೆನ್ನಾಗಿರುವ ಹಾಡುಗಳನ್ನು ಮಹಿಳೆಯರು ಬರೆದಿದ್ದಾರೆ, ಅದನ್ನು ಗುರ್ತಿಸುವಷ್ಟು "ಪ್ರಬುದ್ಧತೆ"ಯನ್ನು ಅವರಿನ್ನೂ ಬೆಳೆಸಿಕೊಂಡಿಲ್ಲಾ" ಅಂತ.

ಹಾಗಂತ ಮಹಿಳೆಯರು ಬರೆಯುವುದನ್ನು ಬಿಡುತ್ತಾರೆಯೇ? ಖಂಡಿತಾ ಇಲ್ಲ. ಮುಂದೆ ಅವರು ನಮ್ಮ ಹಾಡುಗಳನ್ನೂ ಹಾಡಲೇ ಬೇಕು. ಅವರಿಗೆ ಬೇರೆ ದಾರಿಯಿಲ್ಲ. ಪ್ರಸ್ತುತ ಕಾವ್ಯ ಸಂದರ್ಭ ಕುರಿತು ಮಾತಾಡಬೇಕಾದರೆ ಅವರು ನಮ್ಮನ್ನು ಬಿಟ್ಟು ಮಾತಾಡುವಂತೆಯೇ ಇಲ್ಲ. ಅದು ನಮ್ಮ ಟ್ರಂಪ್ ಕಾರ್ಡ್. ❑



# ಪಂಕ್ತಿ ಭೇದ

● ಲಲಿತಾ ಸಿದ್ದಬಸವಯ್ಯ



–1–

**ಹೆ**ಸರಿಗೆ ಬರಗೆಟ್ಟ ಹಾಗೆ ಊರತುಂಬ ಒಪ್ಪೆಸರು ತುಂಬಿಕೊಂಡರೆ
ಜನ ತಾನೆ ಏನು ಮಾಡಬಹುದು ಹೇಳಿ
ಅಡ್ಡ ಹೆಸರಿಗೆ ಜೋತುಬೀಳುವುದು ಬಿಟ್ಟು

ಹಾಗೇ ಆಯಿತು
ಹತ್ತಿಪೇಟೆ ಪಾರಕ್ಕ
ಸೀಗೆಮೆಳೆ ಪಾರಕ್ಕ
ಅಯ್ನೋರ್ ಮನೆ ಪಾರಕ್ಕ
ಕೈ ಮದ್ದಿಕ್ಕೋ ಪಾರಕ್ಕ
ಪಾರಕ್ಕ ಪಾರಕ್ಕ ಬಿಳಿಪಾರಕ್ಕ
ಪಾರಕ್ಕ ಪಾರಕ್ಕ ಕರಿಪಾರಕ್ಕ

ಅದೆಷ್ಟೆ ಚಾಲ್ತಿಗೆ ಬದ್ದು ಚಿಪ್ಪಾಗಿರಲಿ
ಅನ್ವಯಾರ್ಥಗಳ ಊರಿಗೂರೇ ಮರೆತಿರಲಿ
ಕರೆಸಿಕೊಳ್ಳುವವರಿಗೆ ಅಡ್ಡ ಹೆಸರೆಂಬುದು ಹೆಕ್ಕಳು ಕಟ್ಟಿದ ಬರೆಯೇ ಸರಿ
ಕರಿಪಾರಕ್ಕನನು ಹಾಗೆಂದು ಊರಜನ ಕರೆದಾಗೆಲ್ಲ
ಹೆದೆತುಳಿಸಿಕೊಂಡ ಕನ್ನಡಿಹಾವೊಂದು ಅಂತರಾಳದಲ್ಲಿ ಘೂತ್ಕರಿಸಿ
ಕಪ್ಪುಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳುವುದಕ್ಕೇ ಹೇಸಿ
ಕುಂಕುಮ ಬೊಟ್ಟಿಗೆ ಮೂಗಿನ ಕಂಭ
ದ ಮೇಲಿಂದ ಹೆಬ್ಬೆಟ್ಟಿನ ಅಳತೆ ಗುರ್ತಿಟ್ಟು
ಹೆಪ್ಪಿಟ್ಟ ಹಾಲಂತೆ ಒಳಗೊಳಗೇ ಹುಳಿಯಾಗಿಬಿಟ್ಟು
ಬಿಳಿಪಾರಕ್ಕ ಲೋಕರೂಢಿ ಎದುರು ಬಂದರೂ
ಮುಖವಾರೆಗಿಟ್ಟು ಆ ರೋಡನ್ನೇ ಬಿಟ್ಟು ಬಿಡುವಳು



-2-

ಎರಡು ಸುಣಗಾಯಿಡಬ್ಬಿಗಳ ಬುಡ ಚೂಪು ಮಾಡಿ
ನಡು ಬೆಸೆದಂತ ಬುಡುಬುಡಕೆ, ಕಪ್ಪೆಳ್ಳು ಬಿಳಿಯೆಳ್ಳೇಕಗೊಂಡ ಗಡ್ಡಮೀಸೆ
ಭಸ್ಮದ ಗುಡ್ಡ, ಅಡ್ಡ ಕುಂಕುಮ, ಗೆಡ್ಡಗಣ್ಣುಗಳ ಮುಂದಿಟ್ಟು ಬಂದ
ಊರಿಗೊಬ್ಬ ಕಣ್ಕಟ್ಟಿನವನು ಬಂದ



ಬಂದವನು ಖಥ ಖಥ ಖಥ ಊರ ಕಿವಿ ಕಡೆಯುತ್ತ
ಅಲ್ಲಲ್ಲಿ ಚಿಲ್ಲರೆ ಕೈಚಳಕಗಳ ದೇಖಾವೆ ನೀಡುತ್ತ
ಮಟ ಮಟ ಮಧ್ಯಾಹ್ನ ಕರೆಪಾರಕ್ಕನ ಮನೆ ಮುಂದು
ಗುಡು ಗುಡು ಗುಡುಗೊಂಡ ಕೂಡಲೆ ಸಿಡ ಸಿಡ ಸಿಡ
ಬಂದ ಅವಳು  ಲೊಡ ಲೊಡ ಅಂದ್ರೆ ನೋಡು ತಲೆಬುಲ್ಡೆ
ಒಡೆದೆರಡೊಪ್ಪು ಮಾಡೇನು ನಿಂತ್ಕಳಯ್ಯ ಸುವ್ನೆ
ಇವ್ರೊತ್ತು ನಂಗೈತೆ ನಿಂಗೈತೆ ಒಳಗ್ ಮಗ ಮಲಗೈತೆ
ವಗೈರೆ ವಿಥವಿಥವಾಗಿ ಗಂಟಲ ಗುದ್ದಲಿಯಿಂದ ಅವನ ಮುಖ ಕೆತ್ತಲು

ದಿನಕ್ಕೇಳುಕೆರೆ ನೀರುಕುಡಿದು ಹದಿನಾಲ್ಕು ಗರಡಿಮಟ್ಟಿನಲಿ ಧೂಳಾಗುವ ಅವನು
ನಿನ್ನಂಥ ಪುಳ್ಳೆಗಳು ನನ್ನ ಬೆರಳಸಂದಿಯಲದೆಷ್ಟು ಹೋದುವ್ರೋ
ಎಂಬ ಖಡಕ್ಕಿನಲಿ ಉತ್ತರ ಕೊಟ್ಟ;  ಅನ್ನ ಉಣ್ಣುವ ಹೊತ್ತಲ್ಲಿ
ಅನ್ನ ಉಣ್ಣುವ ಬಾಯಲ್ಲಿ ಮಣ್ಣಾಗೊ ಮತಾಡ್ತೀಯ ಹೆಣ್ಣೆಂಗ್ಸು
ಹುಷಾರು ಉಕದೋಗ್ತೀಯಾ

ಬಗ್ಗುವಳೆ ಅವಳು, ಸದಾ ಬುಸುಗುಡುವ ಹಾವ ಒಳಗೆ ಸಾಕಿಕೊಂಡವಳು
ಕಕ್ಕನೆ ಅಂದಳು  ಓಗ್ತರೆ ಓಗ್ತರೆ ಉರಿದೋಗ್ತರೆ ಅಹಹಹಹಾ
ಸುಬೇದಾರ ನೋಡು ನೀನು, ನೀನೇಳಿದಂಗೆ ನಡೀತದೆ ಧರೆಯಾದ ಧರೆ
ಭಿಕ್ಷಕ್ ಬಂದೋನ್ಗೆ ಎಷ್ಟಯ್ಯ ನಾಲ್ಗೆ

ಅವನೂ ಬಗ್ಗಲಿಲ್ಲ  ತುಂಬಿದೂರು ತುಂಬಿದ ಮನೆಮುಂದೆ ತಾಚ್ಚಾರದ ಮಾತಾಡ್ತೀಯ
ಹನ್ನೆರಡು ಮಳೆ ಹುಯ್ದರೂ ಆರಲ್ಲ ಮುದ್ದಿನ ಕಂಬವಾಗಿ ಸಿಡಿತೀಯ

ಶಿರರೇಗಿದ ಅವಳು ಕೈಬಾಯಿ ತಿರುವುತ್ತ,  ಸಿಡಿತರೆ ಸಿಡಿತರೆ ಮದ್ದಿನಕಂಬವಾಗಿ ಸಿಡಿತರೆ
ನೀನೇಳಿದಂಗೆ ಆಗಂಗಿದ್ರೆ ನಿನ್ನಂಥ ತಿರುಬೋಕಿನೂ ದ್ವಾರಕಾಪಟ್ನದ ದೊರೆ
ಅಂತಾ ತಾಕತ್ತಿರಂಗಿದ್ರೆ ನೋಡಾನ ಬೆಳ್ಳಗ್ ಮಾಡು ಈ ನನ್ ಕರಿಮೋರೆ

-3-

ಆಮೇಲೆಷ್ಟೋ ಮಾಸಗಳಾದ ಮೇಲೊಂದು ದಿವಸ
ತನ್ನೆಡಗಾಲು ಕವಗೋಲ ಮೇಲಿಟ್ಟುಕೊಂಡು
ಬಲಗಾಲ ಈಚೆಗೆಳೆದ ಕೊಳ್ಳಿ ಬುಡಕೂರಿಕೊಂಡು
ದೊಡ್ಡೊಲೆಯ ಮೇಲೆ ದೇಹವರ್ಧ ಬಾಗಿಕೊಂಡು
ಒಂದು ಒಬ್ಬೆಗೆ ಮುವತ್ತು ಮುದ್ದೆ ಬೇಯುವಂಥ
ಅವರತ್ತೆ ಕಾಲದ ತಪ್ಪಲೆಯಲ್ಲಿ ಹಿಟ್ಟುಕುದಿಗೂಡಿಸುತ್ತ
ಎದುರು ಕೋಲೆತ್ತಿ ಎತ್ತಿ ಹಿಟ್ಟದೆಬ್ಬೆಯಲಿ ಗಂಟೊಡೆಯುತ್ತ
ಕರೆಪಾರಕ್ಕ ಸಂಭ್ರಮಿಸಿರಲು ಆಸರೆ ತಪ್ಪಿ ಮುಗ್ಗರಿಸಿದಳು
ನಿಗಿ ನಿಗಿ ಕೆಂಡ ಸೂರ್ಯನ ಹೊಂಡ ಮುಖವದುಮಿ ಬಿದ್ದಳು
ಶಿವ ಶಿವಾ ಎಲ್ಲಿದ್ದೀಯೋ ಮನೆಹಾಳ ಹೆಂಡತಿ ಸೆರಗೊಳಗೆ
ದಂಡಿನ ಮಾರಮ್ಮ ಎಲ್ಲಿದ್ದೀಯೇ ತಾಯೀ ತಂಪಿನ ತೌರೊಳಗೆ
ಇಂಥಾ ಶಿಕ್ಷೆಯೇ ಹುಟ್ಟಿದ ಮೊದಲೇ ನರಕವುಂಡವಳಿಗೆ
ಒಳಗಿನ ಹಾವು ಹೊರಗಿನ ಹಾವು ಇಬ್ಬಗೆ ದ್ರೋಹವೆ ಒಬ್ಬಳಿಗೆ





ತಿಂಗಳಾರು ತಿಂಗಳು ಬೆಂದ ಗಾಯಕ್ಕೆ ಆರೈಕೆಯಾಗಿ
ಮೂಗಿನ ಹೊರಳೆಯೊಂದು ಬಿಟ್ಟು ಮುಖ ಪೂರ್ತಿ ಲೆಪ್ಪವಾಗಿ
ರೆಪ್ಪೆ ಸೀದರೂ ಕಣ್ಣೋಟವುಳಿದದ್ದು ದೊಡ್ಡ ಸೋಜಿಗವಾಗಿ
ಕರೆಪಾರಕ್ಕ ಮತ್ತೆ ನರುಮನುಷ್ಯಳಾಗಿ ಬಂದಳು ನೀರಿಗೆ
ಅಸಿಸ್ಸಿ, ಯಾರಿದು ಹೆಂಗಸು ಇಷ್ಟೊಂದು ಕೆಂಪಗೆ
ಎಂಥ ಮುಖವಿದು ತಿಗಳಗೆಣಸು ಬಾಳಚಿಯಲ್ಲಿ ಕೊತ್ತಿದಂಗೆ
ಯಾವುದೋ ಬಿಳಿಹೆಂಗಸಿನ ಶಿರ ತೆಗೆದು ಕರೆಪಾರಕ್ಕನಿಗೆ ಜೋಡಿಸಿದಂಗೆ
ಅವಳ ಹೊಟ್ಟೆ ಮಗುವೇ ಗುರುತು ಹಿಡಿಯದೆ ಕಿಟಾರನೆ ಕಿರುಚಿತಂತೆ

-4-

ದೇವರು ಸಿಕ್ಕುತ್ತಾನೆ, ಕೇಳಬೇಕು
ಖುದ್ದು ನಿಂತು ನರಮನುಷ್ಯರೆದೆಯೊಳಗೆ ತರತಮದ ಬೀಜ ಬಿತ್ತಿ
ಒಂದು ಕಣ್ಣಲ್ಲಿ ಬೆಣ್ಣೆ ಇನ್ನೊಂದರಲಿ ಕುರುಡಿನಹೂ ಬೆಳೆದ ಬೇಸಾಯದ ವಿವರ
ಮತ್ತು ಅದನ್ನೂ ಕೇಳಬೇಕು ಅದ್ಯಾವ ಮುಖವೆತ್ತಿ ಕೊಡುತ್ತಾನೋ ಆ ಸಮರ್ಥನೆ
ಅವನ ಸ್ವಂತಮನೆಯ
ಪಂಕ್ತಿ ಭೇದಕ್ಕೆ





# ದಲಿತ ಮಹಿಳೆ ಮತ್ತು ಕಾನೂನುಗಳು

• *ಮನೋರಂಜಿನಿ ಥಾಮಸ್ ಕುಂಬ್ಳ್*
ಪರ್ಯಾಯ ಕಾನೂನು ವೇದಿಕೆ ಬೆಂಗಳೂರು

ಇಂದಿನ ಸಮಾಜ ಮತ್ತು ಕಾನೂನುಗಳು ದಲಿತ ಮಹಿಳೆಯ ದೇಹ ( ಲೈಂಗಿಕತೆ) ಅವಳ ಅನಕ್ಷರತೆ ಮತ್ತು ಅವಳ ಶ್ರಮದ ಅಪಮೌಲ್ಯದ ಆಧಾರದ ಮೇಲೆ ಅವಳು ಘನತೆಯಿಂದ ಜೀವಿಸುವ ಹಕ್ಕನ್ನು ಹೇಗೆ ಉಲ್ಲಂಘಿಸುತ್ತಿವೆ ಎಂಬುವುದನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಇಲ್ಲಿ ನಡೆದಿದೆ. ನಮ್ಮ ದೇಶದಲ್ಲಿ ಅಂದಿನಿಂದ ಇಂದಿನವರೆಗೂ ದಲಿತರ ಮೇಲೆ ನಡೆಯುವ ಸಣ್ಣ ಪುಟ್ಟ ದೌರ್ಜನ್ಯಗಳಿಂದ ಹಿಡಿದು ಕೈರಲಾಂಜಿ ಮತ್ತು ಕಂಬಾಲಪಳ್ಳಿಯಂತಹ ದಲಿತರ ಸಾಮೂಹಿಕ ಹತ್ಯೆ ಪ್ರಕರಣಗಳನ್ನು ನಾವು ಸೂಕ್ಷ್ಮವಾಗಿ ಗಮನಿಸುವಾಗ ಇವುಗಳ ಬೆನ್ನ ಹಿಂದೆ ದಲಿತ ಮಹಿಳೆಯ ದೇಹ (ಲೈಂಗಿಕತೆ)ದ ಮೇಲೆ ಪ್ರತೀಕಾರ ಸೇಡಿನ ದಾಳಿ ದಲಿತ ಮಹಿಳೆಯ ಚಾರಿತ್ರ್ಯವನ್ನು ಸರ್ವನಾಶ ಮಾಡಿರುತ್ತವೆ. ಅವಳ ಅನಕ್ಷರತೆ ಮತ್ತು ಬಡತನ ಮತ್ತು ಜಾತಿ ಭೂತವಾಗಿ ಕಾಡಿ ಇಂತಹ ದೌರ್ಜನ್ಯಗಳಿಗೆ ಪ್ರೋತ್ಸಾಹವನ್ನು ನೀಡಿರುತ್ತವೆ ಎನ್ನುವುದು ಸ್ಪಷ್ಟ. ಈ ದೌರ್ಜನ್ಯಗಳು ದಲಿತ ಮಹಿಳೆಯ ಚಾರಿತ್ರ್ಯವನ್ನು ಗುರಿಯಾಗಿಸಿಕೊಂಡಿರುತ್ತವೆ. ಅದರೆ ಯಾರೂ ಸೂಕ್ಷ್ಮವಾಗಿ ಇಂತಹ ಅಂಶಗಳನ್ನು ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ದಲಿತ ಮಹಿಳೆಯು ಎಲ್ಲಿ ಘನತೆಯಿಂದ ಜೀವಿಸುತ್ತಿದ್ದಾಳೊ ಅಂತಹ ಕುಂಟುಂಬ ಮತ್ತು ಸಮಾಜ ಆರೋಗ್ಯವಾಗಿರುತ್ತದೆ. ಯಾಕೆಂದರೆ ಅವಳು ಸಮಾಜದ ಕೆಳಸ್ತರದಲ್ಲಿರುವವಳು. ಜಾತಿ ಲಿಂಗ ಮತ್ತು ವರ್ಗ ಎಂಬ ಮೂರು ರೀತಿಯ ತಾರತಮ್ಯವನ್ನು ಅವಳು ಎದುರಿಸುತ್ತಿದ್ದಾಳೆ. ಅದಕ್ಕಾಗಿ ನಾವು ದಲಿತ ಮಹಿಳೆಯ ಹಕ್ಕುಗಳನ್ನು ಸಂರಕ್ಷಿಸುವುದು ಮುಖ್ಯವೆನಿಸುತ್ತದೆ. ಅಂತಹ ಕೆಲವು ಅಂಶಗಳ ವಿಮರ್ಶಾತ್ಮಕ ಪ್ರಸ್ತಾವನೆ ಈ ಕೆಳಗಿನ ವಿಚಾರಗಳಲ್ಲಿ ಅಡಗಿದೆ.

## ದಲಿತ ಮಹಿಳೆ ಮತ್ತು ಉದ್ಯೋಗ

*ಜಾತಿ ಮತ್ತು ವರ್ಗ ಒಂದೇ ನಾಣ್ಯದ ಎರಡು ಮುಖಗಳು*
*– ಡಾ. ಬಾಬಾ ಸಾಹೇಬ್ ಅಂಬೇಡ್ಕರ್*

ಮನುಸ್ಮೃತಿಯಿಂದ ಇಂದಿನವರೆಗೂ ನಮ್ಮ ದೇಶದಲ್ಲಿ ಶೈಕ್ಷಣಿಕ ಸಾಮಾಜಿಕ ಮತ್ತು ಆರ್ಥಿಕ ಸಂಪನ್ಮೂಲಗಳಲ್ಲಿ ಸಮಾನ ಹಂಚಿಕೆಯಾಗಿಲ್ಲ. ಈ ಕಾರಣ ನಾವು ಇಂದು ಸಮಾಜದಲ್ಲಿ ಬಡವ–ಶ್ರೀಮಂತ, ಅಕ್ಷರಸ್ತ–ಅನಕ್ಷರಸ್ಥ, ಕೀಳುಜಾತಿ–ಮೇಲುಜಾತಿ ಎಂಬ ತಾರತಮ್ಯವನ್ನು ನೋಡುತ್ತೇವೆ. ಈ ಎಲ್ಲ ತಾರತಮ್ಯಗಳಲ್ಲಿ ಈ ರೀತಿಯಾಗಿ ದಲಿತ ಮಹಿಳೆಯರು ಜಾತಿ, ಲಿಂಗ ಮತ್ತು ವರ್ಗ ತಾರತಮ್ಯವನ್ನು ಎದುರಿಸುತ್ತಿದ್ದಾರೆ. ಹಾಗಾಗಿ ಅವರು ಮಾಡುವ ಕೆಲಸವನ್ನು 'ಕೀಳೆಂದು', ಬೇರೆಯವರು ಮಾಡುವ ಕೆಲಸವನ್ನು ಶ್ರೇಷ್ಠವೆಂದು ಸಮಾಜ ಮತ್ತು ಕಾನೂನು ನಿರ್ಧರಿಸುತ್ತದೆ. ಹೀಗೆ ಅವರನ್ನು 'ಕೆಲಸದಾಳು' 'ಕಾರ್ಮಿಕಳು' ಎಂದು ಗುರ್ತಿಸುವುದರ ಮೂಲಕ ಎಂತಹ ಯಂತ್ರ ಮತ್ತು ಮಾನವರಿಂದ ಮಾಡಲಾಗದ ಕೋಟ್ಯಾಂತರ ಟನ್‌ಗಳಷ್ಟು ಶ್ರಮವನ್ನು ಕೀಳೆಂದು ಕೌಶಲ್ಯವಿಲ್ಲದ್ದೆಂದು ನಿರ್ಧರಿಸಿ, ಅವರ ಶ್ರಮವನ್ನು ನಮ್ಮ ದೇಶದ ಮೇಲ್ವರ್ಗದ ಜನ ಮತ್ತು ಸರ್ಕಾರ ಶತಶತಮಾನಗಳಿಂದ – ಮೋಸದಿಂದ – ಕೊಳ್ಳೆಹೊಡೆಯುತ್ತಿದ್ದಾರೆ. ಇದು ದಲಿತ ಮಹಿಳೆಯರ ಮೇಲೆ ಮತ್ತು ಅವರ ಕುಂಟುಂಬಗಳ ಮೇಲೆ ಸಮಾಜದ ಮತ್ತು ದೇಶದ ಮೇಲೆ ಎಷ್ಟು ದುಷ್ಪರಿಣಾಮ ಬೀರುತ್ತಿದೆ ಎಂದರೆ, ಇಂದು ನಮ್ಮ

ದೇಶದಲ್ಲಿರುವ 80% ಕ್ಕೂ ಹೆಚ್ಚಿನ ದಲಿತ ಮಹಿಳೆಯರು ಬಡತನ ರೇಖೆಗಿಂತ ಕೆಳಗಿರುವವರು. ಹಾಗಾಗಿ ಅವರು ಅಸಂಘಟಿತ ವಲಯಗಳಲ್ಲಿ ಕೃಷಿ ಕಾರ್ಮಿಕರಾಗಿ ಪೌರಕಾರ್ಮಿಕರಾಗಿ, ಕಟ್ಟಡಕಾರ್ಮಿಕರಾಗಿ, ಮನೆಕೆಲಸದವರಾಗಿ, ವೇಶ್ಯೆಯರಾಗಿದ್ದಾರೆ. ಅವರು ಮಾಡುವ ಕೆಲಸದಲ್ಲಿ ಅವರಿಗೆ ಕನಿಷ್ಠ ಗೌರವ, ಕೆಲಸದ ಆಯ್ಕೆ, ಸುರಕ್ಷತೆ. ಕೆಲಸದ ಮಾಹಿತಿ, ಅವರು ಮಾಡುವ ಶ್ರಮಕ್ಕೆ ಸರಿಯಾದ ಬೆಲೆ ಕಟ್ಟುವ ಸ್ಥೈರ್ಯವೂ ಇಂದು ಅವರಿಗಿಲ್ಲ. ಹಾಗಾಗಿ ಅವರ ಶ್ರಮ ಪುಗಸಟ್ಟೆ, ಅದನ್ನು ಯಾರಾದರೂ ತಮ್ಮ ಇಷ್ಟಕ್ಕೆ ಬಳಸಿಕೊಳ್ಳ ಬಹುದು. ತಮ್ಮ ಶ್ರಮಕ್ಕೆ ಅವರು ಮೌಲ್ಯವನ್ನು (ಬೆಲೆ) ನಿರ್ಧಾರ ಮಾಡಬಾರದು ತನಗೆ ಇಷ್ಟವಾಗದ ಕೆಲಸವನ್ನು ಮಾಡಲು ನಿರಾಕರಿಸಬಾರದು. ಹೀಗೇನಾದರೂ ಅವರು ಈ ನಿಯಮಗಳಿಗೆ ವಿರುದ್ಧವಾಗಿ ನಿಂತರೆ, ಅವರು ಕಿರುಕುಳ, ಅತ್ಯಾಚಾರ, ಅವಮಾನ, ಕೊಲೆ ಇತ್ಯಾದಿಗಳನ್ನು ಎದುರಿಸಬೇಕು. ಇಲ್ಲವಾದರೆ ಅವರು ಮತ್ತು ಅವರ ಕುಂಟುಂಬದವರು ಉಪವಾಸದಿಂದ ಕಣ್ಣೀರಿಟ್ಟು ಸಾಯಬೇಕಾದ ಪರಿಸ್ಥಿತಿ ನಮ್ಮ ದೇಶದಲ್ಲಿದೆ. ಹಾಗಾಗಿ ದಲಿತ ಮಹಿಳೆಯರ ಲೋಕ, ಕುಂಟುಂಬದಲ್ಲಿರುವ ಗಂಡ ಮಕ್ಕಳಿಗೆ ಊಟ ನೀಡಬೇಕು, ಕತ್ತೆಯಂತೆ ಹೊರ ಸಮಾಜದಲ್ಲಿ ದುಡಿಯಬೇಕು ಎಂಬಷ್ಟೇ. ಹೀಗಾಗಿ ಅವರಿಗೆ ಹೊರಗಿನ ಜಗತ್ತು ತಿಳಿಯದು ಜಾತಿ, ಅನಕ್ಷರತೆ ಮತ್ತು ಬಡತನವೆಂಬ ಭೂತ ಅವರನ್ನು ಬರೀ ಉಸಿರಾಡುವುದಕ್ಕಾಗಿ ಬದುಕಿರುವಂತಹ ಅನಿವಾರ್ಯ ಪರಿಸ್ಥಿತಿಯನ್ನು ನಿರ್ಮಿಸಿವೆ. ಒಂದು ಹೊತ್ತಿಗೆ ಊಟ ದೊರೆತರಾಯಿತು, ಅದಕ್ಕಾಗಿ ಯಾವ ಕೆಲಸವನ್ನಾದರೂ ತಾವು ಮಾಡಬೇಕು ಎನ್ನುವ ಮನೋಭಾವನೆಯನ್ನು ಅವರಲ್ಲಿ ಮೂಡಿಸಿದೆ.

ದಲಿತ ಮಹಿಳೆಯರು ಸಮಾಜದಲ್ಲಿ ಮಾಡುತ್ತಿರುವ ಕೆಲಸವನ್ನು ಗೌರವಿಸುವ ಮತ್ತು ಅವಳ ಶ್ರಮಕ್ಕೆ ಸರಿಯಾದ ಬೆಲೆಯನ್ನು ಕಟ್ಟುವ ಕಾನೂನಾಗಲೀ ನೈತಿಕ ಹೊಣೆಗಾರಿಕೆಯಾಗಲಿ ನಮ್ಮ ದೇಶದಲ್ಲಿ ಕಾಣುತ್ತಿಲ್ಲ. ಜಾತಿ ಮತ್ತು ವರ್ಗ ಒಂದೇ ನಾಣ್ಯದ ಎರಡು ಮುಖಗಳು. ಜಾತಿಯನ್ನು ನಿವಾರಿಸಬೇಕಾದರೆ ವರ್ಗ ತಾರತಮ್ಯವನ್ನು ನಾವು ನಿವಾರಿಸಲೇಬೇಕು. ವರ್ಗ ತಾರತಮ್ಯವನ್ನು ನಿವಾರಿಸಬೇಕಾದರೆ, ಅರ್ಥಿಕ ಸಬಲೀಕರಣವನ್ನು ನಾವು ಗಂಭೀರವಾಗಿ ಪರಿಗಣಿಸಬೇಕು. ಆರ್ಥಿಕ ಸಬಲೀಕರಣ ಅವರವರ ಶ್ರಮಕ್ಕೆ ತಕ್ಕ ಬೆಲೆಯನ್ನು ನಿರ್ಧರಿಸುವು ದರಲ್ಲಿ ಮತ್ತು ಅವರು ಮಾಡುವ ಕೆಲಸಕ್ಕೆ ಗೌರವ ನೀಡುವುದರಲ್ಲಿ ಅಡಗಿದೆ ಎಂದು ಎಲ್ಲರೂ ತಿಳಿಯಬೇಕು. ಜಾತಿ ತಾರತಮ್ಯ ನಿವಾರಣೆ ಯನ್ನು ನಾವು ಮೂಲಭೂತ ಹಕ್ಕನ್ನಾಗಿ ನಮ್ಮ ಸಂವಿಧಾನದ ಅನುಚ್ಛೇದ 15 ಮತ್ತು 17ರಲ್ಲಿ ಕಾಣುವಂತೆ ವರ್ಗ ತಾರತಮ್ಯವನ್ನು ನಿವಾರಣೆ ಮಾಡಬೇಕು ಎಂಬ ಅಂಶವನ್ನು ಮೂಲಭೂತ ಹಕ್ಕನ್ನಾಗಿ ನಮ್ಮ ಸಂವಿಧಾನದಲ್ಲಿ ಪರಿಗಣಿಸಿಲ್ಲ. ಅದು ಜಾತಿ ನಿರ್ಮೂಲನೆಯಲ್ಲಿ ಮತ್ತು ದಲಿತ ಮಹಿಳೆಯ ಆರ್ಥಿಕ ಅಭಿವೃದ್ಧಿಯಲ್ಲಿ ಗಂಭೀರವಾದ ಅಂಶ ವೆಂದು ಯಾರೂ ಪರಿಗಣಿಸುತ್ತಿಲ್ಲ. ಕಾರ್ಮಿಕರ ಅರ್ಥಿಕ ಚಿಂತನೆಯನ್ನು ಮಾಡಿದ ಕಾರ್ಲ್‌ಮಾರ್ಕ್ಸ್‌ರ ಕೆಲವು ಅಂಶಗಳನ್ನು ನಾವು ಇಲ್ಲಿ ವಿಶ್ಲೇಷಿಸುವುದು ಸೂಕ್ತವೆನಿಸುತ್ತದೆ. ಕಾರ್ಲ್‌ಮಾರ್ಕ್ಸ್‌ರವರ ಪ್ರತಿಪಾದನೆ ಯಂತೆ "ಕೆಲಸ ಎನ್ನುವ ವ್ಯಾಖ್ಯಾನವು ಒಡೆಯ ಮತ್ತು ಸೇವಕನ ಸಂಬಂಧವನ್ನು ನಿರ್ಮಿಸುತ್ತದೆ. ಒಡೆಯನಿಗೆ ಸೇವಕನ ಶ್ರಮದ ಬೆಲೆ, ಸಮಯ, ಶ್ರಮದ ಗುಣ ಮಟ್ಟವನ್ನು ನಿರ್ಧಾರ ಮಾಡುವ ಒಡೆತನವಿರು ತ್ತದೆ. ಸೇವಕನ ಶ್ರಮವು ಅದೃಶ್ಯವಾಗಿರುತ್ತದೆ. ಒಡೆಯನು ಸೇವಕನ ಶ್ರಮಕ್ಕೆ ನೀಡುವ ಮೌಲ್ಯವು ದೃಶ್ಯವಾಗಿರುತ್ತದೆ. ಇಲ್ಲಿ ಒಡೆಯ ಸೇವಕನನ್ನು ಸುಲಭವಾಗಿ ಶೋಷಿಸಬಹುದು. ಕಾರ್ಮಿಕ ಮತ್ತು ಕೆಲಸ ಎನ್ನುವ ಶೋಷಣೆಯ ಚೌಕಟ್ಟುಗಳು ಹೋಗಿ ತಮ್ಮ ಶ್ರಮಕ್ಕೆ ತಾವೇ ಮೌಲ್ಯ ನಿರ್ಧಾರ ಮಾಡುವ ಸ್ವಾತಂತ್ರ್ಯ ಸಿಕ್ಕಾಗ ಕಾರ್ಮಿಕರು ಸಬಲ ರಾಗುತ್ತಾರೆ" ಎನ್ನುತ್ತಾರೆ. ಅವರ ಈ ವ್ಯಾಖ್ಯಾನವನ್ನು ನಾವು ಉದ್ಯೋಗ, ವೃತ್ತಿ ವ್ಯಾಪಾರಗಳೊಡನೆ ಹೋಲಿಸಿ ನೋಡುವಾಗ, ಕೆಲಸವೆನ್ನುವ ಚೌಕಟ್ಟಿನಲ್ಲಿರುವ ಶೋಷಣೆಯ ಅಂಶಗಳು ಅಲ್ಲಿ ಕಂಡುಬರುವುದಿಲ್ಲ. ಹಾಗಾಗಿ ಇವುಗಳಿಗೆ ಸಮಾಜದಲ್ಲಿ ಗೌರವವಿದೆ. ಇವುಗಳನ್ನು ಮಾಡುವವರು ಎಷ್ಟೇ ಬಡವರಾಗಿದ್ದರೂ ಅವರಿಗೆ ಕಾರ್ಮಿಕರಿಗಿಂತ ಉತ್ತಮ ಜೀವನವಿದೆ.

ಕಾರ್ಲ್ ಮಾರ್ಕ್ಸ್‌ರ ಕೆಲಸದ ವ್ಯಾಖ್ಯಾನವನ್ನು ಇಲ್ಲಿ ನಾವು ನೋಡಬೇಕಾದ ಉದ್ದೇಶವೆನೆಂದರೆ ದಲಿತ ಮಹಿಳೆ ಅಸಂಘಟಿತ ಕಾರ್ಮಿಕಳಾಗಿ ಕೆಲಸವೆನ್ನುವ ಚೌಕಟ್ಟಿನಲ್ಲಿ ಕಾರ್ಮಿಕಳಾಗಿ ಶೋಷಿತ ಳಾಗುತ್ತಿದ್ದಾಳೆ ಎಂಬುವುದು ನಮಗೆ ಸ್ಪಷ್ಟವಾಗಿ ಮನದಟ್ಟಾಗಬೇಕು. ನಮ್ಮ ದೇಶದಲ್ಲಿ ಕೆಳಸ್ತರದಲ್ಲಿರುವ ದಲಿತ ಮಹಿಳೆಯ ಶ್ರಮ ನಮ್ಮ ದೇಶದ ಅಭಿವೃದ್ಧಿಯ ಮೂಲವಾಗಿದೆ. ಅದರೆ ಅವರಿಗಾಗಿ ಅವರ ಬಡತನ, ಜಾತಿ ಮತ್ತು ಅನಕ್ಷರತೆಯನ್ನು ಪರಿಗಣಿಸುವ ಪ್ರತ್ಯೇಕ ಕಾರ್ಮಿಕ ಕಾಯಿದೆಗಳು ನಮ್ಮಲ್ಲಿ ಯಾವುವೂ ಇಲ್ಲ. ಹಾಗಾಗಿ ಈಗ ಇರುವ ಕಾರ್ಮಿಕರ ಪರವಾದ ಸಾಮಾಜಿಕ ಭದ್ರತೆ, ಕಾರ್ಮಿಕ ಕಾಯಿದೆಗಳು, ಕಾರ್ಮಿಕರಿಗೆ ಉದ್ಯೋಗ ಸೃಷ್ಟಿಸುವ ಕಾಯಿದೆ ಮತ್ತು ಸರ್ಕಾರಿ ಯೋಜನೆಗಳ ಅನುಷ್ಠಾನಗಳಲ್ಲಿ ಆಗುತ್ತಿರುವ ಕೆಲವು ಲೋಪ ದೋಷಗಳನ್ನು ಈ ಮುಂದಿನ ಅಂಶಗಳಲ್ಲಿ ನಾವು ಕಾಣಬಹುದು.

ದಲಿತ ಮಹಿಳೆಯರಿಗೆ ಆರ್ಥಿಕ ಸಬಲತೆಯು ಅವರು ಘನತೆ ಯಿಂದ ಜೀವಿಸುವ ಹಕ್ಕನ್ನು ಎತ್ತಿ ಹಿಡಿಯುತ್ತದೆ ಎಂಬುವುದನ್ನು ಚಿಂತಿಸಿದವರು ಡಾ. ಅಂಬೇಡ್ಕರ್. ಅದಕ್ಕಾಗಿ ಅವರು ಕಾರ್ಮಿಕ ಮಂತ್ರಿಯಾಗಿದ್ದಾಗ ಮಹಿಳೆಯರಿಗೆ ಆರ್ಥಿಕ ಸಬಲತೆಯನ್ನು ನೀಡುವ ಕಾಯಿದೆಗಳಾದ ಸಮಾನಕೆಲಸಕ್ಕೆ ಸಮಾನ ವೇತನ, (ಈಕ್ವಲ್ ಪೇ ಫಾರ್ ಈಕ್ವಲ್ ವರ್ಕ್) ಕನಿಷ್ಠ ವೇತನ (ಮಿನಿಮಂ ವೇಜಸ್ ಆಕ್ಟ್) ಮಹಿಳೆಯರಿಗೆ ಹೆರಿಗೆ ಭತ್ಯೆ ವೇತನ (ಮೆಟರ್ನಿಟಿ ಬೆನಿಫಿಟ್ ಆಕ್ಟ್)ಗಳನ್ನು ಜಾರಿ ಮಾಡಿದರು. ನಂತರ ಭಾರತ ಸಂವಿಧಾನದಲ್ಲಿ ನಿರ್ದೇಶನಾತ್ಮಕ ತತ್ವಗಳನ್ನಾಗಿ ಇವುಗಳನ್ನು ಅವರು ಗುರ್ತಿಸಿದರು. ಭಾರತ ಸಂವಿಧಾನ ಅನುಚ್ಛೇಧ 39, 41, 42, 43ರಲ್ಲಿ ಕಾರ್ಮಿಕರ ಹಕ್ಕುಗಳನ್ನು ರಕ್ಷಿಸುವ ಅಂಶಗಳನ್ನು ನಾವು ಕಾಣಬಹುದು. ಈ ಅಂಶಗಳನ್ನು ನಮ್ಮ ಸಂವಿಧಾನ ನಿರ್ದೇಶನಾತ್ಮಕ ತತ್ವಗಳ ಮೂಲಕ ನೀಡುತ್ತದೆ. ಅದಕ್ಕಾಗಿ ಅವುಗಳನ್ನು ಮೂಲಭೂತ ಹಕ್ಕುಗಳಂತೆ ಕಡ್ಡಾಯವಾಗಿ ನಿರ್ವಹಿಸಲೇಬೇಕೆಂಬ ನಿಯಮ ಸರ್ಕಾರಕ್ಕೆ ಇಲ್ಲ. ಹಾಗಾಗಿ ಇಂದು ಕನಿಷ್ಠ 30ಕ್ಕೂ ಹೆಚ್ಚು ಕಾರ್ಮಿಕರ ಕಾಯಿದೆಗಳು ಇಂದು ಜಾರಿಯಲ್ಲಿವೆ. ಅದರೆ ಈ ಕಾಯಿದೆಗಳ ಗುರಿ ಮತ್ತು ಅನುಷ್ಠಾನಗಳನ್ನು ನೋಡುವಾಗ ಕಾರ್ಮಿಕರ ಮೂಲಭೂತ ಸಮಸ್ಯೆಗಳಾದ ಬಡತನ, ವರ್ಗ ತಾರತಮ್ಯ ಮತ್ತು ಅವರ ಶ್ರಮದ ಮೌಲ್ಯವನ್ನು ಅವರೇ ನಿರ್ಧಾರ ಮಾಡುವಂಥ ನೈತಿಕ ಬೆಂಬಲ ನೀಡುವ ಅಂಶಗಳು ಇವುಗಳಲ್ಲಿ ಇಲ್ಲ. ಉದಾಹರಣೆಗೆ ಹೇಳುವು ದಾದರೆ, ಈ ಕಾಯಿದೆಗಳಲ್ಲಿ ಕಾರ್ಮಿಕರು ಪರಿಹಾರವನ್ನು ಪಡೆಯ ಬೇಕಾದರೆ, ಕಾರ್ಮಿಕರು ಮಾಲಿಕನ ಹತ್ತಿರ ಕೆಲಸ ಮಾಡುತ್ತಿದ್ದರು ಎಂಬುವುದನ್ನು ಕಾನೂನಿನ ಮೂಲಕ ಸಾಬೀತು ಪಡಿಸಬೇಕು. ದಲಿತ ಮಹಿಳೆಯರು ಅನಕ್ಷರಸ್ತರು, ಕಾಯಿದೆಗಳ ಬಗ್ಗೆ ಮಾಹಿತಿ ಇಲ್ಲದವರು.

ಅದಕ್ಕಿಂತಲೂ ಮುಖ್ಯವಾಗಿ ಇವರು ಅಸಂಘಟಿತವಲಯಗಳಲ್ಲಿ ದುಡಿಯುವಂತಹವರು. ಹೀಗಾಗಿ ಅವರ ಕೆಲಸ, ಕೆಲಸ ಮಾಡುವ ಸ್ಥಳ ಮತ್ತು ಮಾಲಿಕರು ದಿನದಿಂದ ದಿನಕ್ಕೆ ಬದಲಾಗುವುದರಿಂದ ಅವರು ಒಡೆಯ (ಮಾಲೀಕ) ಮತ್ತು ಸೇವಕನ ಸಂಬಂಧವನ್ನು ಸಾಬೀತು ಪಡಿಸುವುದು ಕಷ್ಟವಾಗುತ್ತದೆ. ಅವರು ಮಾಡುವ ಕೆಲಸಕ್ಕೆ ಸಾಕ್ಷಿ ನೀಡುವ ಯಾವುದೇ ಕಾಗದ ಪತ್ರಗಳನ್ನು ಅವರಿಗೆ ನೀಡಿರುವುದಿಲ್ಲ. ಹೀಗಾಗಿ ಇಂದು ಇರುವ ಕಾರ್ಮಿಕ ಕಾಯಿದೆಗಳಿಂದ ದಲಿತ ಮಹಿಳೆಯರು ಹೆಚ್ಚಿನ ಪ್ರಯೋಜನವನ್ನು ಪಡೆಯುತ್ತಿಲ್ಲ. ಈ ಕಾಯಿದೆಗಳು ಅಸಂಘಟಿತ ವಲಯಕ್ಕಿಂತ ಸಂಘಟಿತ ವಲಯಗಳ ಮಹಿಳೆಯರಿಗೆ ಹೆಚ್ಚು ಪ್ರಯೋಜನವಾಗುತ್ತವೆ.

ದಲಿತರು ಮತು ಬಡವರಿಗೆ ಉದ್ಯೋಗವನ್ನು ಸೃಷ್ಟಿಸುವ ಕಾಯಿದೆ ಮತ್ತು ಯೋಜನೆಗಳನ್ನು ನೋಡಿದರೆ, 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆ-2006' ಇದು ಬಡತನ ರೇಖೆಗಿಂತ ಕೆಳಗಿರುವ ಎಲ್ಲರಿಗೂ ಅನ್ವಯಿಸುವ ಕಾಯಿದೆಯಾದರೂ ಇದರಲ್ಲಿ ದಲಿತ ಕುಂಟುಂಬಗಳು, ಅದರಲ್ಲೂ ವಿಶೇಷವಾಗಿ ದಲಿತ ಮಹಿಳೆಯರು ಹೆಚ್ಚಿನ ಲಾಭ ಪಡೆಯುತ್ತಾರೆ ಎಂಬುವುದರಲ್ಲಿ ಸಂಶಯವಿಲ್ಲ. ಈ ಕಾಯಿದೆಯ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಬಡತನರೇಖೆಗಿಂತ ಕೆಳಗಿರುವ ಕುಂಟುಂಬದವರು ಗ್ರಾಮಪಂಚಾಯಿತಿಯಲ್ಲಿ ತಮಗೆ ಉದ್ಯೋಗವನ್ನು ನೀಡಬೇಕೆಂದು ಒಂದು ಅರ್ಜಿಯನ್ನು ಹಾಕಬೇಕು. ಅದರ ಪ್ರಕಾರ ಗ್ರಾಮಪಂಚಾಯಿತಿ ಒಂದು ಕುಂಟುಂಬಕ್ಕೆ ವರ್ಷದಲ್ಲಿ 100 ದಿನಗಳ ಉದ್ಯೋಗವನ್ನು ನೀಡಬೇಕು. ಒಂದುವೇಳೆ ಹಾಗೆ ಕೆಲಸವನ್ನು ಕೊಡಲು ಆಗದಿದ್ದರೆ ಗ್ರಾಮಪಂಚಾಯಿತಿಯು ದಿನಕ್ಕೆ ಇಂತಿಷ್ಟು ಹಣವನ್ನು ಆ ಕುಂಟುಂದ ನಿರ್ವಹಣೆಗೆ ಕೊಡಬೇಕು ಎಂಬ ಕಾನೂನಿದೆ. ಈ ಕಾಯಿದೆಯಲ್ಲಿ ಕೂಲಿಗಾರರಿಗೆ ಕನಿಷ್ಠ ವೇತನ ಅಂದರೆ ಸರ್ಕಾರದ ಅನುಮೋದನೆಯ ಪ್ರಕಾರ ದಿನಕ್ಕೆ 82 ರೂಪಾಯಿ ಗಳನ್ನು ನೀಡಬೇಕು. ಈ ಕಾಯಿದೆಯು ಮುಖ್ಯವಾಗಿ ಕೂಲಿ ಕಾರ್ಮಿಕರು ವಲಸೆ ಹೋಗುವುದನ್ನು ತಪ್ಪಿಸುತ್ತದೆ ಎಂಬುವುದು ಗಮನಾರ್ಹ ಅಂಶ. ಈ ಕಾಯಿದೆಯ ಮುಖ್ಯ ಅಂಶಗಳನ್ನು ನಾವು ವಿಶ್ಲೇಷಿಸಿದರೆ, ಈ ಕಾಯಿದೆಯಲ್ಲಿ ಬರುವ ಸಾರ್ವಜನಿಕ ಕಾಮಗಾರಿಗಳ ಕೆಲಸಗಳನ್ನು ಕೂಲಿ ಕೆಲಸವೆಂದು ಕೌಶಲ್ಯವಿಲ್ಲದ ಕೆಲಸವೆಂದು ತಿಳಿಯುವುದರಿಂದ ಕಾರ್ಲ್‌ಮಾರ್ಕ್ಸ್‌ರಂತೆ'ಕೂಲಿಗಾರ' 'ಕೆಲಸ' ಎಂಬ ತಾರತಮ್ಯವನ್ನು ಎತ್ತಿ ತೋರಿಸುತ್ತದೆ. ಈ ಕಾಯಿದೆಯು ಬಡವರಿಗೆ ಎಂತಹ ಉದ್ಯೋಗವನ್ನು ನೀಡುತ್ತದೆಂದರೆ, ಸಾರ್ವಜನಿಕ ಕಾಮಗಾರಿಗಳನ್ನು ಅಂದರೆ ರಸ್ತೆ ದುರಸ್ತಿ, ಸಾರ್ವಜನಿಕ ಸ್ಥಳಗಳನ್ನು ಶುಚಿಗೊಳಿಸುವುದು, ಕಟ್ಟಡಗಳ ನಿರ್ಮಾಣ ಇತ್ಯಾದಿ ಕೆಲಸವನ್ನು ನೀಡುತ್ತದೆ. ಮತ್ತು ಕೂಲಿ ಕಾರ್ಮಿಕರು ಎಲ್ಲಿ ಯಾವಾಗ ಎಷ್ಟು ಸಮಯ ಎಷ್ಟು ಕೂಲಿಗೆ ದುಡಿಯಬೇಕೆಂದು ಈ ಕಾಯಿದೆಯೆ ತಿಳಿಸುತ್ತದೆ. ಸರ್ಕಾರ ನಿಗದಿ ಪಡಿಸಿದ ಕನಿಷ್ಠ ಕೂಲಿ ದಿನಕ್ಕೆ 82 ರೂಪಾಯಿ. ಇಂದಿನ ತುಟ್ಟಿ ಭತ್ಯೆಯಲ್ಲಿ ಇದು ಬಡತನದ ಕುಂಟುಂಬಗಳಲ್ಲಿರುವ ಮಕ್ಕಳ ಗುಣ ಮಟ್ಟದ ವಿದ್ಯಾಭ್ಯಾಸಕ್ಕೆ, ಅವರ ಪೌಷ್ಟಿಕ ಆಹಾರಕ್ಕೆ, ಅವರ ವೈದ್ಯಕೀಯ ಖರ್ಚುಗಳಿಗೆ ಸಾಕಾಗು ತ್ತದೆಯೇ? ಮತ್ತು ಈ ಕಾಯಿದೆ ಪ್ರಕಾರ ಬಡವರಿಗೆ ಶಾಶ್ವತ ಉದ್ಯೋಗ ದೊರೆಯುತ್ತದಾ? ದೊರೆತರೆ ಅವರು ಸಾಯುವವರೆಗೂ ಕೂಲಿ ಕಾರ್ಮಿಕರಾಗಿರಬೇಕಾ? ಎಂಬ ಪ್ರಶ್ನೆಗಳು ಕಾರ್ಮಿಕ ಚಿಂತನೆಯಲ್ಲಿರು ವವರಿಗೆ ಕಾಡುತ್ತವೆ. ಮತ್ತು ಈ ಕಾಯಿದೆ ಕಾರ್ಮಿಕರಿಗೆ, ಯಾವ ಕೆಲಸ ಎಷ್ಟು ಕೂಲಿಗೆ ಎಲ್ಲಿ ಹೇಗೆ ಮಾಡಬೇಕು ಎಂದು ನಿರ್ಧರಿಸುವುದರ ಮೂಲಕ ಒಡೆಯ ಮತ್ತು ಸೇವಕನ ಸಂಬಂಧವನ್ನು ನಿರ್ಮಿಸುತ್ತದೆ. ಕಾರ್ಮಿಕರ ಆಯ್ಕೆಗೆ ಅವರ ಶ್ರಮಕ್ಕೆ ಅವರೇ ಮೌಲ್ಯವನ್ನು ನಿರ್ಧಾರ ಮಾಡುವ ಪ್ರಕ್ರಿಯೆಗೆ ಇಲ್ಲಿ ಅವಕಾಶವಿಲ್ಲ. ಈ ರೀತಿಯ ಕೆಲಸ ಮತ್ತು ನಿರ್ದೇಶನಗಳು ಕಾರ್ಮಿಕರನ್ನು ಪುನಃ ಕಾರ್ಮಿಕರಾಗಿ ಬಡವರಾಗಿ ಉಳಿಯುವಂತೆ ಮಾಡುತ್ತವೆ. ಇಂತಹ ಕಾಯಿದೆಗಳು ನಮ್ಮಲ್ಲಿ ಸಾವಿರ ಇದ್ದರೂ ನಮ್ಮ ದೇಶದ ದಲಿತ ಮಹಿಳೆ ಅರ್ಥಿಕವಾಗಿ ಸಬಲಳಾಗಲು ಸಾಧ್ಯವಿಲ್ಲ.

ಇಂತಹ ಕಾಯಿದೆಗಳ ಜಾರಿಯಲ್ಲಿ ಅಗುತ್ತಿರುವ ಭ್ರಷ್ಟಾಚಾರ, ಅಧಿಕಾರ ನಿರ್ಲಕ್ಷ್ಯತೆಗೆ ನಾವು ಕೂಲಿಗಾಗಿ ಕಾಳು ಯೋಜನೆಯನ್ನು ನೋಡಬಹುದು. ನಮ್ಮ ರಾಜ್ಯದ ಎಷ್ಟೋ ಗ್ರಾಮ ಪಂಚಾಯಿತಿಗಳಲ್ಲಿ ಸತ್ತವರ ಹೆಸರನ್ನು ತೋರಿಸಿ ಬೋಗಸ್ ದಾಖಲಾತಿಗಳನ್ನು ಸೃಷ್ಟಿಸಿ ಹಣವನ್ನು ದುರುಪಯೋಗ ಮಾಡಿದ ಘಟನೆಗಳು ನಮ್ಮ ಕಣ್ಣಿಗೆ ಕಟ್ಟಿದಂತಿವೆ. ಇತ್ತೀಚಿನ ಉದಾಹರಣೆಯನ್ನು ನೀಡುವುದಾದರೆ, ಸರ್ಕಾರದ ಸುತ್ತೋಲೆ 1980 ರ ಪ್ರಕಾರ ನಗರಸಭೆ ಮತ್ತು ಪುರಸಭೆಗಳಲ್ಲಿ ದಿನಗೂಲಿ ಆಧಾರದ ಮೇಲೆ ಕೆಲಸ ಮಾಡುತ್ತಿರುವ ದಿನಗೂಲಿ ನೌಕರರಿಗೆ ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನೀಡಬೇಕು ಎಂಬ ಆದೇಶವನ್ನು ಜಾರಿ ಮಾಡಿದೆ. ಈ ಆದೇಶ ಜಾರಿಯಾಗಿ 21 ವರ್ಷಗಳು ಕಳೆದರೂ ಇನ್ನು ನಮ್ಮ ಕರ್ನಾಟಕದ ಸುಮಾರು ಜಿಲ್ಲೆಗಳಲ್ಲಿ ದಿನಗೂಲಿ ನೌಕರರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ದೊರೆಯುತ್ತಿಲ್ಲ. ಈ ಅನ್ಯಾಯವನ್ನು ಸರಿಪಡಿಸಿ ತಮಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕೆಂದು ಕೋರಿ ನಮ್ಮ ರಾಜ್ಯದ ಎಷ್ಟೊ ಕಾರ್ಮಿಕರು ಹೈಕೋರ್ಟಿನಲ್ಲಿ ಅರ್ಜಿಗಳನ್ನು ಹಾಕಿದ್ದರು. ಹೈಕೋರ್ಟ್ ಕೂಡ ಅವರ ಅರ್ಜಿಯನ್ನು ಮನ್ನಣೆ ಮಾಡಿ ಸಮಾನ ಕೆಲಸಕ್ಕೆ ಸಮಾನವೇತನ ನೀಡಬೇಕೆಂದು ಆದೇಶಿಸಿ ಒಂದು ವರ್ಷಕ್ಕೂ ಮೇಲಾಗಿದೆ. ಇದನ್ನು ಅನುಷ್ಠಾನ ಮಾಡಲು ನಾವು ಮುನಿಸಿಪಾಲಿಟಿ ನಿರ್ದೇಶಕರಿಗೆ ಕೋರಿಕೊಂಡಾಗ ಈ ನೌಕರರು ದಿನಗೂಲಿ ನೌಕರರಲ್ಲ, ಗುತ್ತಿಗೆ ಪೌರ ಕಾರ್ಮಿಕರು ಹೀಗಾಗಿ ಈ ಅದೇಶ ಇವರಿಗೆ ಅನ್ವಯಿಸುವುದಿಲ್ಲವೆನ್ನುತ್ತಾರೆ. ಅವರು ಗುತ್ತಿಗೆ ಪೌರಕಾರ್ಮಿಕರಾಗಿದ್ದರೂ ಅವರಿಗೆ ಸಮಾನ ಕೆಲಸಕ್ಕೆ ಸಮಾನವೇತನವನ್ನು ನೀಡಬೇಕೆಂದು ಗುತ್ತಿಗೆ ಕಾರ್ಮಿಕ ಕಾಯಿದೆ ತಿಳಿಸುತ್ತದೆ. ಈ ಕಾಯಿದೆಯ ಪ್ರಕಾರ ಒಂದು ವೇಳೆ ಗುತ್ತಿಗೆ ದಾರರು ಅವರಿಗೆ ಸಮಾನ ಕೆಲಸಕ್ಕೆ ಸಮಾನವೇತನ ನೀಡದಿದ್ದರೆ, ಮುಖ್ಯ ಮಾಲಿಕ (ಪೌರಡಳಿತ ನಿರ್ದೇಶಕರು) ಈ ಕಾನೂನಿನಡಿಯಲ್ಲಿ ಅವರಿಗೆ ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನೀಡಬೇಕು. ಈ ನಿರ್ದೇಶಕರ ಪ್ರಕಾರ ಅವರು ದಿನಗೂಲಿ ನೌಕರರಾಗಿಲ್ಲವಾದರೆ ಗುತ್ತಿಗೆ ಕಾರ್ಮಿಕ ಕಾಯಿದೆ ಪ್ರಕಾರವಾದರೂ ಅವರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬಹುದಲ್ಲವೇ? ಅದನ್ನು ಮಾಡದೇ ಅವರು ತಮ್ಮ ಕೆಳಗಿನ ಅಧಿಕಾರಿಗಳನ್ನು ಬೆದರಿಸಿ ಯಾವ ಅಧಾರದ ಮೇಲೆ ಇವರನ್ನು ಕೆಲಸಕ್ಕೆ ತೆಗೆದುಕೊಂಡಿದ್ದೀರಿ? ಅವರನ್ನು ಕೆಲಸದಿಂದ ತೆಗೆದುಹಾಕಿ ಎನ್ನುತ್ತಾರೆ. ಇನ್ನು ಅನಕ್ಷರಸ್ತ ಕಾರ್ಮಿಕರು ನಮ್ಮನ್ನು ಎಲ್ಲಿ ಕೆಲಸದಿಂದ ತೆಗೆದು ಹಾಕುತಾರೋ ಎಂಬ ಭಯದಿಂದ ಅವರು ಕೊಟ್ಟ ಕೂಲಿಯನ್ನು ಪಡೆದು ಸುಮ್ಮನಿದ್ದಾರೆ.

ಇನ್ನು ನಮ್ಮ ನ್ಯಾಯಾಲಯಗಳಲ್ಲಿ ಕೂಡ ಕಾರ್ಮಿಕರ ಪರ ಚಿಂತಿಸುವವರು ಇಲ್ಲ. ಕಾರ್ಮಿಕರ ಪರವಾಗಿ ಇರುವ ಕಾಯಿದೆಗಳನ್ನು



ಮತ್ತು ಅಂಶಗಳನ್ನು ಮೊಟಕುಗೊಳಿಸುವ ಪ್ರಕ್ರಿಯೆಯನ್ನು ನಮ್ಮ ಸರ್ವೋಚ್ಚನ್ಯಾಯಾಲಯ 'ಕರ್ನಾಟಕ ರಾಜ್ಯ ವಿರುದ್ಧ ಉಮಾದೇವಿ' 2006ರ ಮೊಕದ್ದಮೆಯ ತೀರ್ಪಿನಲ್ಲಿ ನಡೆದುಕೊಂಡಿದೆ. ಈ ತೀರ್ಪನ್ನು ನಾವು ನೋಡಿದಾಗ ಉದ್ಯೋಗದ ಅವಕಾಶವು ಎಲ್ಲರಿಗೂ ದೊರೆಯಬೇಕು. ಹೀಗಾಗಿ ಯಾವುದೇ ಇಲಾಖೆಯಲ್ಲಿ ಗುತ್ತಿಗೆ ಕಾರ್ಮಿಕರಾಗಿ ತಾತ್ಕಾಲಿಕ ಮತ್ತು ದಿನಗೂಲಿ ಆಧಾರದ ಮೇಲೆ ಸರ್ಕಾರಿ ಆದೇಶದ ನಿಯಮವನ್ನು ಪಾಲಿಸದೇ ನೇಮಕಾತಿಯನ್ನು ಹೊಂದಿರುತ್ತಾರೋ ಅವರ ಸೇವೆ ಖಾಯಂಗೊಳಿಸುವ ಅಧಿಕಾರ ಸರ್ಕಾರಕ್ಕಿಲ್ಲವೆಂದು ತೀರ್ಪುನೀಡಿತು. ಇದಕ್ಕೆ ಮೊದಲು ಸರ್ಕಾರಿ ಇಲಾಖೆಯಲ್ಲಿ ದಿನಗೂಲಿಯಾಗಿ ಯಾರು ನಿರಂತರವಾಗಿ 10 ವರ್ಷಗಳ ಸೇವೆಯನ್ನು ಸಲ್ಲಿಸುತ್ತಾರೋ ಅವರನ್ನು ಖಾಯಂಗೊಳಿಸಬೇಕು ಎನ್ನುವ ತೀರ್ಪಿತ್ತು, ಎಷ್ಟೋ ದಿನಗೂಲಿ ಮತ್ತು ಗುತ್ತಿಗೆ ಆಧಾರದ ಮೇಲೆ ದುಡಿಯುತ್ತಿರುವ ಕಾರ್ಮಿಕರ ಬದುಕನ್ನು ಇದು ಅತಂತ್ರಗೊಳಿಸಿತು. ಇದು ಹೆಚ್ಚಾಗಿ ಪೌರಕಾರ್ಮಿಕರು ಸೇವೆ ಸಲ್ಲಿಸುತ್ತಿರುವ ನಗರಪೌರಾಡಳಿತ ಇಲಾಖೆಗೆ ಮತ್ತು ಇತರ ಇಲಾಖೆಗಳಲ್ಲಿ ಗುತ್ತಿಗೆ ಮತ್ತು ದಿನಗೂಲಿ ನೌಕರರಾಗಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗೆ ಶಾಶ್ವತ ಉದ್ಯೋಗ ಭರವಸೆಯನ್ನು ಕಸಿದುಕೊಂಡಿತು. ಇದು ದಲಿತ ಮಹಿಳೆಯರ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಏಕೆಂದರೆ; 80% ದಲಿತ ಮಹಿಳೆಯರು ಗುತ್ತಿಗೆ ಮತ್ತು ದಿನಗೂಲಿ ನೌಕರರಾಗಿ ಪೌರಾಡಳಿತ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

## ದಲಿತ ಮಹಿಳೆ ಮತ್ತು ಅವಳ ದೇಹ (ಲೈಂಗಿಕತೆ)

ಮನುಸ್ಮೃತಿಯ ಮೂರನೆಯ ಅಧ್ಯಾಯದ ವಚನ 13,

> "ಶೂದ್ರನಿಗೆ ಶೂದ್ರಳೇ ಹೆಂಡತಿಯಾಗಬೇಕು. ವೈಶ್ಯನಿಗೆ ವೈಶ್ಯ ಜಾತಿಯ ಹಾಗೂ ಶೂದ್ರ ಜಾತಿಯ ಹೆಣ್ಣಾಗಬಹುದು. ಕ್ಷತ್ರಿಯನಿಗೆ ಕ್ಷತ್ರಿಯ ಜಾತಿಯವಳು, ವೈಶ್ಯಜಾತಿಯವಳು ಶೂದ್ರಜಾತಿಯವಳು ಹಾಗೂ ಶೂದ್ರಳು ಹೆಂಡತಿಯಾಗ ಬಹುದು. ಬ್ರಾಹ್ಮಣನಿಗೆ ಬ್ರಾಹ್ಮಣ ಸ್ತ್ರೀಯೂ ಕ್ಷತ್ರಿಯಳೂ, ವೈಶ್ಯಳೂ ಶೂದ್ರಳೂ ಹೆಂಡತಿಯಾಗಬಹುದು".

ವಚನ 14ರಲ್ಲಿ

> "ಎಂಥಾ ಅನಿವಾರ್ಯವಾದ ಸಂದರ್ಭದಲ್ಲೂ ಬ್ರಾಹ್ಮಣ ಹಾಗು ಕ್ಷತ್ರಿಯ ವರಗಳು( ಗಂಡುಗಳು) ಶೂದ್ರ ಸ್ತ್ರೀಯನ್ನು ಪ್ರಥಮ ಹೆಂಡತಿ ಎಂದು ವಿವಾಹ ಮಾಡಿಕೊಳ್ಳಬಾರದು. (ಇಂಥ ಉದಾಹರಣೆಯು, ವೃತ್ತಾಂತವು ಎಲ್ಲಿಯೂ ಇಲ್ಲ)".

ಇನ್ನು ವಚನ 15ರಲ್ಲಿ

> "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಜಾತಿಗಳವರು ಮೋಹದ ಆವೇಶದಲ್ಲಿ ಹೀನ ಜಾತಿಯ(ಶೂದ್ರ) ಸ್ತ್ರೀಯನ್ನು ಪ್ರಥಮ ಹೆಂಡತಿಯೆಂದು ಮದುವೆ ಮಾಡಿಕೊಂಡರೆ ತಮ್ಮ ಕುಲ, ಸಂತಾನದೊಡನೆ ತಿರೋಹಿತರಾಗಿ ಶೂದ್ರತ್ವವನ್ನು ಹೊಂದುತ್ತಾರೆ" ಎಂದು ತಿಳಿಸುತ್ತದೆ.

ಈ ಮೇಲಿನ ವಚನಗಳ ಪ್ರಕಾರ ದಲಿತ ಮಹಿಳೆ ಮೇಲ್ಜಾತಿಯ ಪುರುಷನಿಗೆ ಹೆಂಡತಿಯಾಗಿರಲು ಅರ್ಹಳಲ್ಲ, ಅವಳ ಜೊತೆ ಯಾವ ಪುರುಷನಾದರೂ ಅನೈತಿಕ ಸಂಬಂಧವನ್ನು ಇರಿಸಿಕೊಳ್ಳಬಹುದು ಎಂಬ ಈ ನಿಯಮ ಶತಶತಮಾನಗಳಿಂದ ಇಂದಿನವರೆಗೂ ನಡೆದು ಬಂದಿದೆ. ಇದಕ್ಕೆ ಸಾಕ್ಷಿಯಾಗಿ ದೇವದಾಸಿ ಪದ್ಧತಿ ಮತ್ತು ವೇಶ್ಯಾವಾಟಿಕೆ ಜಾರಿಗೆ ಬಂದದ್ದು, ಈ ಪದ್ದತಿಯಲ್ಲಿ ಯಾವ ಪುರುಷನಾದರೂ – ಅದರಲ್ಲಿ ಮೇಲ್ಜಾತಿಯ ಪುರುಷನಿಗೆ ಪ್ರಾಧಾನ್ಯ ಜಾಸ್ತಿ–ದಲಿತ ಮಹಿಳೆಯ ಜೊತೆ ಲೈಂಗಿಕ ಸಂಬಂಧವನ್ನು ಇರಿಸಿಕೊಳ್ಳಬಹುದು. ಅವರಿಂದ ಮಕ್ಕಳಾದರೂ ಆ ಮಕ್ಕಳು ಕಾನೂನು ಸಮ್ಮತ ಮಕ್ಕಳಲ್ಲ ಅವರು, ತಮ್ಮ ತಾಯಿಯ ಜಾತಿಯಲ್ಲಿ ಮುಂದುವರಿಯಬೇಕಾಗುತ್ತದೆ. ಈ ರೀತಿಯಾಗಿ ದಲಿತ ಮಹಿಳೆಯ ಲೈಂಗಿಕತೆ, ಜಾತಿವ್ಯವಸ್ಥೆಯನ್ನು ಭದ್ರಪಡಿಸಬೇಕು ಎಂಬುವುದು ಅಂದಿನಿಂದ ಇಂದಿನವರೆಗೂ ಇರುವ ನಿಯಮ. ಜಾತಿ ಎಂಬ ಸೂತ್ರವು ದಲಿತ ಮಹಿಳೆಯ ಜೀವಿಸುವ ಹಕ್ಕನ್ನು ಲೈಂಗಿಕ ಗುಲಾಮಳನ್ನಾಗಿ ಮಾಡಿ ಅವಳ ದೇಹ ಸಾರ್ವಜನಿಕ ಸ್ವತ್ತು ಎಂಬ ಪರಿಕಲ್ಪನೆಯನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಎತ್ತಿ ಹಿಡಿದಿರುವುದನ್ನು ನಮ್ಮ ಸಮಾಜದಲ್ಲಿ ಮತ್ತು ಕಾನೂನುಗಳಲ್ಲಿ ಕಾಣಬಹುದು. ಎಂಬುವುದನ್ನು ಈ ಕೆಳಗಿನ ವಿಮರ್ಶೆ ಒಳಗೊಂಡಿದೆ.

ನಮ್ಮ ಸಂವಿಧಾನ ಅನುಚ್ಛೇದ 21 ಘನತೆಯಿಂದ ಜೀವಿಸುವ ಹಕ್ಕು ಮತ್ತು ಅನುಚ್ಛೇದ 23ರ ಶೋಷಣೆಯ ವಿರುದ್ಧದ ಹಕ್ಕನ್ನು ಮೂಲಭೂತಹಕ್ಕುಗಳನ್ನಾಗಿ ನೀಡುತ್ತದೆ. ಅನುಚ್ಛೇಧ 23ರ ಪ್ರಕಾರ ಮಹಿಳೆಯರನ್ನು, ಮಕ್ಕಳನ್ನು ಮಾರಾಟ ಮಾಡಬಾರದೆಂಬುವುದನ್ನು ಈ ಅನುಚ್ಛೇದಲ್ಲಿ ಪರಿಗಣಿಸಲಾಗಿದೆ. ಈ ಅನುಚ್ಛೇದದ ಅಡಿಯಲ್ಲಿಯೇ ಇಂದು ಕರ್ನಾಟಕ ದೇವದಾಸಿ ಪದ್ಧತಿ ನೀಷೇಧ ಕಾಯಿದೆ ಮತ್ತು ಇಮೊರಲ್ ಟ್ರಾಫಿಕ್ ಪ್ರಿವೆನ್‌ಷನ್(ಐ.ಟಿ.ಪಿ) ಕಾಯಿದೆಗಳನ್ನು ನಾವು ನೋಡಬಹುದು. ಈ ಕಾಯಿದೆಗಳ ಜಾರಿಯಲ್ಲಿ ಮತ್ತು ಅವುಗಳ ಅರ್ಥದಲ್ಲಿ ಆಗುತ್ತಿರುವ ಲೋಪ ದೋಷಗಳನ್ನು ನಾವು ಇಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ. ದೇವದಾಸಿ ಪದ್ಧತಿ ನಿಷೇಧ ಕಾಯಿದೆಯು ಅಷ್ಟು ಪರಿಣಾಮಕಾರಿ ಕಾಯಿದೆಯಾಗಿ ಪರಿಣಮಿಸಿಲ್ಲ. ಏಕೆಂದರೆ ಇದರಲ್ಲಿ ಮುಖ್ಯವಾಗಿ ದಲಿತ ಮಹಿಳೆಯ ಸಾಮಾಜಿಕ

ಶೈಕ್ಷಣಿಕ ಮತ್ತು ಆರ್ಥಿಕ ಅಸಮಾನತೆಯನ್ನು ಅಪರಾಧವೆಂದು ಸರಿಯಾಗಿ ಗುರ್ತಿಸಿಲ್ಲ. ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸುವ ಬೇರೆ ಜನರಿಗಿಂತ ಅವರ ತಂದೆ ತಾಯಿಗಳಿಗೆ ಹೆಚ್ಚಿನ ಶಿಕ್ಷೆಯಿದೆ ಇತ್ಯಾದಿ ದೋಷಗಳು ಈ ಕಾನೂನಿನಲ್ಲಿರುವುದರಿಂದ ಈ ಕಾಯಿದೆಯಡಿ ಶಿಕ್ಷೆಯಾಗಿರುವ ಪ್ರಕರಣಗಳು ತುಂಬ ಕಡಿಮೆ.

ದೇವದಾಸಿ ಪದ್ಧತಿ ನಿಷೇಧಕ್ಕೆ ಸರ್ಕಾರ ಯೋಜಿಸಿರುವ ಕಾರ್ಯಕ್ರಮಗಳನ್ನು ನೋಡುವುದಾದರೆ, ದೇವದಾಸಿಯರ ಕುಂಟುಂಬಕ್ಕೆ ಒಂದುಮನೆ, ಒಂದುಎಕರೆ ಜಮೀನು ನೀಡಿ ಬಟ್ಟೆಹೊಲಿಯುವ ಯಂತ್ರ ಮತ್ತು ಕರಕುಶಲ ತರಬೇತಿ ಎಂದು ಕೆಲವು ಸಣ್ಣ ಪುಟ್ಟ ಕಾರ್ಯಕ್ರಮ ಗಳನ್ನು ಮಾಡುವುದರಲ್ಲಿ ಮತ್ತು ಅವರನ್ನು ಮದುವೆ ಮಾಡಿಕೊಂಡವ ರಿಗೆ ಸ್ವಲ್ಪ ಮೊತ್ತದ ಹಣವನ್ನು ನೀಡುವುದರಲ್ಲಿ ಅವರ ಪುನರ್ವಸತಿ ಮುಗಿಯುತ್ತದೆ. ಈ ಕಾಯಿದೆಯಲ್ಲಾಗಲೀ ಯೋಜನೆಗಳಲ್ಲಾಗಲೀ ದಲಿತ ಮಹಿಳೆ ಎಲ್ಲರಂತೆ ಮನುಷ್ಯಳು, ಅವಳಿಗೂ ಘನತೆಯಿಂದ ಬದುಕುವ ಹಕ್ಕಿದೆ. ಜಾತಿ ಪದ್ಧತಿ, ತಪ್ಪು, ಜಾತಿ ಕಾರಣದಿಂದ ಅವಳನ್ನು ಲೈಂಗಿಕವಾಗಿ ದುರುಪಯೋಗ ಮಾಡುವುದು ಘೋರ ಅಪರಾಧ. ಅವಳು ಕೂಡ ಎಲ್ಲರಂತೆ ಎಲ್ಲರಲ್ಲಿ ಬೆರೆಯಬೇಕು ಎಂಬ ಅರಿವನ್ನು ಸರ್ಕಾರವಾಗಲೀ ಕಾಯಿದೆಯಾಗಲೀ ಪುನರ್ವಸತಿ ಎಂದು ಭಾವಿಸಿಲ್ಲ.

ಅದಕ್ಕಾಗಿ ಈ ಕಾಯಿದೆ ಬಂದಮೇಲೆ ದೇವದಾಸಿ ಪದ್ಧತಿ ನಿಂತು ಹೋಗಿ ವೇಶ್ಯಾವಾಟಿಕೆ ಹೆಚ್ಚುತ್ತಿದೆ. ಇಂದಿನ ಸರ್ಕಾರಗಳು ಉದಾರೀಕರಣ ಖಾಸಗೀಕರಣ ವಿಶೇಷ ಆರ್ಥಿಕ ವಲಯದಂತಹ ನೀತಿಗಳನ್ನು ಜಾರಿ ಮಾಡುವುದರಿಂದ ಸಾಮಾನ್ಯ ಜನರ ಅದರಲ್ಲೂ ಮಹಿಳೆಯರು ಮತ್ತು ದಲಿತ ಮಹಿಳೆಯರು ಬದುಕುಳಿಯುವುದನ್ನು ಅತಂತ್ರ ಸ್ಥಿತಿಗೆ ತಂದಿದೆ. ಹೀಗಾಗಿ ದೇವದಾಸಿ ಪದ್ಧತಿಯಲ್ಲಿದ್ದ ಅನೇಕ ಮಹಿಳೆಯರು ಕುಟುಂಬ ಮತ್ತು ಸಮಾಜದಿಂದ ವಂಚಿತರಾಗಿ ವೇಶ್ಯಾವಾಟಿಕೆಗೆ ಬರುತ್ತಿದ್ದಾರೆ. ಇದು ಇಂದು ಹಿಂದುಳಿದ ವರ್ಗಗಳ ಮಹಿಳೆಯರಲ್ಲೂ ಕಂಡುಬರುತ್ತದೆ. ಇಂದು ವೇಶ್ಯಾವಾಟಿಕೆಯಲ್ಲಿರುವ ದಲಿತ ಮಹಿಳೆಯರ ಸ್ಥಿತಿ ಎಷ್ಟೋ ಭಯಂಕರವಾಗಿದೆ ಎಂಬುವುದನ್ನು ನೀವು ಮುಂದಿನ ಅಂಶಗಳಲ್ಲಿ ಕಾಣಬಹುದು.

ವೇಶ್ಯಾವಾಟಿಕೆಯನ್ನು ದೇವದಾಸಿ ಪದ್ಧತಿಯೊಂದಿಗೆ ಹೋಲಿಸಿ ನೋಡುವ ಪ್ರಯತ್ನ ತಪ್ಪಾದರೂ, ಅದು ಇಲ್ಲಿ ಮುಖ್ಯವೆನಿಸುತ್ತದೆ. ಅಂದು ದೇವದಾಸಿ ಪದ್ಧತಿಯಂತಹ ಅನಿಷ್ಠ ಪದ್ಧತಿಗೂ ಕನಿಷ್ಠ ಒಂದು ರೀತಿಯ ಶಿಸ್ತು ಬದ್ಧ ನಿಯಮಗಳಿದ್ದವು . ಒಮ್ಮೆ ದೇವದಾಸಿ ಎಂದು ಕರೆದ ಮಹಿಳೆಗೆ ಅವರ ಕುಟುಂಬದಲ್ಲಿ ಪುರುಷನ ಹಾಗೆ ಆಸ್ತಿ ಹಕ್ಕು ಬರುತ್ತಿತ್ತು. ಕುಟುಂಬದಲ್ಲಿ ಅವಳಿಗೆ ಗೌರವದ ಸ್ಥಾನಮಾನವಿತ್ತು. ಅನೇಕ ಪ್ರಕರಣಗಳಲ್ಲಿ ದೇವದಾಸಿಯ ಹತ್ತಿರ ಬರುತ್ತಿದ್ದ ಪುರುಷ ಅವಳನ್ನು ಗೌರವಿಸುತ್ತಿದ್ದ ಮತ್ತು ಮದುವೆ ಮಾಡಿಕೊಳ್ಳದಿದ್ದರೂ ಗಂಡ ಹೆಂಡತಿಯಂತಹ ಸಂಬಂಧಗಳಲ್ಲಿ ಬಹಳ ವರುಷ ಬದುಕುತ್ತಿದ್ದರು. ಪೊಲೀಸರ ಮತ್ತು ಗಿರಾಕಿಗಳ ದೌರ್ಜನ್ಯ ಅವರ ಮೇಲೆ ಅಷ್ಟಾಗಿ ಇರಲಿಲ್ಲ. ಈ ಪದ್ಧತಿಯು ಕೂಡ ಕೆಲವು ಜಾತಿಯ ಮಹಿಳೆಯರಿಗೆ ಅದರಲ್ಲೂ ವಿಶೇಷವಾಗಿ ದಲಿತ ಮಹಿಳೆಯರಿಗೆ ಸೀಮಿತವಾಗಿತ್ತು. ಹಾಗಂತ ನಾವು ಇಲ್ಲಿ ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸುತ್ತಿದ್ದೇವೆ ಎಂದರೆ ತಪ್ಪಾಗುತ್ತದೆ. ಈ ರೀತಿಯ ಕನಿಷ್ಠ ಶಿಸ್ತು ಇಂದು ವೇಶ್ಯಾವಾಟಿಯಲ್ಲಿರುವ ಮಹಿಳೆಗೆ ದೊರೆಯ ದಿರುವುದು ಇಲ್ಲಿ ವಿಪರ್ಯಾಸ. ಇಂದು ವೇಶ್ಯಾವಾಟಿಕೆಯಲ್ಲಿ ದಲಿತ ಮಹಿಳೆ ಮಾತ್ರವಲ್ಲ ಹಿಂದುಳಿದ ಜಾತಿಯ ಮಹಿಳೆಯ ದೇಹವು ಸಾರ್ವಜನಿಕ ಆಸ್ತಿ, ಯಾರಾದರೂ ಇವರನ್ನು ಅನುಭೋಗಿಸಬಹುದು ಎಂಬ ಮನೋಭಾವನೆ ಎಲ್ಲರಲ್ಲೂ ಮೂಡುತ್ತಿದೆ. ವೇಶ್ಯಾವಾಟಿಕೆ ಯಲ್ಲಿರುವ ಮಹಿಳೆ ಬೇರೆ ಜಾತಿಯವಳಾಗಿದ್ದು ಅದನ್ನು ನಿರಾಕರಿಸಿದರೆ, ಅವಳಿಗೆ ಸಮಾಜದಲ್ಲಿ ಗೌರವ ದೊರೆಯುತ್ತದೆ. ಅದರೆ ದಲಿತ ಮಹಿಳೆ ಅದನ್ನು ನಿರಾಕರಿಸಿದರೆ ಅವಳ ಕೊಲೆ ಮತ್ತು ಅತ್ಯಾಚಾರಗಳು ತಪ್ಪಿದ್ದಲ್ಲ. ಇವರ ಮೇಲಿನ ಈ ಅನ್ಯಾಯ ಸಮಾಜಕ್ಕೆ ಅಷ್ಟು ಗಂಭೀರ ವಿಷಯ ಕೂಡ ಅಲ್ಲ. ಏಕೆಂದರೆ ಅವಳು ದಲಿತಳು, ಅವಳ ದೇಹ ಸಾರ್ವಜನಿಕ ಆಸ್ತಿ. ಯಾರಾದರೂ ಅವಳನ್ನು ಅನುಭವಿಸಬಹುದು. ಹಾಗಾಗಿ ಅವಳಿಗೆ ಸರಿಯಾದ ಶಿಕ್ಷೆಯಾಗಿದೆ ಎಂಬ ಭಾವನೆ ನಮ್ಮಲ್ಲಿದೆ. ಇಂತಹ ಪ್ರಕರಣದಲ್ಲಿ ಅವರಿಗೆ ನ್ಯಾಯವೇ ದೊರೆಯುವುದಿಲ್ಲ.

ಇಮ್ಮಾರಲ್ ಟ್ರಾಫಿಕ್ ಪ್ರಿವೆನಷನ್(ಐ.ಟಿ.ಪಿ) ಕಾಯಿದೆಯ ಮೂಲ ಉದ್ದೇಶ ವೇಶ್ಯಾವಾಟಿಕೆಗೆ ಮಹಿಳೆಯರನ್ನು ಮತ್ತು ಮಕ್ಕಳನ್ನು ತರದಂತೆ ನೋಡಿಕೊಳ್ಳುವುದು. ಈ ಕಾಯಿದೆಯಲ್ಲಿ ಯಾವುದೇ ರೀತಿಯ ದೌರ್ಜನ್ಯದಿಂದ ಮಹಿಳೆ ಈ ವೃತ್ತಿಗೆ ಬಂದರೆ ಅದಕ್ಕೆ ಕಾರಣವಾದವ ರನ್ನು ಶಿಕ್ಷಿಸಬೇಕು. ತಲೆಹಿಡುಕರನ್ನು, – ವೇಶ್ಯಾಗೃಹಗಳನ್ನು ನಡೆಸು ವವರನ್ನು ಬಂಧಿಸಬೇಕು ಎಂಬ ನಿಯಮವಿದೆ. ವೇಶ್ಯಾವೃತ್ತಿಗೆ ಬರುತ್ತಿರುವ ಬಹುತೇಕ ದಲಿತ ಮತ್ತು ಬಡ ಮಹಿಳೆಯರು ಆರ್ಥಿಕ ಸಾಮಾಜಿಕ ಕೌಟುಂಬಿಕ ದೌರ್ಜನ್ಯಗಳಿಗೆ ಒಳಾಗಾಗಿ ವಿಧಿ ಇಲ್ಲದೆ ಈ ವೃತ್ತಿಗೆ ಬಂದರೆ, ಅಂಥಹವರನ್ನು ಪೊಲೀಸರು ಐ.ಟಿ.ಪಿ ಕಾಯಿದೆಯ ಕಲಂ 8 (ಬಿ) ರಡಿಯಲ್ಲಿ ಅವರು ಸಾರ್ವಜನಿಕ ಸ್ಥಳಗಳಲ್ಲಿ ನಿಂತು ವೇಶ್ಯಾವಾಟಿಕೆಗೆ ಪ್ರಚೋದಿಸುತ್ತಿದ್ದಾರೆಂದು ಅವರನ್ನು ಬಂಧಿಸುತ್ತಾರೆ. ಬರೀ ಅವರ ಬಂಧನವಾದರೆ ಪರವಾಗಿಲ್ಲ, ಪೊಲೀಸರು ಅವರೊಡನೆ ನಡೆದುಕೊಳ್ಳುವ ವರ್ತನೆ ತೀರ ಪ್ರಾಣಿಗಳಿಗಿಂತ ಅಮಾನುಷಕರ ವಾಗಿರುವುದು. ಅವರ ಹತ್ತಿರ ಹಣ ಪಡೆಯುವುದು, ಅವರನ್ನು ಭಿಕ್ಷುಕರೆಂದು ಪಟ್ಟಕಟ್ಟಿ ಭಿಕ್ಷೆಬೇಡುವವರ ನಿಲಯಗಳಿಗೆ ಕಳುಹಿಸುವುದು. ಅವರೊಡನೆ ಪುಗಸಟ್ಟೆ ಸೆಕ್ಸ್ ಮಾಡುವುದು, ಇದಕ್ಕೆ ಒಪ್ಪದಿದ್ದರೆ ಅವರ ಮೇಲೆ ಸುಳ್ಳು ಕೇಸು ದಾಖಲಿಸುವುದು, ಅವರನ್ನು ಬೆದರಿಸುವುದು, ಅವರ ಗುಪ್ತಾಂಗಗಳಿಗೆ ಮೆಣಸಿನ ಪುಡಿಹಾಕುವುದು, ಮೊಲೆ ತೊಟ್ಟಿಗೆ ಕರೆಂಟ್ ಶಾಕ್ ಕೊಡುವುದು, ಮನಸ್ಸಿಗೆ ಬಂದಂತೆ ಹೊಡೆಯುವುದು, ಅವಾಚ್ಯವಾಗಿ ಬೈಯುವುದು ಮಾಡುತ್ತಾರೆ. ಇನ್ನು ಗಿರಾಕಿಗಳ ತೊಂದರೆ, ಗೂಂಡಾ ಪುಢಾರಿಗಳ ತೊಂದರೆಯಂತೂ ಹೇಳ ತೀರದು. ಇಂತಹ ದೌರ್ಜನ್ಯಗಳನ್ನು ತಡೆಯಲು ಇಂದು ನಮ್ಮಲ್ಲಿ ಯಾವ ಕಾಯಿದೆಯಾಗಲಿ ಮತ್ತು ಇಂತಹ ಮಹಿಳೆಯರ ಅರ್ಥಿಕ ಸಬಲೀಕರಣಕ್ಕೆ ಯಾವ ಸರ್ಕಾರೀ ಯೋಜನೆಗಳೂ ಇಲ್ಲ.

ಇನ್ನು ದಲಿತ ಮಹಿಳೆಯ ಮೇಲೆ ನಡೆಯುವ ಅತ್ಯಾಚಾರಗಳಿಗೆ ಕೋರ್ಟ್‌ಗಳು ನೀಡುವ ತೀರ್ಪುಗಳು ನ್ಯಾಯಾಧೀಶರ ಜಾತಿವಾದ ಮತ್ತು ದಲಿತ ಮಹಿಳೆಯ ದೇಹ ಸಾರ್ವಜನಿಕ ಸ್ವತ್ತು ಎನ್ನುವಂತಹ ಮನೋಭಾವನೆಯ ಜಗತ್ತಿನಲ್ಲಿ ಎಲ್ಲರೂ ತಲೆ ತಗ್ಗಿಸುವಂತಹ ವಿಚಾರವಾಗಿದೆ. ಉದಾಹರಣೆಗೆ ರಾಜಾಸ್ಥಾನದ ಜೈಪುರದ ಬನವಾರಿ ದೇವಿ ದಲಿತ ಮಹಿಳೆ. ಈಕೆ ಅಂಗನವಾಡಿ ಕಾರ್ಯಕರ್ತಳಾಗಿ ಬಾಲ್ಯ ವಿವಾಹವನ್ನು ತಡೆಯಲು ಹೋದಾಗ ಗುಜ್ಜಾರ್ ಜಾತಿಯ ಗಂಡಸರು ಬನವಾರಿದೇವಿಯ ಮೇಲೆ ಸಾಮೂಹಿಕ ಅತ್ಯಾಚಾರವನ್ನು ಮಾಡಿದರು. ಈ ಪ್ರಕರಣದಲ್ಲಿ ಜೈಪುರ್ ಸೆಷನ್ ಕೋರ್ಟ್ "ಬನವಾರಿ ದೇವಿಯು ದಲಿತ ಮಹಿಳೆ, ಅವಳನ್ನು ಈ ಮೇಲ್‌ಜಾತಿಯ ಪುರುಷರು ಅತ್ಯಾಚಾರ

ಮಾಡಿರುವುದಿಲ್ಲ. ಏಕೆಂದರೆ ಅವರು ಮರ್ಯಾದಸ್ಥ ಕುಟುಂಗಳಿಂದ ಬಂದವರು, ಬನವಾರಿ ದೇವಿ ಮಧ್ಯ ವಯಸ್ಕಳು ಮತ್ತು ಕುರೂಪಿ. ಅವಳ ಮೇಲೆ ಅತ್ಯಾಚಾರ ನಡೆದಿರುವುದಿಲ್ಲ" ಎಂಬ ತೀರ್ಪನ್ನು ನೀಡಿ ಅರೋಪಿಗಳನ್ನು ಬಿಡುಗಡೆ ಮಾಡಲಾಯಿತು. ದೇಶಾದ್ಯಂತ ಮಹಿಳಾ ಸಂಘಟನೆಗಳು ದಲಿತ ಸಂಘಟನೆಗಳು ಮಾನವ ಹಕ್ಕುಗಳ ಸಂರಕ್ಷಣೆಗೆ ಕೆಲಸ ಮಾಡುತ್ತಿರುವ ಸಂಘ ಸಂಸ್ಥೆಗಳು ಈ ತೀರ್ಪುನ್ನು ವಿರೋಧಿಸಿದವು. ಅದರೆ ಇದು ಬನವಾರಿದೇವಿಯ ಮೇಲೆ ಆದ ಜಾತಿಯ ಅವಮಾನಕ್ಕಿಂತ ಹೆಚ್ಚಾಗಿ ಕೆಲಸದ ಸ್ಥಳದಲ್ಲಿ ಮಹಿಳೆಗೆ ಅದ ಅನ್ಯಾಯವೆಂದು ಪ್ರಸಿದ್ಧಿ ಪಡೆಯಿತು. ಅದಕ್ಕಾಗಿ ಮಹಿಳಾ ಸಂಘಟನೆಗಳು ಮಹಿಳೆಯರು ಕೆಲಸ ಮಾಡುವ ಸ್ಥಳದಲ್ಲಿ ಘನತೆಯಿಂದ ಜೀವಿಸುವ ಹಕ್ಕು ಬೇಕು ಎಂದು ಸರ್ವೋಚ್ಚನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯನ್ನು ಹಾಕಿದರು. ಈ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯನ್ನು ಸರ್ವೋಚ್ಚನ್ಯಾಯಾಲಯ ಮನ್ನಣೆಮಾಡಿದ್ದಕ್ಕೆ ಇಂದು ಕೆಲಸ ಮಾಡುತ್ತಿರುವ ಸ್ಥಳಗಳಲ್ಲಿ ಮಹಿಳೆಯನ್ನು ಲೈಂಗಿಕ ಕಿರುಕುಳದಿಂದ ತಡೆಯುವ ಕಾಯಿದೆ – 1992 ಬಂದಿದೆ. ಇದು ದಲಿತ ಮಹಿಳೆಗಿಂತ ಹೆಚ್ಚಾಗಿ ಬೇರೆ ಜಾತಿಯ ಮಹಿಳೆಗೆ ಅನುಕೂಲವಾಗಿದೆ. ಏಕೆಂದರೆ ಬಹುತೇಕ ದಲಿತ ಮಹಿಳೆಯರು ಅಸಂಘಟಿತ ಕಾರ್ಮಿಕ ವಲಯದಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಅವರಿಗೆ ಈ ಕಾನೂನು ಸೂಕ್ತವಾಗಿ ಅನ್ವಯಿಸುವುದಿಲ್ಲ. ಈ ಪ್ರಕರಣದಲ್ಲಿ ಯಾರೂ ಕೂಡ ಬನವಾರಿ ದೇವಿಯು ದಲಿತಳಾದ ಕಾರಣ ಅವಳ ಮೇಲೆ ಸೇಡಿನ ಪ್ರತೀಕಾರವಾಗಿ ಸುಲಭವಾಗಿ ಅತ್ಯಾಚಾರವಾಯಿತು ಎಂದು ಗುರ್ತಿಸಲಿಲ್ಲ. ಕೆಳ ನ್ಯಾಯಾಲಯದ ತೀರ್ಪಿನಲ್ಲಿ ಜಾತಿ ನಿಂದನೆ ಎದ್ದು ಕಂಡರೂ ಆ ನ್ಯಾಯಾಧೀಶರ ಮೇಲೆ ಯಾವ ಎಸ್‌ಸಿ., ಎಸ್.ಟಿ ಕಾಯಿದೆ ಅನ್ವಯಿಸಲಿಲ್ಲ. ನಮ್ಮ ದೇಶದ ದಲಿತ ಮಹಿಳೆಯರ ಮೇಲಿನ ಅತ್ಯಾಚಾರಗಳನ್ನು ಸೂಕ್ಷ್ಮವಾಗಿ ಗಮನಿಸುವಾಗ ಇಂಥ ಪ್ರಕರಣಗಳು ದಲಿತ ಮಹಿಳೆ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯವನ್ನು ಪ್ರತಿಭಟಿಸಿದಾಗ ಅವಳ ಮೇಲೆ ಅತ್ಯಾಚಾರ ಅವಮಾನ ಕೊಲೆ ನಡೆಯುತ್ತದೆ. ಅದು ಮೇಲ್ಜಾತಿಯ ಜನರ ಪ್ರತೀಕಾರದ ಸಂಕೇತವಾಗಿರುತ್ತದೆ ಎಂದು ಸ್ಪಷ್ಟವಾಗುತ್ತದೆ.

1989ರ ಸುಮನ್ ರಾಣಿ ವಿರುದ್ಧ ಹರಿಯಾಣ ರಾಜ್ಯದ ಮೊಕದ್ದಮೆಯಲ್ಲಿ ಸುಮನ್ ರಾಣಿ ಎನ್ನುವ ಮಹಿಳೆಯನ್ನು ಪೊಲೀಸರು ಕರ್ತವ್ಯದಲ್ಲಿದ್ದಾಗಲೇ ತಮ್ಮ ವಶದಲ್ಲಿದ್ದ ಅವಳನ್ನು ಅತ್ಯಾಚಾರ ಮಾಡಿರುತ್ತಾರೆ. ಅದಕ್ಕೆ ಅಲ್ಲಿನ ಸೆಷನ್ಸ್ ಕೋರ್ಟ್ ಆರೋಪಿಗಳನ್ನು ಬಿಡುಗಡೆಮಾಡಿತ್ತು. ಈ ತೀರ್ಪನ್ನು ಹೈಕೋರ್ಟ್ ಪ್ರಶ್ನಿಸಿ ಹೈಕೋರ್ಟಿನಲ್ಲಿ ಅರ್ಜಿಯನ್ನು ಹಾಕಿದಾಗ ಹೈಕೋರ್ಟ್ ಅರೋಪಿಗಳಿಗೆ 10 ವರ್ಷಗಳ ಸೆರೆವಾಸವನ್ನು ವಿಧಿಸಿತ್ತು. ಆಗ ಅರೋಪಿಗಳು ಈ ಪ್ರಕರಣವನ್ನು ಪುನಃ ಸರ್ವೋಚ್ಚನ್ಯಾಯಾಲಯದಲ್ಲಿ ಮರುಪರಿಶೀಲನೆಗೆ ಅರ್ಜಿಯನ್ನು ಹಾಕಿಕೊಂಡಾಗ ಸುಪ್ರೀಂಕೋರ್ಟ್ ಅರ್ಜಿಯನ್ನು ಮಾನ್ಯ ಮಾಡಿ ಹೈಕೋರ್ಟಿನ ತೀರ್ಪನ್ನು ತಿದ್ದುಪಡಿಮಾಡಿ ಆರೋಪಿಗಳಿಗೆ ಹೈಕೋರ್ಟ್ ವಿಧಿಸಿದ 10 ವರ್ಷಗಳ ಶಿಕ್ಷೆಯನ್ನು ಐದು ವರ್ಷಗಳಿಗೆ ಕಡಿಮೆ ಮಾಡಿತು. ಅದಕ್ಕೆ ಸರ್ವೋಚ್ಚನ್ಯಾಯಾಲಯ ನೀಡಿದ ಕಾರಣವೇನೆಂದರೆ, "ಸುಮನ್ ರಾಣಿಯ ನಡತೆಯನ್ನು ನಾವು ಇಲ್ಲಿ ಪ್ರಶ್ನಿಸಬೇಕಾಗುತ್ತದೆ. ಎಕೆಂದರೆ ಅವಳೂ ಕಾಮುಕಳು ಮತ್ತು ವ್ಯಭಿಚಾರಿ" ಎಂದು ಪರಿಗಣಿಸಿ ಕಾನೂನು ಪ್ರಕಾರ ಕಸ್ಟೋಡಿಯಲ್ ಅತ್ಯಾಚಾರ ಆರೋಪಿಗಳಿಗೆ 10 ವರ್ಷದ ಸೆರೆವಾಸವನ್ನು ಐದು ವರ್ಷಕ್ಕೆ ಕಡಿಮೆ ಮಾಡಲಾಯಿತು. ಹೀಗೆ ನ್ಯಾಯಾಂಗವು ಕೂಡ ಮನುಸ್ಮೃತಿಯಂತೆ ದಲಿತ ಮಹಿಳೆಯರನ್ನು ವೇಶ್ಯೆಯರು ಎಂದು ಗುರ್ತಿಸುತ್ತದೆ.

ಹಾಗಾಗಿ ಕೋರ್ಟುಗಳಲ್ಲಿ ದಲಿತ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ, ಕೊಲೆ, ಅವಮಾನ ಈ ಪ್ರಕರಣಗಳಲ್ಲಿ ಸ್ವಲ್ಪ ಮಟ್ಟಿಗಾದರೂ ನ್ಯಾಯ ದೊರೆಯಬೇಕೆಂದರೆ, ಬನವಾರಿದೇವಿ ಮತ್ತು ಕೈರಲಾಂಜಿಯಂತಹ ದೊಡ್ಡ ಪ್ರಕರಣಗಳಲ್ಲಿ ಪೊಲೀಸರ ಮೇಲೆ ಮತ್ತು ನ್ಯಾಯಾಂಗದ ಮೇಲೆ ಜನರು ಒತ್ತಡವನ್ನು ತಂದಾಗ ಮಾತ್ರ ಪೊಲೀಸರು ಕೇಸನ್ನು ದಾಖಲಿಸುತ್ತಾರೆ. 2006ರ ಕ್ರೈಮ್ ಬ್ಯೂರೋ ವಾರಕ್ಕೆ ಮೂರು ದಲಿತ ಮಹಿಳೆಯರ ಮೇಲೆ ಅತ್ಯಾಚಾರಗಳು ನಡೆಯುತ್ತವೆ ಎನ್ನುತ್ತದೆ. ಈ ರೀತಿ ದಾಖಲಾದ ಪ್ರಕರಣಗಳಲ್ಲಿ ಶಿಕ್ಷೆಯಾಗುವುದು ಕೇವಲ 2%. ಶಿಕ್ಷೆ ಕೂಡ ಪರಿಶಿಷ್ಟಜಾತಿ ಮತ್ತು ಪಂಗಡಗಳ ಕಾಯಿದೆಯಲ್ಲಿ ಆಗದೆ, ಸಾಮಾನ್ಯ ಕಾಯಿದೆ ಐ.ಪಿ.ಸಿಯಲ್ಲಿ ಆಗಿರುತ್ತವೆ. ಇದಕ್ಕೆ ಉದಾಹರಣೆಗೆ ಬನವಾರಿದೇವಿ ಪ್ರಕರಣ ಮತ್ತು ಕೈರಲಾಂಜಿಯಂತಹ ಪ್ರಸಿದ್ಧ ಪ್ರಕರಣಗಳಲ್ಲೂ ಕೂಡ ಪೋಲಿಸರು ಎಸ್.ಸಿ ಮತ್ತು ಎಸ್.ಟಿ ದೌರ್ಜನ್ಯಕಾಯಿದೆಗಳಡಿಯಲ್ಲಿ ಪ್ರಕರಣಗಳನ್ನು ದಾಖಲಿಸದಿರುವುದು ಸಾಕೆನಿಸುತ್ತದೆ. ಹೀಗೆ ದಲಿತ ಮಹಿಳೆ ದೇಹ (ಲೈಂಗಿಕತೆ) ಗೌರವವಿಲ್ಲ ಎಂಬುವುದನ್ನು ಒತ್ತಿಒತ್ತಿ ಹೇಳುತ್ತಿವೆ. ಹಾಗಾದರೆ ಅವಳು ಘನತೆಯಿಂದ ಜೀವಿಸುವ ಹಕ್ಕು ಯಾವುದರಲ್ಲಿ ಅಡಗಿದೆ ಎನ್ನುವುದು ಪ್ರಶ್ನೆಯಲ್ಲವೆ?

## ದಲಿತ ಮಹಿಳೆ ಮತ್ತು ಹಿಂದೂವಿವಾಹ ಕಾಯಿದೆ.

'ಅಂತರ್ಜಾತಿ ವಿವಾಹ ಜಾತಿ ಪದ್ಧತಿಯನ್ನು ಬೇರು ಸಹಿತ ಕಿತ್ತು ಹಾಕುತ್ತದೆ.''

ಬಾಬ ಸಾಹೇಬ್ ಅಂಬೇಡ್ಕರರು 1930ರಲ್ಲಿ ಕಾನೂನು ಮಂತ್ರಿಯಾಗಿದ್ದಾಗ ಮಹಿಳೆಯ ಸಮಾನತೆ, ಅದರಲ್ಲಿ ದಲಿತ ಮಹಿಳೆಯ ಸಮಾನತೆ ಮತ್ತು ಘನತೆಯಿಂದ ಜೀವಿಸುವ ಹಕ್ಕಿನ ಬಗ್ಗೆ ತುಂಬ ಗಂಭೀರವಾಗಿ ಅಧ್ಯಯನ ಮಾಡಿದರು. ಅವರಿಗೆ ಎರಡು ಅಂಶಗಳಲ್ಲಿ ಸ್ಪಷ್ಟತೆ ಇತ್ತು. ಜಾತಿ ಪದ್ಧತಿಯ ನಿರ್ಮೂಲನೆ ಮತ್ತು ಮಹಿಳೆಯ ಸಮಾನತೆ ದೇಶದ ಅಭಿವೃದ್ಧಿಗೆ ಪೂರಕವಾದ ಅಂಶಗಳು ಎಂದು ಅವರು ಸಂಪೂರ್ಣವಾಗಿ ನಂಬಿದ್ದರು. ಆದ್ದರಿಂದ ಅವರು ತಾವು ಕಾನೂನು ಮಂತ್ರಿಗಳಾಗಿದ್ದಾಗ ಹಿಂದೂ ಕೋಡ್ ಬಿಲ್‌ಅನ್ನು ಜಾರಿಗೆ ತರಲು ತುಂಬ ಪ್ರಯತ್ನ ಪಟ್ಟರು. ವಿವಾಹಗಳಲ್ಲಿ ಅಂತರ್ಜಾತೀಯ ವಿವಾಹಗಳನ್ನು ಉತ್ತೇಜಿಸುವುದರಿಂದ ಜಾತಿಪದ್ಧತಿಯನ್ನು ನಿರ್ಮೂಲ ಮಾಡಲು ಸಾಧ್ಯವೆಂದು ಅವರು ದೃಢವಾಗಿ ನಂಬಿ ಅದನ್ನು ಪಾಲಿಸಿದರು. ತಮ್ಮ ಜೀವನದಲ್ಲಿ ಸವಿತಾ ಎಂಬ ಬ್ರಾಹ್ಮಣ ವೈದ್ಯಳನ್ನು ತಮ್ಮ ಹೆಂಡತಿ ರಮಾಬಾಯಿಯ ನಿಧನದ ನಂತರ ವಿವಾಹ ಮಾಡಿಕೊಳ್ಳುವುದರ ಮೂಲಕ ಅದನ್ನು ಕ್ರಿಯೆಯಲ್ಲಿ ಸಾಬೀತುಪಡಿಸಿದ್ದು ಒಂದಡೆಯಾದರೆ,

ಇನ್ನೊಂದಡೆ, ಹಿಂದೂ ವಿವಾಹ ಪದ್ಧತಿಯಲ್ಲಿರುವ ಸ್ವ-ಜಾತಿ ವಿವಾಹವನ್ನು ರದ್ದು ಪಡಿಸಬೇಕೆಂದು ಅವರು ಹಿಂದೂ ಕೋಡ್ ಬಿಲ್ ನಲ್ಲಿ-1930ನ್ನು ಪ್ರಬಲವಾಗಿ ಪ್ರತಿಪಾದಿಸಿದರು. ಮಹಿಳೆಯ ಸಮಾನತೆ ಅಂಶಗಳಾದ ಅಂತರ್ಜಾತಿ ವಿವಾಹ, ಮಹಿಳೆಯರಿಗೆ ಆಸ್ತಿ ಹಕ್ಕು, ಜೀವನಾಂಶ, ವಿಚ್ಛೇದನ, ದತ್ತಕ ಹಕ್ಕು, ವಿಧವೆಯರ ಮರು

ವಿವಾಹ ಈ ಅಂಶಗಳನ್ನು ಮಹಿಳೆಯರ ಪರವಾಗಿ ಪ್ರಬಲವಾಗಿ ಪ್ರತಿಪಾದಿಸಿದ ಡಾ. ಅಂಬೇಡ್ಕರರ ವಿರುದ್ಧ ತೀವ್ರ ಪ್ರತಿರೋಧಗಳು ಹಿಂದೂ ಮೇಲ್ಜಾತಿಗಳಿಂದ ಬಂದವು. ಈ ಪ್ರತಿರೋಧಗಳು ಹಿಂದೂ ಕೋಡ್ ಬಿಲ್ಲನ್ನು ಸುಟ್ಟುಹಾಕುವುದರಿಂದ ಅಂಬೇಡ್ಕರರಿಗೆ ಜೀವ ಬೆದರಿಕೆಯವರೆಗೂ ನಡೆದವು. ಈ ವಿರೋಧಗಳನ್ನು ವ್ಯಕ್ತಪಡಿಸಿರುವವರಲ್ಲಿ ನಮ್ಮ ದೇಶದ ಆಗಿನ ರಾಷ್ಟ್ರನಾಯಕರೂ ಇದ್ದರು ಎಂಬುವುದು ವಿಪರ್ಯಾಸ. ಈ ವಿರೋಧಗಳ ಒತ್ತಡದಿಂದ ಅಂಬೇಡ್ಕರರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆಯನ್ನು ನೀಡಬೇಕಾಯಿತು.

ಆದರೆ, ಅಂದು ಜಾರಿಗೆ ಬರಬೇಕಾಗಿದ್ದ ಹಿಂದೂ ಕೋಡ್ ಬಿಲ್ ಜಾರಿಗೆ ಬರದೆ, ಅದು 1955ರಲ್ಲಿ ಹಿಂದೂವಿವಾಹ ಕಾಯಿದೆಯಾಗಿ ಜಾರಿಗೆ ಬಂತು. ಹೀಗೆ ಹಿಂದೂ ವಿವಾಹ ಕಾಯಿದೆಯಾಗಿ ಜಾರಿಗೆ ಬಂದ ಬಿಲ್‌ನಲ್ಲಿ ಅನೇಕ ತಿದ್ದುಪಡಿಗಳಾಗಿ ಇಂದು ಅದು ಬ್ರಾಹ್ಮಣರಿಗೆ ಮತ್ತು ಇತರ ಮೇಲ್ಜಾತಿಯವರಿಗೆ ಅನೂಕೂಲವಾಗುವಂತಹ ವಿವಾಹ ಕಾಯಿದೆಯಾಗಿದೆ. ಈ ಅಂಶವನ್ನು ಸಾಬೀತು ಪಡಿಸಲು ನಮಗೆ ಎಷ್ಟೋ ಆಧಾರಗಳು ಈ ಕಾಯಿದೆಯಲ್ಲಿ ಲಭಿಸುತ್ತವೆ. ಉದಾಹರಣೆಗೆ ಕಲಂ 2ರ ಪ್ರಕಾರ ಈ ಕಾಯಿದೆ ಯಾರಿಗೆ ಅನ್ವಯಿಸುತ್ತದೆ ಎಂದರೆ, "ಯಾವ ವ್ಯಕ್ತಿ ಧಾರ್ಮಿಕವಾಗಿ ಹಿಂದೂವಾಗಿರುತ್ತಾನೋ, ವೀರಶೈವ ಲಿಂಗಾಯತ ಮತಕ್ಕೆ ಸೇರಿರುತ್ತಾನೋ, ಬ್ರಹ್ಮಸಮಾಜದ ಅನುಯಾಯಿಯಾಗಿರುತ್ತಾನೋ ಅವರಿಗೆ ಮತ್ತು ಸಿಖ್ಖರಿಗೆ ಜೈನ ಮತ್ತು ಬೌದ್ಧ ಧರ್ಮವನ್ನು ಅನುಸರಿಸುವವರಿಗೆ ಈ ಕಾಯಿದೆ ಅನ್ವಯಿಸುತ್ತದೆ ಎಂದು ತಿಳಿಸುತ್ತದೆ. ಮತ್ತೆ ಮುಂದುವರೆದು "ಯಾರು ಮುಸ್ಲಿಂ ಮತ್ತು ಕ್ರೈಸ್ತರಲ್ಲವೋ, ಅವರು ಯಾವುದೇ ಹಿಂದೂ ಧರ್ಮದ ಆಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬಂದಿರುತ್ತಾರೋ ಅವರಿಗೆಲ್ಲ ಈ ಕಾನೂನು ಅನ್ವಯಿಸುತ್ತದೆ". ಈ ಕಾಯಿದೆಯ ಪ್ರಕಾರ 'ಹಿಂದೂ' ಎನ್ನುವ ಅರ್ಥವೇ ಸ್ಪಷ್ಟವಾಗಿಲ್ಲ. ಕ್ರೈಸ್ತರನ್ನು, ಮುಸ್ಲಿಮರನ್ನು ಹೊರತು ಪಡಿಸಿ ಉಳಿದ ಎಲ್ಲ ಧರ್ಮದವರನ್ನೂ 'ಹಿಂದೂ' ಎನ್ನುವ ವ್ಯಾಖ್ಯಾನ ಒಳಗೊಂಡಿದೆ. ಇನ್ನೂ ಮುಂದುವರೆದು ಅದು ತಿಳಿಸುವುದೇನೆಂದರೆ, ಯಾರು ಹಿಂದೂ ಧರ್ಮದ ಆಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬಂದಿರುತ್ತಾರೋ ಅವರನ್ನು 'ಹಿಂದೂ'ಗಳೆಂದು ಗುರ್ತಿಸಲಾಗಿದೆ. ಹಿಂದೂ ಆಚರಣೆ ಮತ್ತು ಸಂಪ್ರದಾಯಗಳೇನೆಂದು ಈ ಕಾಯಿದೆಯ ಪ್ರಕಾರ ನೋಡುವಾಗ, ಕಲಂ 7 (2) "ಹಿಂದೂ ವಿವಾಹವು ಅದರ ಸಂಪ್ರದಾಯದ ಸಪ್ತಪದಿಯ ಏಳನೆಯ ಹೆಜ್ಜೆ ಇಡುವುದರ ಮೂಲಕ ಕೊನೆಗೊಳ್ಳುತ್ತದೆ" ಎಂದು ತಿಳಿಸುತ್ತದೆ. ಈ ವಿವಾಹ ಅಚರಣೆಯ ಸಂಪ್ರಾದಾಯವನ್ನು ಬರೀ ಮೇಲ್ಜಾತಿಯ ಹಿಂದೂಗಳಾದ ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಮಾಡುವಂಥದ್ದು. ಹಿಂದೂ ವ್ಯಾಖ್ಯಾನದಲ್ಲಿ ಬರುವ ಇತರ ಹಿಂದೂಗಳು ಅದರಲ್ಲಿ ದಲಿತರಂತೂ ಈ ಸಂಪ್ರದಾಯವನ್ನು ಮಾಡುವುದೇ ಇಲ್ಲ.

ಈ ಸಪ್ತಪದಿಯ ಏಳನೆ ಹೆಜ್ಜೆ ಮುಗಿದಾಗ ಮದುವೆ ಕೊನೆಗೊಳ್ಳುತ್ತದೆ ಎನ್ನುವ ವಿಚಾರ ಬೇರೆ ಹಿಂದೂಗಳನ್ನು ಎಷ್ಟು ಗೊಂದಲಕ್ಕೆ ಈಡು ಮಾಡಿದೆ ಎಂದರೆ, ವೈವಾಹಿಕ ಪ್ರಕರಣಗಳು ಕೋರ್ಟಿನಲ್ಲಿ ಸಾಬೀತಾಗಬೇಕಾದರೆ, ದಂಪತಿಗಳು 'ಸಪ್ತಪದಿಯನ್ನು' ಅಂದರೆ ಅಗ್ನಿಯಸುತ್ತ ಏಳುಹೆಜ್ಜೆಗಳನ್ನು ಮುಗಿಸಿರುವುದಾಗಿ ಸಾಬೀತು ಪಡಿಸಬೇಕು. ಇದನ್ನು ಸಾಬೀತು ಪಡಿಸದ ಎಷ್ಟೋ ಹಿಂದೂ ವಿವಾಹಗಳ ಪ್ರಕರಣಗಳು ಅನೂರ್ಜಿತ ವಿವಾಹಗಳೆಂದು ಮಹಿಳೆಯರಿಗೆ ನ್ಯಾಯ ಸಿಗದೆ ಹೋಗಿದೆ. ಅದಕ್ಕಾಗಿ ಅಂತರ್ಜಾತಿ ಮತ್ತು ಅಂತರ್‌ಧರ್ಮ ವಿವಾಹಗಳು ಸಿವಿಲ್ ಮ್ಯಾರೇಜ್ ಆಕ್ಟ್ ಮತ್ತು ಸ್ಪೆಷಲ್ ಮ್ಯಾರೇಜ್ ಆಕ್ಟ್‌ನಲ್ಲಿ ಮದುವೆ ಮಾಡಿಕೊಳ್ಳಬೇಕಾಗುತ್ತದೆ. ಈರೀತಿ ಹಿಂದೂ ಮೇಲ್ಜಾತಿಯ ಹಲವಾರು ವಿವಾಹ ಸಂಪ್ರದಾಯಗಳು ಮಹಿಳೆಯರ ಶೋಷಣೆಗೆ ಕಾರಣವಾಗಿವೆ. ಈ ಸಂಪ್ರದಾಯಗಳಲ್ಲಿ ವರದಕ್ಷಿಣೆ, ಮಹಿಳೆ ಮದುವೆಯ ನಂತರ ಗಂಡನ ಮನೆಯಲ್ಲಿರಬೇಕು ಎನ್ನುವ ಕಡ್ಡಾಯ ಇತ್ಯಾದಿ ಸಂಪ್ರದಾಯಗಳು ಪರೋಕ್ಷವಾಗಿ ಹಿಂದೂ ಮೇಲ್ಜಾತಿಯ ವಿವಾಹ ಸಂಪ್ರದಾಯಗಳಾಗಿ ಅರ್ಥೈಸಿ ಆಚರಣೆಯಲ್ಲಿರುವುದರಿಂದ ಮಹಿಳೆಯ ಮದುವೆಯ ಜೀವನವು ಭಯಾನಕವಾಗಿದೆ. ಮೇಲ್ಜಾತಿ ಹಿಂದೂವಿವಾಹ ಸಂಪ್ರದಾಯಗಳು ದಲಿತರ ಮತ್ತು ಹಿಂದುಳಿದವರ ಮದುವೆ ಸಂಪ್ರದಾಯ ಪದ್ಧತಿಗಳನ್ನು ನಾಶಪಡಿಸುತ್ತಿವೆ. ಸಪ್ತಪದಿಯಂತಹ ಸಂಪ್ರದಾಯಗಳನ್ನು ಉದಾಹರಣೆಯಾಗಿ ತೆಗೆದುಕೊಂಡು ಮಹಿಳೆಯನ್ನು ಅತಂತ್ರಸ್ಥಿತಿಗೆ ತರುವುದಕ್ಕಿಂತ ಮಹಿಳೆಯ ಸಬಲೀಕರಣಕ್ಕೆ ಪೂರಕವಾಗುವ ಎಲ್ಲ ಜಾತಿಯ ವಿವಾಹ ಸಂಪ್ರದಾಯಗಳನ್ನೂ ಈ ಕಾಯಿದೆ ಒಳಗೊಳ್ಳುವುದು ಮುಖ್ಯವಾಗಿದೆ.

ದಲಿತರ ವಿವಾಹ ಸಂಪ್ರದಾಯಗಳಲ್ಲಿ ಎಷ್ಟೋ ಸಂಪ್ರದಾಯಗಳು ಮಹಿಳೆಯರ ಸಬಲೀಕರಣಕ್ಕೆ ಪೂರಕವಾದ ಅಂಶಗಳಿವೆ. ಅದರಲ್ಲಿ ಮುಖ್ಯವಾದದ್ದು, ದಲಿತರ ವಿವಾಹ ಸಂಪ್ರದಾಯದಲ್ಲಿ ವರದಕ್ಷಿಣೆಗೆ ಬದಲಾಗಿ ವಧೂದಕ್ಷಿಣೆ(ತೆರವು) ಕೊಡುವ ಸಂಪ್ರದಾಯುವಿದೆ. ಇಂತಹ ಸಂಪ್ರದಾಯಗಳು ಸಮಾಜಕ್ಕೆ ಮತ್ತು ಮಹಿಳೆಯರಿಗೆ ಪೂರಕವಾಗುವ ಅಂಶಗಳು. ಈ ಅಂಶಗಳನ್ನು ಈ ಕಾಯಿದೆ ಎಲ್ಲಿಯೂ ಗುರ್ತಿಸುವುದಿಲ್ಲ.

ಈ ಕಾಯಿದೆಯು ಎಲ್ಲಿಯೂ ಅಂತರ್ಜಾತಿ ವಿವಾಹವನ್ನು ನಮೂದಿಸುವುದಿಲ್ಲ. ಹಿಂದೂ, ದಲಿತ ಮತ್ತು ಹಿಂದುಳಿದ ಜಾತಿಗೆ ಸೇರಿದ ಮಹಿಳೆ ಒಬ್ಬ ಮೇಲ್ಜಾತಿಯ ಪುರುಷನನ್ನು ಅಥವಾ ಒಂದು ಮೇಲ್ಜಾತಿಯ ಪುರುಷ ದಲಿತ ಮತ್ತು ಹಿಂದುಳಿದ ಜಾತಿಗೆ ಸೇರಿದ ಮಹಿಳೆಯನ್ನು ವಿವಾಹವಾಗಬೇಕಾದರೆ, ಈ ಕಾಯಿದೆಯಲ್ಲಿ ಮೇಲೆ ತಿಳಿಸಿದ ವಿವಾಹ ಸಂಪ್ರದಾಯಗಳು ಅಡ್ಡಿಯಾಗುತ್ತವೆ. ಇಲ್ಲಿ ಪುನಃ ಅಂತರ್ಜಾತಿ ವಿವಾಹ ಮಾಡಿಕೊಳ್ಳಬೇಕಾಗಿರುವ ಜೋಡಿಗಳಿಗೆ ಹಿಂದೂ ವಿವಾಹ ಕಾಯಿದೆಯಡಿಯ ಯಾವ ಸಂಪ್ರದಾಯದಂತೆ ಮಾಡಿಕೊಳ್ಳಬೇಕು ಎನ್ನುವ ಪ್ರಶ್ನೆ ಉದ್ಭವವಾಗುವುದರಿಂದ ಅವರು ಸಿವಿಲ್ ಮ್ಯಾರೇಜ್ ಆಕ್ಟ್‌ನಲ್ಲಿ ಮದುವೆಯಾಗಬೇಕಾಗುತ್ತದೆ. ಅಂತರ್ಜಾತಿ ವಿವಾಹಗಳಲ್ಲಿ ಕೂಡ ದಲಿತ ಮಹಿಳೆ ಮೇಲ್ಜಾತಿಯ ಪುರುಷನೊಂದಿಗೆ ಆಗಲೀ, ದಲಿತಪುರುಷ ಮೇಲ್ಜಾತಿಯ ಮಹಿಳೆಯೊಂದಿಗಾಗಲೀ ಮದುವೆಯಾಗುವ ಉದಾಹರಣೆಗಳು ತೀರ ಕಡಿಮೆ. ಅಂತರ್ಜಾತಿ ವಿವಾಹಗಳು ಕೂಡ ದಲಿತರಲ್ಲದ ಜಾತಿಗಳೊಂದಿಗೆ ನಡೆಯುವುದನ್ನು ಹೆಚ್ಚಾಗಿ ಕಾಣುತ್ತೇವೆ. ದಲಿತರಲ್ಲದ ಜಾತಿಗಳ ಮಧ್ಯ ನಡೆಯುವ ಅಂತರ್ಜಾತೀಯ ವಿವಾಹಗಳಿಗೇ ಎಷ್ಟೊ ಅಡ್ಡಿಗಳು ಬರುತ್ತವೆ ಇನ್ನು ದಲಿತರು, ಅದರಲ್ಲೂ ದಲಿತ ಮಹಿಳೆ ಅಂತರ್ಜಾತಿ ವಿವಾಹದ ಬಗ್ಗೆ ಯೋಚನೆ ಮಾಡಿದರೆ! ದಲಿತ ಮಹಿಳೆ ಮತ್ತು ಪುರುಷ ಮೇಲ್ಜಾತಿಯವರೊಡನೆ ವಿವಾಹವಾಗುವುದು ದಲಿತ ಕುಟುಂಬಗಳಲ್ಲಿ ಪ್ರತಿಷ್ಠೆಗಿಂತ ಸಮಾಜದಿಂದ ಬಹಿಷ್ಕಾರ ಮತ್ತು ಕುಟುಂಬದವರ ಪ್ರಾಣಕ್ಕೆ ಭಯ, ಅತ್ಯಾಚಾರ, ಅವರ ನಡತೆಯ ಪಶ್ನೆಗಳು ಎದ್ದು, ಅವು ತೀವ್ರ ಅಮಾನುಷವಾಗಿರುತ್ತವೆ. ಇದಕ್ಕೆ ಪೊಲೀಸ್

ಕೂಡ ದಲಿತ ಪುರುಷ ಮೇಲ್ಜಾತಿಯ ಮಹಿಳೆಯ ಮೇಲೆ ಅತ್ಯಾಚಾರಕ್ಕೆ ಪ್ರಯತ್ನಿಸಿದನೆಂದು, ಮೇಲ್ಜಾತಿಯ ಹುಡುಗಿಯನ್ನು ಅಪಹರಿಸಿದನೆಂದು, ದಲಿತ ಮಹಿಳೆಯಾಗಿದ್ದರೆ ಅವಳು ಸೂಳೆ ಮೇಲ್ಜಾತಿಯ ಹುಡುಗರ ತಲೆ ಕೆಡಿಸುತ್ತಿರುವಳೆಂದು, ನಡತೆಗೆಟ್ಟವಳೆಂದು ಕೇಸು ದಾಖಲಿಸುವು ದರಿಂದ ಅಂತರ್ಜಾತಿ ವಿವಾಹಗಳಲ್ಲಿರುವ ಸೌಹಾರ್ದತೆಯನ್ನು ಮುರಿದುಬಿಡುತ್ತಾರೆ. ಇವು ದಲಿತ ಅಂತರ್ಜಾತಿ ವಿವಾಹಗಳಲ್ಲಿ ಬರುವ ತೊಂದರೆಗಳು. ಈ ತೊಂದರೆಗಳನ್ನು ಹೇಗೆ ಬಗೆಹರಿಸುವು ದೆಂದು ಎಲ್ಲಿಯೂ ಈ ಕಾಯಿದೆ ಹೇಳಿಲ್ಲ.

ಇನ್ನು ಇತರೆ ಅಂತರ್ಜಾತಿ/ಅಂತರ್‌ಧರ್ಮದ ವಿವಾಹಗಳಲ್ಲಿ ಮಹಿಳೆಯ ಕುಟುಂಬಗಳಿಂದಲೇ ಕ್ರೂರ ಹಿಂಸೆ ಆಗಿರುತ್ತವೆ. ಇದಕ್ಕೆ ಎಷ್ಟೋ ಪ್ರಕರಣಗಳಲ್ಲಿ ಸಮಾಜ, ಪೊಲೀಸ್, ನ್ಯಾಯಾಂಗ ಕೂಡ ಕೈಗೂಡಿಸಿರುವ ಉದಾಹರಣೆಗಳಿವೆ. ಇಂತಹ ಪ್ರಕರಣಗಳಿಗೆ ವಿರುದ್ಧವಾಗಿ 2006ರ ಶ್ರೀಮತಿ ಲತಾಸಿಂಗ್ ವಿರುದ್ಧ ಯು.ಪಿ ಸರ್ಕಾರದಲ್ಲಿ ನಮ್ಮ ಸರ್ವೋಚ್ಚನ್ಯಾಯಾಲಯವು ಮಹತ್ವ ಪೂರ್ಣವಾದ ತೀರ್ಪನ್ನು ನೀಡಿದೆ. ಈ ಮೊಕದ್ದಮೆಲ್ಲಿ ಶ್ರೀಮತಿ ಲತಾಸಿಂಗ್ ಮತ್ತು ಬ್ರಹ್ಮಾನಂದ ಗುಪ್ತ ಪ್ರೀತಿಸಿ ವಿವಾಹವಾಗಿದ್ದರು. ಲತಾಸಿಂಗ್ ಅಣ್ಣನವರಿಂದ ಲತಾ ಸಿಂಗ್ ಮತ್ತು ನಂದಗುಪ್ತ ಕುಂಟುಂಬಕ್ಕೆ ಅನೇಕ ಜೀವ ಬೆದರಿಕೆಗಳು ಬಂದವು. ನಂದಗುಪ್ತ ಮತ್ತು ಅವನ ಕುಟುಂಬದ ಮೇಲೆ ಪೊಲೀಸ್ ಕೇಸುಗಳು ದಾಖಲಾದವು ಮತ್ತು ಅವರನ್ನು ಊರಿ ನಿಂದ ಓಡಿಸಲಾಯಿತು. ಈ ಪ್ರಕರಣವು ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಾಗ ಈ ಕೇಸಿನ ಪರ – ವಿರೋಧ ಅಂಶಗಳನ್ನು ಪರೀಕ್ಷಿಸಿದ ಮೇಲೆ ನ್ಯಾಯಾಧೀಶರು "ಜಾತಿ ಪದ್ಧತಿ ನಮ್ಮ ದೇಶಕ್ಕೆ ಶಾಪವಾಗಿದೆ. ಇದನ್ನು ನಮ್ಮ ದೇಶದಿಂದ ಕಿತ್ತೆಸೆಯಬೇಕಾದರೆ ಅಂತರ್ಜಾತಿ ಮತ್ತು ಅಂತರ್‌ಧರ್ಮ ವಿವಾಹಗಳು ಹೆಚ್ಚಾಗಬೇಕು. ಇಂತಹ ವಿವಾಹಗಳಲ್ಲಿ ಸ್ವ–ಇಚ್ಛೆಯಿಂದ ಪ್ರಾಪ್ತವಯಸ್ಕರು ಮದುವೆಯಾಗುತ್ತಿದ್ದರೆ ಇದು ಕಾನೂನು ಸಮ್ಮತ. ಅದನ್ನು ಅಡ್ಡಿಪಡಿಸುವ ಅಧಿಕಾರಯಾರಿಗೂ ಇಲ್ಲ. ಪ್ರಾಪ್ತ ವಯಸ್ಕರು ತಮ್ಮ ಜಾತಿ ಮತ್ತು ಧರ್ಮವನ್ನು ತೊರೆದು ತಮಗೆ ಇಷ್ಟವಾದವರನ್ನು ಮದುವೆ ಯಾಗುವುದು ಸಂವಿಧಾನಾತ್ಮಕ ಮೂಲಭೂತ ಹಕ್ಕುಗಳಾದ ಘನತೆ ಯಿಂದ ಜೀವಿಸುವ ಹಕ್ಕು, ಧಾರ್ಮಿಕ ಹಕ್ಕು ಮತ್ತು ಸ್ವಾತಂತ್ರ್ಯದ ಹಕ್ಕು, ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕಿನಲ್ಲಿ ಒಳಗೊಂಡಿವೆ. ಅಂತರ್ಜಾತಿ/ಧರ್ಮ ವಿವಾಹ ಮಾಡಿಕೊಳ್ಳುವ ಜೋಡಿಗಳ ತಂದೆ ತಾಯಿಯರಿಗೆ ಮತ್ತು ಕುಟುಂಬಗಳಿಗೆ ಈ ವಿವಾಹದ ಬಗ್ಗೆ ಅಸಮಾಧಾನ ಮತ್ತು ವಿರೋಧವಿದ್ದರೆ ಅವರು ಸುಮ್ಮನಿರಬೇಕೆ ವಿನಾ ಇಂತಹ ಜೋಡಿಗಳಿಗೆ ಯಾವುದೇ ತೊಂದರೆಯನ್ನು ನೀಡಬಾರದು. ಆ ರೀತಿ ಯಾವುದೆ ತೊಂದರೆಯನ್ನು ಮಾಡುವವರು ಅವರ ತಂದೆ ತಾಯಿಗಳಾಗಿದ್ದರೂ ಅವರ ವಿರುದ್ಧ ಕ್ರಿಮಿನಲ್ ಕೇಸುಗಳನ್ನು ದಾಖಲಿಸ ಬೇಕು.

ಏಕೆಂದರೆ ಅಂತರ್ಜಾತಿ/ಅಂತರ್‌ಧರ್ಮ ವಿವಾಹ ಮಾಡಿಕೊಳ್ಳುವ ಜೋಡಿಗಳು ನಮ್ಮ ದೇಶದ ಜಾತಿ ಪದ್ಧತಿಯನ್ನು ಕಿತ್ತುಹಾಕುವುದರ ಮೂಲಕ ನಮ್ಮ ರಾಷ್ಟ್ರದ ಭಾವೈಕ್ಯತೆಗೆ ಸಹಾಯ ಮಾಡುತ್ತಾರೆ. ಅಂಥಹವರನ್ನು ಗೌರವಿಸಬೇಕೆ ಹೊರತು ಕುಟುಂಬ ಮತ್ತು ಸಮಾಜದ ಮರ್ಯಾದೆ ಹೋಯಿತು ಎಂದು ಕೊಲೆ ಮತ್ತು ಹಿಂಸೆ ಮಾಡಬಾರದು. ಅವರಿಗೆ "ಹಿಂಸೆ ಅವಮಾನ ಬೆದರಿಕೆ ನೀಡುವುದು ನಮ್ಮ ದೇಶದಲ್ಲಿ ಅಮಾನುಷಕರ" ಎಂಬ ಆದೇಶವನ್ನು ಸರ್ಕಾರಕ್ಕೆ ನೀಡುತ್ತಾರೆ. ಈ ತೀರ್ಪು ನಮ್ಮ ದೇಶಕ್ಕೆ ಮಹತ್ವದ ತೀರ್ಪಾಗಿದೆ. ಈ ರೀತಿಯ ತೀರ್ಪು ಮತ್ತು ಕಾನೂನುಗಳು ನಮ್ಮ ದೇಶದಲ್ಲಿ ಜಾರಿಗೆ ಬಂದರೆ ಜಾತಿ ಪದ್ಧತಿಯನ್ನು ನಿರ್ಮೂಲನೆ ಮಾಡುವುದರ ಮೂಲಕ ದಲಿತ ಮಹಿಳೆಯ ಘನತೆಯಿಂದ ಜೀವಿಸುವ ಹಕ್ಕನ್ನು ಕಾಪಾಡಿದಂತಾಗುತ್ತದೆ.

ನಮ್ಮ ರಾಜ್ಯದಲ್ಲಿ ಅಂತರ್ಜಾತಿ ವಿವಾಹಗಳನ್ನು ಪ್ರೋತ್ಸಾಹಿಸಲು ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳನ್ನು ನೋಡುವಾಗ ಅವು ಜಾತಿವಿನಾಶ ಮಾಡುವ ಕಾರ್ಯಕ್ರಮಗಳು ಎಂಬುವುದಾಗಿ ಕಂಡುಬರುವುದಿಲ್ಲ. ಅಂತರ್ಜಾತಿ ವಿವಾಹವಾದವರಿಗೆ ಕೇವಲ 25,000 ರೂಪಾಯಿಗಳನ್ನು ಪ್ರೋತ್ಸಾಹ ಧನವಾಗಿ ನೀಡುತ್ತಿದೆ. ಈ ಸಮಸ್ಯೆಯನ್ನು ಕೇವಲ ಪ್ರೋತ್ಸಾಹ ಧನದಿಂದ ನಿವಾರಿಸಲು ಸಾಧ್ಯವಿಲ್ಲ. ಅದಕ್ಕೆ ಬದಲಾಗಿ ಜನರಲ್ಲಿ ಮಾನವರೆಲ್ಲರೂ ಒಂದೇ, ಅದಕ್ಕಾಗಿ ಅಂತರ್ಜಾತಿ ವಿವಾಹ ಗಳಿಗೆ ಹೆಚ್ಚಿನ ಮಹತ್ವವಿದೆ ಎನ್ನುವ ಅರಿವಿನ ಕಾರ್ಯಕ್ರಮಗಳನ್ನು ಇಂದಿನ ಯುವಕ ಯುವತಿಯರಿಗೆ ಮನದಟ್ಟು ಮಾಡಬೇಕಾಗಿದೆ. ಮತ್ತು ಅಂತರ್ಜಾತಿ ವಿವಾಹಗಳನ್ನು ತಪ್ಪಾಗಿ ಭಾವಿಸುವ ಮತ್ತು ಅವುಗಳಿಗೆ ಅಡ್ಡಿ ಪಡಿಸುವ ಕುಟುಂಬದವರ ಮತ್ತು ಸಮಾಜದ ವಿರುದ್ಧ ಕಾನೂನು ಕ್ರಮಗಳನ್ನು ತೆಗೆದುಕೊಳ್ಳುವಂತಹ ಕಾರ್ಯಕ್ರಮಗಳನ್ನು ಗಂಭೀರವಾಗಿ ನಮ್ಮ ಸರ್ಕಾರ ಹಮ್ಮಿಕೊಳ್ಳಬೇಕಾಗಿದೆ.

ನಾವು ದಲಿತರು ಮತ್ತು ಅವರ ಹಕ್ಕುಗಳ ಬಗ್ಗೆ ಮಾತನಾಡುವಾಗ ದಲಿತ ಮಹಿಳೆಯ ಸಮಸ್ಯೆಗಳನ್ನು ವಿಮರ್ಶಾತ್ಮಕವಾಗಿ ಚರ್ಚಿಸದೇ ದಲಿತರ ಹಕ್ಕುಗಳ ಬಗ್ಗೆ ಮಾತನಾಡುವುದು ಸಮಂಜಸವೆನಿಸುವುದಿಲ್ಲ. ಏಕೆಂದರೆ ಅವರು ಸಮಾಜದ ಕೆಳಸ್ತರದಲ್ಲಿದ್ದು ಮೂರು ರೀತಿಯ ಶೋಷಣೆಗಳನ್ನು (ಲಿಂಗ, ಜಾತಿ, ವರ್ಗ,) ಅನುಭವಿಸುತ್ತಿದ್ದು, ಅವರು ಕುಟುಂಬ ಸಮಾಜ ಮತ್ತು ದೇಶದ ಅಭಿವೃದ್ಧಿಯಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತಿದ್ದಾರೆ. ಹಾಗಾಗಿ ಅವರಿಗೆ ಮತ್ತು ಅವರು ಮಾಡುವ ಕೆಲಸಕ್ಕೆ ಗೌರವವನ್ನು ನೀಡಿ ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಂಘಟಿಸುವುದರಿಂದ, ನಮ್ಮ ದೇಶದಲ್ಲಿ ಜಾತಿ ಪದ್ಧತಿ ನಿರ್ಮೂಲವಾಗಿ, ಎಲ್ಲರೂ ಸಮಾನತೆಯಿಂದ ಬಾಳುವುದರಲ್ಲಿ ದೇಶದ ಅಭಿವೃದ್ಧಿಯನ್ನು ಕಾಣಬಹುದು. ಅದಕ್ಕಾಗಿ ನೀವು ನಿಮ್ಮ ನಿಮ್ಮ ಕಾರ್ಯ ಕ್ಷೇತ್ರಗಳಲ್ಲಿ ಈ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ದಲಿತ ಮಹಿಳೆಯ ಆರ್ಥಿಕ ಶೈಕ್ಷಣಿಕ ಸಾಮಾಜಿಕ ಹಕ್ಕುಗಳನ್ನು ರಕ್ಷಿಸುವುದರ ಮೂಲಕ ಅವರ ಅಭಿವೃದ್ಧಿಯನ್ನು ಗುರ್ತಿಸಬೇಕು. ಹೀಗೆ ದಲಿತ ಮಹಿಳೆ ಸಂಪೂರ್ಣವಾಗಿ ಸಬಲಳಾಗಿ ಘನತೆಯಿಂದ ಜೀವಿಸುತ್ತಿರುವಾಗ ನಮ್ಮ ದೇಶ ಅಭಿವೃದ್ಧಿಯನ್ನು ಹೊಂದಿದೆ ಎಂದು ನಾವು ಹೆಮ್ಮೆಯಿಂದ ಹೇಳಿಕೊಳ್ಳಬಹುದು.

ಮಾರ್ಟಿನ್ ಲೂಥರ್ ಕಿಂಗ್ ಹೇಳುವಂತೆ, "I have a Dream that one day this Nation will rise up with and live out the true meaning of its creed; We hold these Truths to be self–evident , that All MEN are CREATED EQUAL" "ಎಲ್ಲ ಮಾನವರು ಒಂದೇ" ಯಾರಿಗೂ ನಮ್ಮ ದೇಶದಲ್ಲಿ ಶೋಷಣೆ ಅನ್ಯಾಯ ಮತ್ತು ಭೇದಭಾವವಿರಬಾರದು ಎಂಬುವುದು ನಮ್ಮ ನಿಮ್ಮ ಕನಸು ಮಾತ್ರವಲ್ಲ ನನಸುಕೂಡ ಆಗಬೇಕು.

❑



# ಏನಾಗುವೆ?

ಇಷ್ಟ ದೇವತೆಯೆಂದು
ಅಷ್ಟ ಸ್ತೋತ್ರವ ಹಾಡಿ
ಧನ-ಕನಕ ಅರ್ಪಿಸಿ
ಪೂಜಿಸಿದವರೆ...

ಎಲ್ಲಿ ನಾರಿಯರು
ಪೂಜಿಸಲ್ಪಡುತ್ತಾರೋ
ಅಲ್ಲಿ ದೇವತೆಗಳ ಹಾಜರಿ
ಪ್ರಮಾಣಿಸಿದವರೇ...

'ತಾಯಿಗಿಂತ ದೇವರಿಲ್ಲ...
ಜನನಿ ತಾನೆ ಮೊದಲ ಗುರುವು'
ಕಂಠಪಾಠ ಒಪ್ಪಿಸಿ
ಉದ್ದಂಡ ನಮಸ್ಕರಿಸಿ
ಧನ್ಯರಾದವರೇ...

ಶಿಲೆ, ಕಲೆ, ಕಾವ್ಯಗಳಲ್ಲಿ
ಬಣ್ಣಿಸಿ, ಮಾತುಗಳ
ಮಹಾಪೂರ ಹರಿಸಿ
ಸಂಭ್ರಮಿಸಿದವರೇ...

ಕಟ್ಟು-ಕಟ್ಟಳೆ ವಿಧಿಸಿ
ನಿಷೇಧಗಳ ಹೊರೆ ಹರಿಸಿ
ಕಣ್ಗಾವಲಿರಿಸಿ ಕಾಪಾಡಿದ
ಧರ್ಮ ಸಂರಕ್ಷಕರೇ...
ಕಲ್ಲು, ಮಣ್ಣು, ನೀರು
ಗಿಡ, ಮರ, ಹೂವು, ಹಣ್ಣು
ಪಶು-ಪಕ್ಷಿ, ಕ್ರಿಮಿ-ಕೀಟಗಳಲ್ಲಿ
ನನ ಕಂಡು ಕರಗಿದ
ಪವಿತ್ರಾತ್ಮರೇ...

ಕಟ್ಟ ಕಡೆಯ ಮನುಷ್ಯನನು
ಮುಟ್ಟಬಾರದು
ಹೆಣ್ಣು ಹುಟ್ಟಬಾರದು
ಇದಲ್ಲವೆ ಅಲಿಖಿತ
ಅನುಶಾಸನ?
ರಕ್ತಗತವಾಗಿ ಹರಿದು
ಉಳಿದಿರುವ ಮರಣಶಾಸನ!

ಮುಟ್ಟುವ ಹಕ್ಕಿಗೆ
ಹುಟ್ಟುವ ಹಕ್ಕಿಗೆ
ಅಂತಃಸಾಕ್ಷಿಯೇ ಮೈಯಾಗಿ
ಅಂತಃಕರಣವೇ ಕೈಯಾಗಿ
ರುಜು ಮಾಡಬೇಕಿದೆ.

ನಾನಳಿದು ಹೇಗೋ ಉಳಿದು
ನಮ್ರವಾಗಿ ಕೆಳಗಿಳಿದು
ಬೆಟ್ಟದಡಿ ಹುಲ್ಲಾಗಿ
ಗಿಡದಡಿ ಕಲ್ಲಾಗಿ ಬಾಳುವೆ.

ಹೇಳು ಏನಾಗುವೆ
ಹೇಳು...ನೀ ಏನಾಗುವೆ?

● ಸವಿತಾ ನಾಗಭೂಷಣ



# ದಲಿತ ಮಹಿಳಾ ಸಂವೇದನೆ

• ಸರಸ್ವತಿ ದು.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನಲ್ಲಿ 'ಸಂವೇದನೆ' ಎಂಬ ಪದಕ್ಕೆ ಅನಿಸಿಕೆ, ಅನುಭವ, ಅರಿವು, ತಿಳಿವಳಿಕೆ ಎಂಬ ಅರ್ಥ ನೀಡಲಾಗಿದೆ. ಕಿಟ್ಟೆಲ್ ನಿಘಂಟಿನಲ್ಲಿ 'ಸಂವೇದ' ಎಂಬ ಪದಕ್ಕೆ perception, consciousness, knowledge, understanding ಎಂಬ ಅರ್ಥಗಳನ್ನು ನೀಡಲಾಗಿದೆ. ಸರಳವಾಗಿ ನಮ್ಮ ಸುತ್ತಲಿನ ಪರಿಸರ, ಸಂದರ್ಭ, ಸಂಗತಿ ಕುರಿತು ನಮಗಿರುವ ಮಿಡಿತಗಳನ್ನು "ಸಂವೇದನೆ" ಎಂದುಕೊಂಡಿದ್ದೇನೆ.

ಮಹಿಳಾ ಮತ್ತು ದಲಿತ ಚಳವಳಿಗಳೊಂದಿಗೆ ಗುರುತಿಸಿಕೊಂಡಿರುವ ನನಗೆ ದಲಿತ ಮಹಿಳಾ ಸಂವೇದನೆಯನ್ನು ಜಾತಿ ಹಾಗೂ ಪಿತೃಪ್ರಧಾನತೆಯ ಹಿನ್ನೆಲೆಯಲ್ಲಿ ನೋಡುವುದು ಮುಖ್ಯವೆನಿಸುತ್ತದೆ. ಸಂವೇದನೆ ಹಲವು ರೂಪಗಳಲ್ಲಿ ಅಭಿವ್ಯಕ್ತಿಗೊಂಡಿದೆ. ವ್ಯವಸಾಯವೇ ಮುಖ್ಯ ಕಸುಬಾಗಿರುವ ಹಳ್ಳಿಗಳ ನಾಡಾದ ಭಾರತದಲ್ಲಿ ಗ್ರಾಮೀಣ ಸಂವೇದನೆಯದೇ ಸಿಂಹಪಾಲು. ಗ್ರಾಮೀಣ ಸಂವೇದನೆಯ ಲೋಕವನ್ನು ಗಮನಿಸಿದಾಗ ದಲಿತರು, ಮಹಿಳೆಯರೇ ಅಲ್ಲಿ ಎದ್ದು ಕಾಣುತ್ತಾರೆ. ಇನ್ನೂ ಒಳಹೊಕ್ಕು ನೋಡಿದಾಗ ದಲಿತ, ಅನಕ್ಷರಸ್ಥ ಮಹಿಳೆಯರ ಸಂವೇದನೆ ಮೂಲ ಬೇರಿನಂತೆ ನಿಚ್ಚಳವಾಗಿ ಗೋಚರಿಸುತ್ತದೆ. ಈ ಸಂವೇದನೆ ಅಕ್ಷರರೂಪ ಪಡೆದುಕೊಂಡಿರುವುದು ತೀರಾ ಕಡಿಮೆ.

ವೈದಿಕಶಾಹಿ ಪಿತೃಪ್ರಧಾನ ಮೌಲ್ಯಗಳ ಹಾಗೂ ಅದರ ಪ್ರಭಾವಕ್ಕೆ ಒಳಗಾದ ಶೂದ್ರ ಸಮುದಾಯದ ಅಭಿವ್ಯಕ್ತಿಯನ್ನೆ ಒಟ್ಟು ಭಾರತೀಯ ಸಂಸ್ಕೃತಿಯ ಅಭಿವ್ಯಕ್ತಿಯನ್ನಾಗಿಸುವುದು ಪ್ರಜ್ಞಾಪೂರ್ವಕವಾಗಿ ನಡೆಯುತ್ತ ಬಂದಿರುವ ಹಿನ್ನೆಲೆಯಲ್ಲಿ ಅನಕ್ಷರಸ್ಥ ದಲಿತ ಮಹಿಳೆಯ ಸಂವೇದನೆಗಳನ್ನು ದಾಖಲಿಸುವ ಕೆಲಸ ಸಮರ್ಪಕವಾಗಿ ನಡೆದಿಲ್ಲ. ಹಾಗಾಗಿ, ಮೌಖಿಕ ಪರಂಪರೆಯ ದನಿಗೆ ಕಿವಿಯೊಡ್ಡದಿದ್ದರೆ ದಲಿತ ಮಹಿಳಾ ಸಂವೇದನೆ ದಕ್ಕುವುದಿಲ್ಲ.

ದಾಖಲಾಗಿರುವ ಜಾನಪದ ಸಾಹಿತ್ಯವನ್ನು ಓದಿದಾಗ, ಅಲ್ಲಿ ಹೆಚ್ಚಾಗಿ ಕಾಣುವುದು ಕ್ರೂರ ಮಲತಾಯಿಯರು, ಗಂಡಂದಿರನ್ನು ಹೆಂಡತಿಯರಿಂದ ಸೆಳೆದುಕೊಳ್ಳುವ ಸೂಳೆಯರು, ಹಿಂಸಿಸುವ ಅತ್ತೆಯರು, ಗಂಡನ ಕಠಿಣ, ಅವಮಾನಕರ ಪರೀಕ್ಷೆಗಳನ್ನು ತಾಳಿಕೊಂಡು ಆತನ ಮನ ಗೆಲ್ಲುವ ಹೆಂಡತಿಯರು, ಗಂಡನ ತಿರಸ್ಕಾರವನ್ನು ಸಹಿಸಿಕೊಂಡು, ಬವಣೆಗಳನ್ನು ಎದುರಿಸುತ್ತ ಮಕ್ಕಳನ್ನು ಸಲಹುವ ತಾಯಂದಿರು, ಸೇಡುತೀರಿಸಿಕೊಳ್ಳುವ ಛಲಗಾರ್ತಿಯರು, ತಮ್ಮದೇ ರೀತಿಯಲ್ಲಿ ಪ್ರತಿಭಟಿಸುವ ಸ್ವಾಭಿಮಾನದ ಹೆಣ್ಣುಗಳು.

ದಲಿತ ಮಹಿಳೆಯರು ತಮ್ಮ ಬದುಕಿನಲ್ಲಿ ಕಂಡುಂಡ ನೋವು, ನಿಟ್ಟುಸಿರು, ದುಃಖ-ದುಮ್ಮಾನ, ಅವಮಾನ, ತಿರಸ್ಕಾರ, ಸಿಟ್ಟು, ಪ್ರತಿಭಟನೆಯನ್ನು ಕತೆಯಾಗಿಸುವ, ಪದವಾಗಿಸುವ ರೀತಿ, ಅವನ್ನು Narrate ಮಾಡುವ ರೀತಿಯಲ್ಲಿ ಅದ್ಭುತ ಸೃಜನಶೀಲತೆ ಮತ್ತು ಕಲಾತ್ಮಕತೆಯನ್ನು ಕಾಣಬಹುದು. ಕಥೆ ಹೇಳುವವರ ಕಮ್ಮಟವೊಂದರಲ್ಲಿ ಅಜ್ಜಿಯೊಬ್ಬಳು ಒಂದೇ ಕಥೆಯನ್ನ ಒಮ್ಮೆ ಕಾವ್ಯದಂತೆ ಹಾಡಿದರೆ, ಇನ್ನೊಮ್ಮೆ ನಾಟಕದಂತೆ ಆಡಿತೋರಿಸಿ, ಮತ್ತೊಮ್ಮೆ ಕಥೆಯಂತೆ ಹೇಳುತ್ತಿದ್ದುದು ನೆನಪಾಗುತ್ತದೆ. ಒಮ್ಮೆಯೂ ತೊದಲದೇ, ಮರೆತುಹೋಗದೆ, ದನಿ ಏರಿಸಿ, ಇಳಿಸಿ, ಪಿಸುಗುಟ್ಟಿ, ತಾನೂ ಅಳುತ್ತ, ನಗುತ್ತ, ಮುಖ-ಕೈಗಳಿಂದಲೂ ಮಾತನಾಡುತ್ತ ಕೇಳುಗರನ್ನು ಕಥೆಯೊಳಗೆ ಸೆಳೆದುಕೊಳ್ಳುವ ಪರಿ ಒಂದು ಸಾಧನೆಯೇ ಸರಿ. ಅವಮಾನ, ತಿರಸ್ಕಾರಕ್ಕೆ ಒಳಗಾಗಿಯೂ ಈ ಸಮುದಾಯ ಮಾನವೀಯವಾಗಿ ಉಳಿದಿರುವುದರ ಹಿಂದೆ ಜೀವಸೆಲೆಯಂತೆ ಕೆಲಸ ಮಾಡಿರುವುದು ಈ ಕಲಾತ್ಮಕ ಸೃಜನಶೀಲತೆ, ಹಂಚಿ ಉಣ್ಣುವ ಸಾಮುದಾಯಿಕ ಬದುಕು ಮತ್ತು ಪ್ರಕೃತಿಯೊಂದಿಗಿನ ಗಾಢ, ನಿಕಟ ಸಂಬಂಧ ಎನಿಸುತ್ತದೆ. ಕಥೆ ಹೇಳುವ, ಪದ ಹಾಡುವ, ಹೆಂಗಸರಷ್ಟೇ ಅಲ್ಲದೆ ಹಲವು ರೀತಿಯಲ್ಲಿ ತಮ್ಮ ಸಂವೇದನೆಗಳನ್ನು ಅಭಿವ್ಯಕ್ತಪಡಿಸುವ ಹಲವಾರು ಸಾಮಾನ್ಯ ಮಹಿಳೆಯರೊಂದಿಗೆ ನಾನು ಒಡನಾಡಿದ್ದೇನೆ. ದಾಖಲಾಗಿರುವುದು ಬಹಳ ಕಡಿಮೆಯಷ್ಟೇ ಅಲ್ಲ; ದಾಖಲಿಸುವ ಕ್ರಮಕ್ಕೂ ಅವು ಸೆಡ್ಡು ಹೊಡೆಯುತ್ತವೆ.

ದಿನ ನಿತ್ಯದ ಬದುಕಿನಲ್ಲಿ, ದುಡಿಯುತ್ತಲೇ ಅವರಾಡುವ 'ತುಂಬೆ ಊನಪ್ಪಗ್', 'ಬಾಳೆಗೊಂದೇ ಗೊನೆ; ಬಾಳೋರ್ಗೊಂದೇ ಮಾತು', 'ಆಡಿನ ಮಲಿದ್ದಂಗೆ ಎಲ್ಡೇ ಮಕ್ಳು', ತರ್‍ಗ್ ತಿನ್ನರ್‍ಮನೇಲಿ ಅಪ್ಪ ಕೇಳಕೋದ್ರಂತೆ', 'ವಲ್ಲಿ ಉಡೋ ಪುಲ್ಗೂರ ಅಂದ್ರೆ; ಅಲ್ಲಲ್ಲೂ ಇಲ್ಲ ನಾನ್ ಒಲ್ಲೂ ಒಲ್ಲೆ', 'ಚಂಬ್ ತುಂಬ ಆಲು ಕಂಟದ್‌ಗಿಷ್ಟ್ ಏಲು' (ಎಲ್ಲ ಚೆನ್ನಾಗಿದ್ದು ಯವ್ವೋ ಒಂದು

ಬಲವಾದ ಅವಗುಣವಿದ್ದಾಗ ಈ ಮಾತನ್ನು ಹೇಳ್ತಾರೆ) ಎಂಬಂಥ ಮಾತುಗಳಲ್ಲಿ ಅದ್ಭುತ ರೂಪಕಗಳನ್ನು ಕಾಣಬಹುದು.

ಕಥೆಗಳಲ್ಲಿ ಹೆಂಗ್ಸಿನ ಕೆಲ್ಸ ದೊಡ್ಡು ಅಂತ ಸಾಬೀತು ಮಾಡೋ ಹೆಂಗಸರು, ಆಂಜನೇಯಸ್ವಾಮಿಗೇ 'ಪರ್ಕೆ ತಗಂಡ ಬಿಡ್ತೀನ್ ನೋಡೀಗ' ಅಂತ ಹೆದರ್ಸೊ ಹೆಂಗಸರು, ನಿಗೂಢ ಬಳ್ಳಿ, ಎಲೆ ಹುಡ್ಕಿ ಔಸ್ದಿ ಮಾಡಿ ಪ್ರಾಣ ಉಳ್ಸೊ ಹೆಂಗಸ್ರು, ಪಾರಾಗಲು ಮಾಂತ್ರಿಕ ವಸ್ತುಗಳನ್ನು ನೀಡುವ ಅಡಗೂಲಜ್ಜಿಯರು, ಮಳೆಬೀಜ ಇರೊ ಜಾಗ ತೋರ್ಸೊ ತಂಗೀರು, ಮಾಂತ್ರಿಕ ಶಕ್ತಿಯ ಮಾಟಗಾತಿಯರು, ಬೆಟ್ಟದಂಥ ಸಮಸ್ಯೆಗೆ ಸುಲಭವಾದ ಪರಿಹಾರ ಸೂಚಿಸುವ, ಉತ್ತರವೇ ಸಿಗದ ಪ್ರಶ್ನೆಗಳಿಗೆ ಸಲೀಸಾಗಿ ಉತ್ತರ ಹುಡುಕುವ ಜಾಣ ಹೆಂಗಸರು ಇದ್ದಾರೆ.

ಜಾನಪದ ರಾಮಾಯಣ, ಮಹಾಭಾರತಗಳು ಚಿತ್ರಿಸಿರುವ ಸ್ತ್ರೀ ಪಾತ್ರಗಳು ಹೇಗೆ ಭಿನ್ನವಾಗಿವೆ ಎಂಬುದು ಗಮನಿಸಬೇಕಾದ ಅಂಶ.

**ಶ್ರೀರಾಮ ದೇವರು**<br>**ಕೋಟಿಗೊಬ್ಬಳಲ್ಲೊ**<br>**ಸತುವಂತೆ ಸೀತಮ್ಮ**<br>**ರಾಮನಿಗೊಬ್ಬಳಲ್ಲೊ**<br>**ಸತುವಂತೆ ಸೀತಮ್ಮ**<br>**ಅವಳ ಸಿರುಪಾದ ನೆನೆದರೆ**<br>**ಕತ್ತಾಲು ಹರುದವಲ್ಲೊ**<br>... ... ...<br>**ಚೋಳು ಕಾಳಿಂಗ ಸರ್ಪ**<br>**ಕಚ್ಚೋದ ಮರೀತಾವೆ**<br>... ... ...<br>**ತುಂಬಿ ಹೊಳೆ ಹರಿತವೆ**<br>**ಬಂಜೆ ಬೂಮೆಲ್ಲ**<br>**ತುಂಬು ಬಸ್ರಿಯಗುತಾವೆ**

*(ಜನಪದ ರಾಮಾಯಣ)*



ಹೀಗೆ ರಾಮನಿಗೆ ಶ್ರೇಯಸ್ಸು ಸೀತೆಯಿಂದಲೇ ಎಂದು ಸೀತೆಯ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತಾರೆ. ಮಹಾಭಾರತದಲ್ಲಿ ತನ್ನ ಗಂಡಂದಿರು ಸೋತರೆ, ಅದು ತನ್ನ ಸೋಲಲ್ಲವೆಂದು ತನ್ನೊಂದಿಗೆ ಜೂಜಾಡಿ ಸೋಲಿಸಬೇಕೆಂದು ದ್ರೌಪದಿ–

**"ಹಾಕಲಾ ದ್ರವ್ಯಗಳಾ ನಾ ನಿನ್ನ ನೂಕೇನು ಪಾದದಲ್ಲೇ**<br>**ಹಮ್ಮಲಾ ದ್ರವ್ಯಗಳಾ ನಾ ನಿನ್ನ ಚಿಮ್ಮೇನು ಪಾದದಲ್ಲೆ"**[1]

ಎಂದು ಸವಾಲು ಹಾಕುತ್ತಾಳೆ. ಸಹಾಯಕ್ಕಾಗಿ ಯಾಚಿಸದೇ ಸವಾಲು ಹಾಕಿ ಗೆಲ್ಲುವ ದ್ರೌಪದಿಯನ್ನ–

**"ಬೆಂಕೀಲಿ ಹುಟ್ಯಾಳೆ, ಬೆಂಕೀಯ ತೊಟ್ಟಾಳೆ**<br>**ನಿಂತ ಛತ್ರಿಯ ನೆರಳಾಗೆ ಹೊಗೆಯೀರಿ ಓಕುಳಿನಾಡಿ"** [1]

*(ಜನಪದ ಮಹಾಭಾರತ)*

ಎಂದು ಬೆಂಕಿಗೆ ಹೋಲಿಸಿ ಹಾಡುತ್ತಾರೆ.

ಲಿಂಗ, ಜಾತಿ, ವರ್ಗ ತಾರತಮ್ಯಗಳೆಂಬ ಅನಿಷ್ಟಗಳಲ್ಲಿ ಸಿಕ್ಕಿಕೊಂಡರೂ ತನ್ನ ಚೈತನ್ಯವನ್ನು ಉಸಿರುಗಟ್ಟಿಸಲು ಸಾಧ್ಯವಿಲ್ಲವೆಂದು ಹೊಡೆದಾಡುವ, ಸೆಣಸಾಡುವ, ಹೆಣಗಾಡುವ ದಲಿತ ಮಹಿಳಾಲೋಕದ ಸಂವೇದನೆ ಈ ಸೆಣಸಾಟಕ್ಕಷ್ಟೇ ಸೀಮಿತವೇ? ನಿರಂತರ ಚಲನಶೀಲವಾದ ಇಳೆಯ ಮೇಲಣ ಮನುಷ್ಯ ಜೀವಿಯಾಗಿ ತನ್ನೊಳಗೆ ಮಿಡಿಯುವ ಆರ್ದ್ರತೆಯ, ಆನಂದದ, ಉಲ್ಲಾಸದ ಮಿಡಿತಗಳು ಎಲ್ಲಡಗಿವೆ ಎಂದು ಚಿಂತಿಸುವಾಗ:

- ರಾಯಚೂರಿನಲ್ಲಿ ಉರಿಬಿಸಿಲಿನ ಹೊಲದಲ್ಲಿ ಕೂಲಿ ಮಾಡುವ ಹೆಂಗಸರು ಎರಡು ದಿನದ ಕಮ್ಮಟದಲ್ಲಿ ಮೊದಲಿಗೆ ಮುಗುಮ್ಮಾಗಿದ್ದವರು ನಂತರ ಉತ್ಸಾಹದಿಂದ ಕೂಗಿ ಕುಣಿದು ನಲಿದಿದ್ದು;
- ಫ್ಯಾನ್ ಹಾಕಲು ವಿದ್ಯುತ್ ಇಲ್ಲದ ಸುಡು ಬೇಸಿಗೆಯಲ್ಲಿ ಲಂಗ–ದಾವಣಿ, ಸೀರೆಯುಟ್ಟ ಪೋರಿಯರು, ಅವನ್ನೇ ಕಚ್ಚೆಯಂತೆ ಕಟ್ಟಿ ನಾಟಕದ workshopನಲ್ಲಿ ಹಾಡಿ, ಕುಣಿದು ಸಂಜೆ ಬಯಲಿನಲ್ಲಿ ಕೇಕೆ ಹಾಕಿ ಆಟವಾಡಿ, ಸೈಕಲ್ ತುಳಿದು, ಸಲ್ವಾರ್ ಹಾಕಿಕೊಂಡು ಬಂದರೆ ಅನುಕೂಲವೆಂದಿದ್ದ ನಮ್ಮನ್ನು ದಂಗಾಗಿಸಿದ್ದು;
- ನೀರು ತರುವಾಗ, ಒಟ್ಟಿಗೆ ಸೇರಿದಾಗ ಲಿಂಗ ಭೇದವಿಲ್ಲದೆ ಎಲ್ಲ ಅಂಗಾಂಗಗಳ ಕುರಿತು ಜೋಕು ಮಾಡಿಕೊಂಡು ಕಣ್ಣೀರು ಬರುವಷ್ಟು ಬಿದ್ದು–ಬಿದ್ದು ನಗುವ ಹೆಂಗಸರು;
- ಮಲೆ ಮಾದೇಶ್ವರನ ಗುಡಿ ಎದುರು ತಮಟೆ ಸದ್ದಿಗೆ ಕುಣಿದು ಭಕ್ತಿ ತೋರಿಸುವ ಹೆಂಗಸರು, ಮುದುಕಿಯರು;
- ಬೆಳಕರಿವ ಮೊದಲೇ ನೀಟಾಗಿ ತಲೆಬಾಚಿ ಹೂ ಮುಡಿದು, ಕಾಲ್ಚೈನು–ಕಾಲಂದ್ಗೆ ತೊಟ್ಟು ಬದುಕಿನ ದಾರಿದ್ರ್ಯವೇ ಉದುರಿ ಹೋಗುತ್ತೇನೋ ಎಂಬಂತೆ ತಮಾಷೆ ಮಾಡಿಕೊಂಡು ನಗುವ ಪೌರಕಾರ್ಮಿಕ ಮಹಿಳೆಯರು;

ಎದೆಯೊಳಗೆ ಸುಳಿದಾಡುತ್ತಾರೆ. ಸವತಿಯರು, ಸೂಳೆಯರು, ಮಲತಾಯಿಯರು, ಅಸೂಯೆಯ ಮಾಯಾಂಗನೆಯರು, ಪೂಜೆಗೊಳ್ಳುವ ಮೂಕ ದೇವಿಯರು, ಏಳು ಸುತ್ತಿನ ಮಲ್ಲಿಗೆ ತೂಕದ; ಉಸಿರಾಡಲೂ ಸುಸ್ತುಪಡುವ ರಾಜಕುಮಾರಿಯರಿಂದ ಮುಚ್ಚಲ್ಪಟ್ಟಿರುವ ದಲಿತ ಮಹಿಳಾ ಲೋಕದೊಂದಿಗೆ ಸಂವಾದಿಸುವ, ಕೊಡುಕೊಳ್ಳುವ,

ಯವ ಸಂಬಂಧ ನಿರ್ಮಿಸಿಕೊಳ್ಳುವ ಮೂಲಕ ಜನಪರ ಚಳವಳಿ ಭರವಸೆಯ ಬೆಳಕನ್ನು ತುಂಬಿಕೊಳ್ಳಬಹುದೆಂದು ನಾನು ಸುತ್ತೇನೆ.

ಲಿಂಗ ತಾರತಮ್ಯಕ್ಕೆ ಮೂಲ ಕಾರಣವಾದ ಪಿತೃ ಪ್ರಧಾನತೆಯು ೀಕೃತ ವ್ಯವಸ್ಥೆಯಲ್ಲಿ ಏಕರೂಪಿಯಾಗಿಲ್ಲ. ಹಾಗಾಗಿ ದಲಿತ ದಾಯದೊಳಗೆ ಪಿತೃ ಪ್ರಧಾನತೆ ಭಿನ್ನವಾಗಿರುವುದು ಹೇಗೆಂದು ನಿಸಬೇಕು.

**ನನ್ನ ಬದುಕು ನನ್ನದೇ ಆಗಿ ಎಂದಾದರು ಉಳಿದಿದೆಯೆ?**
**ಮನೆಯೊಳಗೆ ಪುರುಷ ಸೊಕ್ಕು, ಕೆನ್ನೆಯ ಕುಟುಕಿದರೆ**
**ಮತ್ತೊಂದು ಕೆನ್ನೆಯನ್ನು ಹರಿದು ಸೀಳುತ್ತದೆ**
**ಜಾತಿಸೊಕ್ಕು ಬೀದಿಯೊಳಗೆ ... ... ...**

**ಹಸುಗೂಸಾಗೆ ಸೂಳೆ**
**ಎಂದು ಕರೆಸಿಕೊಂಡ ಖ್ಯಾತಿ ನನದು**
**ನನ್ನ ಕತೆ**
**ನಾಗರಿಕತೆಯ ಹಣೆಯನ್ನು**
**ರೌರವ ನರಕದಾಳಕ್ಕೆ ಅದುಮಲಿ**
**ನಿಮ್ಮ ದೇಶದ ಭವ್ಯ ಇತಿಹಾಸದ**
**ಸಂಪುಟಗಳ ಯಾವ ಅಧ್ಯಾಯಕೆ**
**ನನ್ನ ಕತೆಯನ್ನು ಸೇರಿಸುವಿರಿ?**

*(ಚಲ್ಲಪಲ್ಲಿ ಸ್ವರೂಪರಾಣಿ)*[2]

ಜಾತಿ ಮತ್ತು ಪಿತೃಪ್ರಧಾನತೆ ಎರಡೂ ದಲಿತ ಮಹಿಳೆಯನ್ನ ತುಳಿಯುತ್ತಿವೆ ಎಂಬುದನ್ನು ತೆಲುಗಿನ ದಲಿತ ಕವಿ ಸ್ವರೂಪ ಯ ಮಾತುಗಳು ಸ್ಪಷ್ಟಪಡಿಸುತ್ತವೆ. "ಭಾರತದಲ್ಲಿ ಪಿತೃಪ್ರಧಾನತೆ ರೂಪಿಯಾದದ್ದೇ ಹೊರತು ಏಕರೂಪಿಯಾದ, ಬದಲೇ ಆಗದ ಸ್ಥೆಯಲ್ಲ. ಅದರ ರಚನೆ ಮತ್ತು ನಿರ್ವಹಣೆಯು ನಿರಂತರ ುಯಾಗಿದ್ದು ಪರಿಶೀಲನೆಗೆ, ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಳೆಯರು ಜಾತಿ, ಲಿಂಗ ದಬ್ಬಾಳಿಕೆಗೆ ಅಧೀನರಾಗಿರುವುದಕ್ಕೆ ಅವರ ದಲದ ಸ್ಥಿತಿಯೂ ಕಾರಣವಾಗಿದೆ. ಒಪ್ಪಿಕೊಳ್ಳದಿದ್ದರೆ ರಿಸಬೇಕಾದ ಪರಿಣಾಮದ ಭೀತಿ, ಒಪ್ಪಿದರೆ ಸಿಗಬಹುದಾದ ಲದಿಂದಾಗಿ ಗೊಂದಲದ ಸ್ಥಿತಿ ಏರ್ಪಡುತ್ತದೆ. ಸವರ್ಣೀಯ ಳೆಯರು ಲಿಂಗ ತಾರತಮ್ಯವನ್ನು ಅನುಭವಿಸಿದರೂ, ಮೇಲ್ಜಾತಿಗೆ ನ ಕಾರಣಕ್ಕಾಗಿಯೇ ಅನೇಕ ಸಾಮಾಜಿಕ, ಆರ್ಥಿಕ ಸ್ಥಾನ, ತ್ತುಗಳನ್ನು ಪಡೆದುಕೊಳ್ಳುತ್ತಾರೆ. ಆ ಸವಲತ್ತುಗಳನ್ನು ಕಾಯ್ದು ಳ್ಳುತ್ತಾರೆ. ಜಾತಿ, ಸಹೋದರಿತ್ವವನ್ನು ಅಳಿಸಿಹಾಕಿ ಮಹಿಳೆಯರನ್ನು ು ದೂರವಾಗಿಡುವಲ್ಲಿ ಅದ್ಭುತವಾದ ಯಶಸ್ಸನ್ನು ಪಡೆದಿದೆ..... ಪ್ರಧಾನತೆ ಕುರಿತು ದಲಿತ ಮಹಿಳೆ ಮತ್ತು ಸವರ್ಣೀಯ ಮಹಿಳೆಯ ಭವದಲ್ಲಿ ಏನೇ ಭಿನ್ನತೆ ಇರಲಿ ಜಾತಿಕರಣದ ಪ್ರಕ್ರಿಯೆಯಿಂದಾಗಿ ರ್ಣೀಯ ಪಿತೃ ಪ್ರಧಾನತೆಯ ಆಚರಣೆಗಳು ಕಟ್ಟಕೊನೆಯ ಯವರೆಗೂ ಹರಿದುಕೊಂಡು ಬಂದಿವೆ"[3] ಎನ್ನುತ್ತಾರೆ ಸ್ತ್ರೀವಾದಿ ಚಿಂತಕಿ ಉಮಾ ಚಕ್ರವರ್ತಿ. ದಲಿತ ಸಮುದಾಯದೊಳಗೆ ಪಿತೃಪ್ರಧಾನತೆ ಭಿನ್ನವಾಗಿದ್ದರೂ ಆಚರಣೆಯಲ್ಲಿದೆ. ದಲಿತ ಮಹಿಳೆ ಸಮಾನತೆಯನ್ನು ಸಾಧಿಸಿಕೊಂಡಿದ್ದಾಳೆ ಎಂಬುವುದಕ್ಕಿಂತ ಸವರ್ಣೀಯ ಮಹಿಳೆಯರಂತೆ ಸದ್ದಿಲ್ಲದೇ ಮೌನವಾಗಿ ಸಹಿಸಿಕೊಳ್ಳದೆ ದನಿ ಎತ್ತಿ ಪ್ರತಿಭಟಿಸುತ್ತಾಳೆ, ಅಸ್ತಿತ್ವ ಉಳಿಸಿಕೊಳ್ಳಲು ಕರಡಿಯಂತೆ ಹೆಣಗಾಡುತ್ತಾಳೆ ಎಂಬುದು ಸರಿ. ಕೆ.ಬಿ. ಸಿದ್ದಯ್ಯ, ಎನ್. ಕೆ. ಹನುಮಂತಯ್ಯ, ಕೆ. ರಾಮಯ್ಯ, ದೇವನೂರು ಮಹದೇವ ಹೀಗೆ ಹಲವು ದಲಿತ ಬರಹಗಾರರ ಬರವಣಿಗೆಯು ಹೆಣ್ಣನ್ನು ಜೀವ ಚೈತನ್ಯಕ್ಕೆ ಸಮೀಕರಿಸುವಂತಹುದು. ಒಟ್ಟಾರೆ ದಲಿತ ಸಮುದಾಯದ ಜೀವಪರತೆಯನ್ನು ಬಿಂಬಿಸುತ್ತದೆ.

ಕಳೆದೆರಡು ದಶಕಗಳಲ್ಲಿ ದಲಿತ ಸಮುದಾಯದೊಳಗೆ ಸಾಮಾನ್ಯ ವಾಗುತ್ತಿರುವ ವರದಕ್ಷಿಣೆ ಪೀಡೆ, ಹೊಸದಾಗಿ ನುಸುಳುತ್ತಿರುವ ಹೆಣ್ಣು ಭ್ರೂಣ ಹತ್ಯೆ, ಕೌಟುಂಬಿಕ ಹಿಂಸೆ, ಜಾತಿ–ವರ್ಗ ತಾರತಮ್ಯ ನನ್ನೊಳಗೆ ಆತಂಕ ಹುಟ್ಟಿಸುತ್ತವೆ.

ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುವ ಪುರುಷಪ್ರಧಾನತೆ, ಲಾಭಕೋರ ಆರ್ಥಿಕತೆ, ಜಾತಿ ವ್ಯವಸ್ಥೆಯ ಅಪವಿತ್ರ – ಅನೈತಿಕ ಮೈತ್ರಿಯು ಮಹಿಳೆಯರ, ಒಟ್ಟಾರೆ ದುಡಿದುಣ್ಣುವ ಜನರ ಚೈತನ್ಯವನ್ನು ಹತ್ತಿಕ್ಕಿ ಅವರ ಬೆವರಿನ ಫಲವನ್ನು ಮಾತ್ರ ನುಂಗಿ ನೊಣೆಯಲು ಏನೆಲ್ಲ ತಂತ್ರಗಳನ್ನು ಹೆಣೆದಿವೆ ಎಂಬುದನ್ನು ಕಾಣುತ್ತಲೇ ಬಂದಿದ್ದೇವೆ. ತಾನೇ ಪ್ರಧಾನವಾಗಬೇಕೆಂಬುದೆಲ್ಲವೂ ನಿಂತಿರುವುದು ಮತ್ತೊಬ್ಬರ ದಮನದ ಮೇಲೆ. ಪುರುಷಪ್ರಧಾನತೆ ಗಂಡಸರನ್ನೂ ಮನುಷ್ಯರನ್ನಾಗಿರಲು ಬಿಟ್ಟಿಲ್ಲ. ಪುರುಷಪ್ರಧಾನತೆಗೆ ಪರ್ಯಾಯ ಸಮಾನತೆಯೇ ಹೊರತು ಮಹಿಳಾಪ್ರಧಾನತೆ ಅಲ್ಲ. ಕಣ್ಣಿಗೆ ಕಾಣದ ಏಕಾಣು ಜೀವಿಯಿಂದ ಹಿಡಿದು ಬೃಹತ್‌ಗಾತ್ರದ ಆನೆಯವರೆಗೂ ವೈವಿಧ್ಯಮಯ ಜೀವಿಗಳು ಭೂಮಿಯಲ್ಲಿದ್ದರೂ ಅವು ಯಾವವೂ ಭೂಮಿಗೆ ಪ್ರಧಾನವೂ ಅಲ್ಲ; ಅಧೀನವೂ ಅಲ್ಲ. ಅವೆಲ್ಲವೂ ಭೂಮಿಯನ್ನು ಸದಾ ಚಲನಶೀಲ ವಾಗಿರಿಸಿರುವ ಜೀವ ಜಲದ ಕೊಂಡಿಗಳು.

ಸಂವೇದನೆಗಳೆಲ್ಲವೂ ತಾಯ್ತನದಂತೆ ಲಿಂಗಾತೀತವಾದ ಕೇವಲ ಮನುಷ್ಯ ಸಂವೇದನೆಗಳಷ್ಟೆ. ಪ್ರತಿಯೊಂದು ಜೀವಿಯೊಳಗಣ ಜೀವಪರ ಬೆಳಕನ್ನು ತಟ್ಟುವಂಥದ್ದು, ತಾನೂ ಉಳಿಯುತ್ತ, ಬೆಳೆಯುತ್ತಲೆ ಉಳಿಸಿ ಬೆಳೆಸುವಂಥದ್ದು. ಈ ಅರ್ಥದಲ್ಲಿ ದಲಿತ ಮಹಿಳಾ ಸಂವೇದನೆ ಮಾನವೀಯ ಸಂವೇದನೆಯೇ ಆಗಿದೆ. ಹಾಗಾಗಿಯೇ ಅದು ದಮನ, ತಿರಸ್ಕಾರವನ್ನು ಮೀರಿಯೂ ಮಣ್ಣಿನಲ್ಲಿ ಬೀಜದಂತೆ ಅಚ್ಚೊತ್ತಿಕೊಂಡು ಮೊಳೆಯುತ್ತ, ಬೆಳೆಯುತ್ತ ಸದ್ದಿಲ್ಲದೆ ನೆರಳಾಗುತ್ತ ಬಂದಿದೆ. ನನ್ನ ಅಧ್ಯಯನದ, ಅನುಭವದ ಮಿತಿಗಷ್ಟೆ ನಿಷ್ಠಳಾಗಿ ನನ್ನ ಮಾತುಗಳನ್ನಾಡಿದ್ದೇನೆ. ಮಾತನಾಡಲು ಕರೆದ, ಕೇಳಿಸಿಕೊಂಡ ಎಲ್ಲರಿಗೂ ವಂದನೆಗಳು. ಅಸ್ಪೃಶ್ಯರಲ್ಲೆ ಅಸ್ಪೃಶ್ಯರಾದ ಮಹಿಳೆಯರೆ ಹೆಚ್ಚಿನ ಸಂಖ್ಯೆಯಲ್ಲಿರುವ ಪೌರಕಾರ್ಮಿಕ ಬಂಧುಗಳೊಂದಿಗಿನ ಒಡನಾಟವು ನೀಡಿದ ಅನುಭವ ಅನನ್ಯವಾದುದು.

*(ಅಂಬೇಡ್ಕರ್ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾಲಯದಲ್ಲಿ ಓದಿದ ಪ್ರಬಂಧ)*

❑

---

1) ಮೇಲಿನ ಎರಡೂ ಉಲ್ಲೇಖಗಳನ್ನು ಸುನಂದಮ್ಮನವರ 'ಮಹಿಳಾ ಸಂಸ್ಕೃತಿ' ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.
2) Dalith Women's writings in Telugu.
3) Gendering Caste. (ಉಮಾ ಚಕ್ರವರ್ತಿ)

# ಕಲೆ ಕಟ್ಟಿಕೊಟ್ಟ ಹೊಸ ಆಯಾಮ

● *ಮಮತ ಜಿ. ಸಾಗರ*

ಭಾಷೆಯು ಪದಗಳಿಂದ ಅಕ್ಷರಗಳಿಂದ ತುಂಬಿಕೊಂಡಿರುವುದರಿಂದ, ಆ ಪದಗಳನ್ನು, ಅಕ್ಷರಗಳನ್ನು ವಿವಿಧ ಪ್ರಮಾಣಗಳಲ್ಲಿ ಬೆರಕೆ ಮಾಡುವುದರ ಮೂಲಕ ನಾವು ಭಾಷೆಯನ್ನು ಬಳಸುತ್ತಿರುತ್ತೇವೆ. ಭಾಷೆಯ ಈ ಸಲಕರಣೆಗಳ ಬಳಕೆಯ ಮೂಲಕ ದೃಶ್ಯಗಳನ್ನು ಕಟ್ಟುವ ಪ್ರಯತ್ನವನ್ನೂ ಮಾಡುತ್ತಿರುತ್ತೇವೆ. ಹೇಳಬೇಕಾದ್ದನ್ನು ಕಾಣಿಸುವುದೇ ಭಾಷೆಯ ಉದ್ದೇಶವಾಗಿರುತ್ತದಾದರೂ ನಾವದರ ಕಡೆಗೆ ಹೆಚ್ಚಿನ ಗಮನವನ್ನು ಕೊಡುವುದೇ ಇಲ್ಲ. ಈ ಪ್ರಯತ್ನವೆಲ್ಲ ಈಗಾಗಲೇ ನಮಗೆ ಪರಿಚಿತವಿರುವ ದೃಶ್ಯಗಳನ್ನು ಮಾತಿನ ಮೂಲಕ ಹಿಡಿದಿಡುವುದಕ್ಕಾಗೇ ನಡೆದಿರುತ್ತದೆ. ಅಂದರೆ, ಈಗಾಗಲೇ ದೊರಕುವ ದೃಶ್ಯಗಳನ್ನು ಕಟ್ಟುತ್ತಾ/ಒಡೆಯುತ್ತಾ ನಾವದರಲ್ಲಡಕಗೊಂಡ ಅರ್ಥಗಳ ಜೊತೆ ಜಗಳ ಮಾಡುತ್ತಿರುತ್ತೇವೆ. ಅಂದರೆ, ಹೊಸ ದೃಶ್ಯಗಳನ್ನು ಕಟ್ಟುವ ಬದಲು ಒಂದು ಸಂಸ್ಕೃತಿಯಲ್ಲಿ ಈಗಾಗಲೇ ಬೇರೂರಿರುವ ದೃಶ್ಯಗಳನ್ನು ಮತ್ತು ಅದರಲ್ಲಡಕವಾಗಿರುವ ಅರ್ಥಗಳನ್ನು ಮಾತ್ರವೇ ನಾವು ಪುನಃ ಪುನಃ ಒರೆಗೆ ಹಚ್ಚುವ ಕೆಲಸ ನಡೆಸಿರುತ್ತೇವೆ. ಆದ್ದರಿಂದಲೇ ಅನ್ನಿಸುತ್ತದೆ; ದಲಿತ, ಮಹಿಳಾ, ಅಂಚಿಗೆ ತಳ್ಳಲ್ಪಟ್ಟ (ಮಾರ್ಜಿನಲೈಜ್ಡ್) ಗುಂಪುಗಳಿಗೆ ಸೇರಿದ ಲೇಖಕರ ಬರವಣಿಗೆಯಲ್ಲಿ ಯಾವಾಗಲು ಶೋಷಣೆಯನ್ನು ಧಿಕ್ಕರಿಸುವ, ಒತ್ತಡವನ್ನು ಹತ್ತಿಕ್ಕುವ, ನೋವಿನ, ದುಃಖದ, ಸಂಕಟದ ಧ್ವನಿಗಳನ್ನು ಮಾತ್ರವೇ ಕಾಣಲು ಅಪೇಕ್ಷಿಸುತ್ತೇವೆ. ಈ ಅಪೇಕ್ಷೆಗೆ ತಕ್ಕ ಬರವಣಿಗೆ ಹೊರಬಂದಾಗ, ಈಗಾಗಲೇ ನಮಗೆ ಚಿರಪರಿಚಿತವಾದ ಪರಿಕಲ್ಪನೆಗಳು ಯಾವ ಚೌಕಟ್ಟ(ಫ್ರೇಮ್)ನಲ್ಲಿ ಯಾವುದನ್ನು ಹಿಡಿದಿಡಬೇಕೆಂಬುದನ್ನು ಸುಲಭದಲ್ಲಿ ನಿರ್ದೇಶಿಸುತ್ತಿರುತ್ತದೆ.

ಮುಖ್ಯವಾಗಿ ಇಂಥ ಗುಂಪುಗಳಿಗೆ ತಮ್ಮನ್ನು ಪ್ರತಿನಿಧಿಸಿಕೊಳ್ಳಲು ಬೇರೆಯೇ ನಿರೂಪಣೆಯ ಅಗತ್ಯವಿದೆ. ಯಾರ್ಯಾರು ಹೇಗಿರಬೇಕು, ಹೇಗೆ ಕಾಣಬೇಕು, ಯಾರ್ಯಾರ ನಡವಳಿಕೆಗಳು ಹೇಗೆ ಹೇಗೆ ಇರಬೇಕು ಎಂಬ ಒತ್ತಡ ದಿನೇ ದಿನೇ ಹೆಚ್ಚುತ್ತಿರುವ ಈ ಸಂದರ್ಭದಲ್ಲಂತೂ ಲೇಖಕಳಾಗಿ ನನಗೆ ಈ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚು ಇದೆ ಅನ್ನಿಸುತ್ತಿದೆ.

ಎಪ್ಪತ್ತರ ಮಹಿಳಾ ಚಳವಳಿಯು ವಿವಿಧ ಮಾಧ್ಯಮಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಧ್ವನಿಗಳನ್ನು ಜಾಗೃತಗೊಳಿಸಿತು. ಪುರುಷಪ್ರಧಾನ/ಪಿತೃಪ್ರಧಾನ ಮೌಲ್ಯಗಳನ್ನು ವಿರೋಧಿಸುವ ಹೊಸ ಅಲೆಯೇ ಹುಟ್ಟಿಕೊಂಡಿತು. ಈಗ ಮಹಿಳಾ ಚಳವಳಿಗೊಂದು ಹೊಸ ತಿರುವಿನ ಅವಶ್ಯಕತೆ ಇದೆ.

ರೂಪಣೆ (ಪ್ರೆಸೆಂಟೇಷನ್) ಹಾಗೂ ನಿರೂಪಣೆ (ರೆಪ್ರೆಸೆಂಟೇಷನ್ನು)ಗಳನ್ನು ಹೆಚ್ಚು ತಾದಾತ್ಮ್ಯದಿಂದ ಸಕಾರಾತ್ಮಕವಾಗಿ ಮಾಡಿದಾಗ ನಮ್ಮ ಧ್ವನಿಯು ನಮಗೂ ಹಾಗೂ ಇತರರಿಗೂ ಹೆಚ್ಚು ಶಕ್ತಿಯುತವಾಗಿ, ಆತ್ಮವಿಶ್ವಾಸ ಮತ್ತು ಭರವಸೆಯಿಂದ ಕೂಡಿರುವಂಥದ್ದಾಗಿ ಗೋಚರವಾಗುತ್ತದೆ. ಈ ಆತ್ಮವಿಶ್ವಾಸದ ಝಲಕನ್ನು ನಾನು ದೃಶ್ಯ ಮಾಧ್ಯಮದಲ್ಲಿ ಕೆಲಸ ಮಾಡುವ ಕಲಾವಿದರ ಕಲಾಕೃತಿಗಳಲ್ಲಿ ಕಂಡಿದ್ದೇನೆ. ಈ ಲೇಖನದಲ್ಲಿ ನನಗೆ ಇಷ್ಟವಾದ ನಾಲ್ಕು ಜನ ಮಹಿಳಾ ಕಲಾವಿದರ ಕೆಲ ಕೃತಿಗಳ ಮೂಲಕ ಈ ಸಕಾರಾತ್ಮಕವಾದ ಧ್ವನಿಯ ವಿವಿಧ ಆಯಾಮಗಳ ಬಗ್ಗೆ ಆಲೋಚಿಸುವ ಪ್ರಯತ್ನವನ್ನು ಮಾಡಿದ್ದೇನೆ.

ಕಣ್ಣ ಕಾಣ್ಕೆಗೆ ಗೋಚರವಾಗುವ ಅನುಭವಕ್ಕೂ ಆ 'ಅನುಭವ'ದ ಪ್ರಚಲಿತ ಮಾದರಿಗಳಿಗೂ ಅಜಗಜಾಂತರವಾದ ವ್ಯತ್ಯಾಸವಿರುತ್ತದೆ. ಉದಾಹರಣೆಗೆ 'ಹೆಣ್ಣಿನ ದೇಹ'ದ ಸುತ್ತ ಹೆಣೆದುಕೊಂಡಿರುವ ಡಿಸ್ಕೋರ್ಸನ್ನೇ ನೋಡಿ. ಅದು ಹೇಗಿರಬೇಕು, ಹಾಗೆ ಏಕಿರಬೇಕುವಿನಿಂದ ಹಿಡಿದು ಎಷ್ಟೆಷ್ಟು ತೋರಬೇಕು, ಏನೇನು ಮರೆ ಮಾಚಬೇಕು, ಅದರ ಪವಿತ್ರ, ಅಪವಿತ್ರತೆಗಳ






ಕುರಿತ ಮುಕ್ತವಾದ ಹಾಗೂ ಮಡಿವಂತಿಕೆಯ ಧೋರಣೆಗಳನ್ನು ಬೆಳೆಸಿಕೊಂಡು, ಇಂದಿನವರೆಗೂ ಧಾರಾಳವಾಗಿ ಚರ್ಚೆಗಳನ್ನು ನಡೆಸಿಕೊಂಡು, ಪ್ರಚಲಿತ ಮಾದರಿಗಳನ್ನು ಕಟ್ಟಿಕೊಂಡು ಬಂದಿದ್ದೇವೆ. ಆದರೆ, ಈ ಚರ್ಚೆಯ ಕೇಂದ್ರವಾದ ಅದೇ ದೇಹದ ನಮಗೆ ಗೊತ್ತು, ನಮ್ಮ ಮೊಲೆಗಳಾಗಲಿ, ಯೋನಿಯಾಗಲಿ, ದೇಹವಾಗಲಿ ಈ ಚರ್ಚೆಯ ಸರಹದ್ದಿಗೆ ಮಾತ್ರ ಸೀಮಿತ ಗೊಳ್ಳುವಂಥದ್ದಲ್ಲ ಅನ್ನುವುದು.

**'ನಾನು'**
**ಅಂದರೆ;**
**ಒಂದು ಜೊತೆ**
**ಮೆತ್ತಗಿನ ಮೊಲೆ,**
**ತೊಡೆ ಸಂದಲ್ಲಿ ಅಡಗಿದ**
**ಕತ್ತಲ ಕೋಶ**

*(ಮಮತಾ ಜಿ. ಸಾಗರ. ನದಿಯ ನೀರಿನ ತೇವ. 1998)*

ಆ ದೇಹವೇ ನಾವು, ನಾವೇ ಆ ದೇಹವಾಗಿ ನಮ್ಮಿರುವಿಕೆಯ ಅನುಭವವನ್ನು ನಾವು ಬದುಕುತ್ತಿರುವಾಗ ಈ ಸರಹದ್ದಿನಿಂದ ಸಾವಿರ ಗಾವುದ ದೂರದಲ್ಲುಳಿವ, ಈ ಚರ್ಚೆಯನ್ನು ಮೀರಿ ನಿಂತ ನಮ್ಮದೆಂಬ ಅನುಭವವನ್ನು ವ್ಯಕ್ತಪಡಿಸುವುದು ಬಹಳ ಮುಖ್ಯ ಅಲ್ಲವೆ? ನಮ್ಮ ಅನುಭವಗಳನ್ನೂ ಸಹ ನಮ್ಮೆದುರಿಗಿಟ್ಟ ಪ್ರಶ್ನೆಗಳ ಚೌಕಟ್ಟಿನೊಳಗೇ ಉಳಿವ ಉತ್ತರವನ್ನಷ್ಟೇ ಆಗಿಸಬೇಕಿಲ್ಲ ನಾವು.

ಯಾವ ದೃಶ್ಯಗಳನ್ನು ಕಟ್ಟುವುದಕ್ಕಾಗಿ ನಾವು ಪದಗಳನ್ನಿಟ್ಟುಕೊಂಡು ಹೆಣಗುತ್ತೇವೋ ಆ ದೃಶ್ಯಗಳನ್ನೇ ನೇರವಾಗಿ ಬಳಸಿ ದೃಶ್ಯ ಮಾಧ್ಯಮದಲ್ಲಿ ಕೆಲಸ ಮಾಡುತ್ತಿರುವ ಕಲಾವಿದರು ಹೊಸ ಅರ್ಥವನ್ನೊಳಗೊಂಡ ಹೊಸ ದೃಶ್ಯ ಭಾಷೆಯನ್ನು ಸೃಷ್ಟಿಸುತ್ತ ಬಂದಿದ್ದಾರೆ. ನಮ್ಮ ಬರವಣಿಗೆಯ ಭಾಷೆಗೊದಗುವ ನಿಯಮಗಳ ಮಿತಿಗಳಲ್ಲೇ ಕಲಾಕೃತಿಗಳನ್ನು ನೋಡ ಹೊರಟಾಗ, ಭಾಷೆ ನಮಗೊದಗಿಸಿರುವ ಸಿದ್ಧ ಅರ್ಥಗಳ ಮೂಲಕ ಮಾತ್ರ ನಾವು ನಮ್ಮೆದುರಿಗಿರುವ ಸೃಜನಾತ್ಮಕವಾದ ಕೃತಿಯನ್ನು ಸೃಜಿಸಿಕೊಂಡು ಅರ್ಥೈಸಿಕೊಳ್ಳುತ್ತಿರುತ್ತೇವೆ. ಆದರೆ ಅಲ್ಲಿ ಸೃಜಿಸಿಕೊಳ್ಳಬೇಕಾದ್ದೆ (ವಿಷುವಲ್ಲುಗಳೇ) ಕಣ್ಣೆದುರಿಗಿದ್ದು, ಸಿದ್ಧ ಅರ್ಥ ವಲಯವನ್ನು ಮೀರಿ ಅವುಗಳ ಬಳಕೆಯಾಗುತ್ತಿರುವಾಗ ಅವು ಸ್ಫೋಟಿಸುವ ಹೊಸ ಅರ್ಥಗಳು, ಕಟ್ಟುವ ಹೊಸ ದೃಶ್ಯಕಲೆಗಳು ಸಿದ್ಧ ಮಾದರಿಯನ್ನು ಮೀರಿದ ಅನುಭವಕ್ಕೆ ಕೆಲವೊಮ್ಮೆ ತೀರ ಹತ್ತಿರವಾಗಿಬಿಡುತ್ತವೆ.

ಡೊಮೆಸ್ಟಿಸಿಟಿಯ ಪರಿಕರಗಳನ್ನೇ ನೇರವಾಗಿ ಬಳಸಲಾಗಿರುವ ಶೀಲಾಗೌಡ ಅವರ ಕಲಾಕೃತಿಗಳು ವಿಶೇಷವಾದವು. ಇವು, ಡೊಮೆಸ್ಟಿಸಿಟಿಯ ಅನುಭವವನ್ನು ಕುರಿತು ಮಾತ್ರ ಹೇಳುವುದರ ಬದಲು, ಆ ಅನುಭವದ ಸಲಕರಣೆಗಳನ್ನೇ ಕೃತಿಯಲ್ಲಿ ಬಳಸುವುದರ ಮೂಲಕ ಆ ಅನುಭವಗಳನ್ನೇ ಇನ್ನೂ ಹೆಚ್ಚು ತೀವ್ರವಾಗಿ ನೋಡುಗರಲ್ಲಿ ಸೃಜಿಸುತ್ತವೆ. ಸೆಗಣಿಯನ್ನು ಕ್ಯಾನ್ವಾಸಿನ ಮೇಲೆ ಬಳಸಿ ಮೂಡಿಸಿದ ಕಲಾಕೃತಿಗಳಿರಬಹುದು, ಬೆರಣಿ, ಕುಂಕುಮ, ಸೂಜಿ ಕೊನೆಯ ಕುಂಕುಮ ಲೇಪಿತ ದಾರಗಳು, ಇದ್ದಲು ಮುಂತಾದವನ್ನು ಬಳಸಿ ಮಾಡಿದ ಇನ್ಸ್ಟಲೇಷನ್ನುಗಳಿರಬಹುದು; ಡೊಮೆಸ್ಟಿಸಿಟಿಯ ಕಾಯಿದೆಗಳು ಹುಟ್ಟು ಹಾಕುವ ಅಧಿಕಾರ, ಆ ಅಧಿಕಾರ ಚಲಾಯಿಸುವ ಕ್ರೌರ್ಯ, ದೌರ್ಜನ್ಯ, ರಕ್ತಪಾತಗಳು, ಸುಟ್ಟ ದೇಹಗಳು, ಅಸಹಾಯಕತೆ, ನೋವು ಎಲ್ಲವನ್ನೂ ಏಕಕಾಲಕ್ಕೆ ಕಣ್ಣೆದುರು ಕಟ್ಟುವ ಈ ಕಲಾಕೃತಿಗಳು ವಿಶೇಷವಾದವು. ಗ್ರಾಮೀಣತೆ, ಬಡತನ, ಧರ್ಮ, ರಾಜಕೀಯ ಸಂದರ್ಭಗಳ ಜೊತೆಗೆ ಡೊಮೆಸ್ಟಿಸಿಟಿಯ, ತನ್ಮೂಲಕ ಮಹಿಳೆಯ ಸಂಬಂಧಗಳ ವಿವಿಧ ಸ್ತರಗಳನ್ನು ಈ ಕಲಾಕೃತಿಗಳು ತೆರೆದಿಡುತ್ತವೆ. ಮಹಿಳೆಗೇ ಸೀಮಿತವಾದ್ದು ಎಂದು ಪರಿಗಣಿಸಲಾದ ಸರಕುಗಳನ್ನೇ ಉಪಕರಣವಾಗಿ ಬಳಸುವುದರ ಮೂಲಕ ಶೀಲಾ ಅವರ ಕೃತಿಗಳು 'ದೃಶ್ಯಕಲೆ'ಯ ಮಾಧ್ಯಮವನ್ನೇ ಪುನರ್ವ್ಯಾಖ್ಯಾನಿಸುವುದಲ್ಲದೆ, ಇಲೀಟಾದ ಗ್ಯಾಲರಿ ಸ್ಪೇಸುಗಳಲ್ಲಿ ಇಂಥ ಕಲಾಕೃತಿಗಳು ಸ್ಥಾಪಿತವಾಗುವುದರ ಮೂಲಕ ಈ ಕೃತಿಗಳು, 'personal is political' ಎಂಬ ಹೇಳಿಕೆಯನ್ನು ಹೆಚ್ಚು ತೀವ್ರವಾಗಿ ಮಂಡಿಸುತ್ತವೆ. 'and tell him of my pains', ಸರಣಿಯ ಕಲಾಕೃತಿಗಳು ಇದಕ್ಕೊಂದು ಉದಾಹರಣೆ.

ಮಹಿಳಾ ಪ್ರತಿನಿಧೀಕರಣದ ಇನ್ನೊಂದು ಆಯಾಮ ಮಹಿಳೆಯ ವಿವಿಧ ನಿರೂಪಣೆಗಳನ್ನು, ಸಾಧನೆಗಳನ್ನು, ಪಾತ್ರಗಳನ್ನು ಅವುಗಳ ಸಕಾರಾತ್ಮಕ ಅಂಶಗಳ ಮೂಲಕ ಪ್ರಖರವಾಗಿಸುವುದು. ಅದನ್ನು ನಾಟಕೀಕರಣ (ಡ್ರಮಟೈಜ್) ಮಾಡುವುದು ಹಾಗು ಉತ್ಪ್ರೇಕ್ಷೆ ಮಾಡಿ ಎದುರಿಗಿಡುವುದು. ಎನ್. ಪುಷ್ಪಮಾಲಾ ಅವರ ಕೃತಿಗಳಲ್ಲಿ ಇಂಥ ಪ್ರಯತ್ನವನ್ನು ಕಾಣಬಹುದು. ಅವರ ಫ್ಯಾಂಟಮ್ ಲೇಡಿ ಹಾಗೂ ಕ್ಲಾರೆ ಅರ್ನಿಯವರೊಡಗೂಡಿ ಕೈಗೊಂಡ 'ದಕ್ಷಿಣ ಭಾರತದ ನಾರಿಯರು' ಸರಣಿ ಚಿತ್ರಗಳ ಯೋಜನೆ ಬಹಳ ವಿಶೇಷವಾದ್ದು. ಸಾಂಪ್ರದಾಯಿಕ ಮಿನಿಯೇಚರ್ ಚಿತ್ರಗಳಲ್ಲಿ ವಿಶೇಷವಾಗಿ ಕಂಡುಬರುವ ಮಹಿಳೆಯರು ಅದೇ ಸ್ಟೈಲಿನಲ್ಲಿ ಪುಷ್ಪಮಾಲಾ ಅವರ ರೂಪ ಹೊತ್ತು, ಪುಷ್ಪ ಅವರ ಕಲಾಕೃತಿಗಳಲ್ಲಿ ಪುನರ್ನಿರ್ಮಾಣಗೊಳ್ಳುತ್ತಾರೆ. ಚಾರಿತ್ರಿಕ ದಾಖಲೆಗಳ ಹಾಗೆ ಕಾಣುವ ಸೆಪಿಯಾ ಟೋನಿನ ಈ ಫೋಟೋಗಳು ವಿವಿಧ ಹೆಂಗಸರನ್ನು ಅವರ ಜನಜನಿತ ಸಂದರ್ಭಗಳಲ್ಲಿ

ಹಿಡಿದಿಡುತ್ತವೆ. ಪ್ರತಿಯೊಂದು ಚಿತ್ರಗಳಲ್ಲೂ ಆಯ್ದ ನಿರ್ದಿಷ್ಟ ಪಾತ್ರದ ಹಾಗೆ ಕಲಾವಿದರೇ ಸಜ್ಜಾಗಿ ಫೋಟೋ ತೆಗೆಸಿಕೊಂಡಿರುವುದರಿಂದ, ಎಲ್ಲ ಪಾತ್ರಗಳೂ ಒಂದೇ ರೀತಿ ಕಾಣುತ್ತವೆ. ಅಥವಾ, ಒಂದೇ ವ್ಯಕ್ತಿಯು ಎಲ್ಲ ಪಾತ್ರಗಳಲ್ಲೂ ಕಾಣಿಸಿಕೊಂಡಹಾಗಿರುತ್ತದೆ. ಜೋಗಿನಿ, ತಾಯಿ, ರಾಣಿ, ಕ್ರೈಸ್ತ ನನ್, ಸರ್ಕಸ್ಸಿನ ಹುಡುಗಿ, ಹೀಗೆ ಒಂದಲ್ಲ.. ಎರಡಲ್ಲ.. ಎಲ್ಲರೂ ನಿರಂತರವಾಗಿ ಸಮಕಾಲೀನ ಸಂದರ್ಭಗಳಲ್ಲಿ ಪುನರ್ನಿರ್ಮಾಣಗೊಳ್ಳುತ್ತಾರೆ. ಸಾಂಪ್ರದಾಯಿಕವಾದ ಅರ್ಥವಂತಿಕೆಗಳನ್ನು ಲೇವಡಿ ಮಾಡುವ ಸೆನ್ಸ್ ಆಫ್ ಹ್ಯೂಮರ್ ಪುಷ್ಪ ಅವರ ಕಲಾಕೃತಿಗಳ ವಿಶೇಷ ಗುಣ. ರಾಷ್ಟ್ರೀಯತೆ ಹಾಗೂ ಮಹಿಳಾ ಪ್ರತಿನಿಧೀಕರಣಗಳ ಸುತ್ತ ಇರುವ ಇವರ 'ರಾಷ್ಟ್ರೀಯ ಖೀರ್' ಕಿರುಚಿತ್ರ ಒಂದು ಉತ್ತಮ ಉದಾಹರಣೆ. ನಾಲ್ಕನೆ ಹೆನ್ರಿ ದೊರೆಯ ಪ್ರೇಯಸಿ, 26 ವಯಸ್ಸಿನ ಗೇಬ್ರಿಯಲ್ ದೆಸ್ತ್ರೀಯ ಅಕಾಲಿಕ ಮರಣ/ಕೊಲೆಯ ಸುತ್ತ ಹೆಣೆದುಕೊಳ್ಳುವ 'ಪ್ಯಾರಿಸ್ ಆಟಮ್' ಚಿತ್ರ ಕುತೂಹಲಕಾರಿಯಾಗಿದ್ದು ಥ್ರಿಲ್ಲರ್ ಕಥೆಯ ನಿರೂಪಣೆಯನ್ನು ಮೈಗೂಡಿಸಿಕೊಂಡಿರುವಂಥದ್ದು. ಪ್ಯಾರಿಸ್‌ನಲ್ಲಿದ್ದಾಗ ತೆಗೆದ ಕಪ್ಪು-ಬಿಳಿ ಫೋಟೊಗಳನ್ನಾಧರಿಸಿ ತೆಗೆದಿರುವ ಚಿತ್ರವಿದು. ಕಲಾವಿದರಿದ್ದ ಅಪಾರ್ಟ್‌ಮೆಂಟಿನಲ್ಲಿ ಗೇಬ್ರಿಯಲ್ಲಳ ಭೂತ ಕಾಣಿಕೊಳ್ಳುವ ಕಾಲ್ಪನಿಕ ಕಥಾನಕದಿಂದ ಆರಂಭವಾದ ಈ ಸಿನೇಮ ಕ್ರಮೇಣ, ಗೇಬ್ರಿಯಲ್ಲಳನ್ನು ಚಿತ್ರಿಸಿರುವ ಪೈಂಟಿಂಗುಗಳನ್ನು, ಅವಳ ಬಗ್ಗೆ ದಾಖಲಾಗಿರುವ ಚಾರಿತ್ರಿಕ ಅಂಶಗಳನ್ನು ಹಾಗೂ ಅದನ್ನು ಕುರಿತ ಕಲಾವಿದರ ಅನಿಸಿಕೆಗಳನ್ನು ಹೀಗೆ ಗೇಬ್ರಿಯಲ್ಲಳ ಸಾವಿನ ಸುತ್ತ ಕುತೂಹಲಕಾರಿಯಾಗಿ ಮೂಡಿಬರುತ್ತದೆ. ಪುಷ್ಪ ಅವರ ಕಲಾಕೃತಿಗಳು ಚರಿತ್ರೆ ಮತ್ತು ಸಮಕಾಲೀನತೆಗಳ ನಡುವೆ ಜೀಕು ಹಾಕುವ ಮಹಿಳಾ ಚಿತ್ರಣಗಳ ಸಮಷ್ಟಿಯನ್ನು ಸೆಲೆಬ್ರೇಟ್ ಮಾಡುವ ಹಾಗೆ ಮೂಡಿಬರುತ್ತವೆ.

ಹೀಗೆ, ಸಮಕಾಲೀನ ಕಲಾವಿದರು 'ಮಹಿಳೆ'ಯ ಪ್ರತಿನಿಧೀಕರಣವನ್ನು ಗುಣಾತ್ಮಕವಾಗಿ ನೋಡುತ್ತ ಮಹಿಳೆಯ ಅಸ್ತಿತ್ವವನ್ನೇ ಸಂಭ್ರಮಿಸುತ್ತಾರೆ. ಮಹಿಳೆಗೂ ಅವಳ ದೇಹಕ್ಕೂ ಬಿಡಲಾರದ ನಂಟು. ರೂಢಿಗತವಾಗಿ, ಮಹಿಳೆಯನ್ನು ಅವಳ ದೇಹದ ಮೂಲಕ ಮತ್ತು ಅವಳ ದೇಹವನ್ನು 'ಮಹಿಳೆ' ಎಂಬ ಪರಿಕಲ್ಪನೆಯ ಮೂಲಕ ಅರ್ಥಮಾಡಿಕೊಳ್ಳಲಾಗುತ್ತದೆ. ಈ ಅರ್ಥವಂತಿಕೆಯ ಹಿಂದೆ ಇರುವ ಸಾಂಪ್ರದಾಯಿಕ ಡಿಸ್ಕೋರ್ಸಿನ ಬಗ್ಗೆ ಹೊಸದಾಗೇನೂ ಹೇಳಬೇಕಾಗಿಲ್ಲ. ದೇಹವನ್ನೇ ಕೇಂದ್ರವಾಗಿಟ್ಟುಕೊಂಡು ಅದರ ಸುತ್ತ ಕಲಾಕೃತಿಗಳನ್ನು ನಿರ್ಮಿಸುವ ಕಲಾವಿದರು ಸುರೇಖ. 'Between Fire and Sky', 'Reaching Myself'ಗಳಂಥ ಅವರ ವಿಡಿಯೊ ಇನ್ಸ್ಟಲೇಷನ್ನುಗಳು ಮಹಿಳೆಯ ದೇಹದ ಬಗ್ಗೆ ಇರುವ ಸಾಂಪ್ರದಾಯಿಕ ದೃಷ್ಟಿಕೋನವುಳ್ಳ ಪ್ರತಿಮೆಗಳನ್ನು ಮೀರಿ ಮೂಡಿಬರುತ್ತವೆ. 'ಮೀರಿ ಮೂಡಿಬರುತ್ತದೆ'ಂದು ಒತ್ತಿ ಹೇಳಬೇಕಾಗಿದೆ. ಏಕೆಂದರೆ ಈ ಇನ್ಸ್ಟಲೇಷನ್ನಿನ ಮುಂದೆ ನಿಂತಾಗ ಆಗುವ ಅನುಭವವೇ ಅಂಥದು! ಬೆಂಕಿಯಲ್ಲಿ ಮೂಡಿದ ಮನೆಗಳನ್ನು ಬೃಹದಾಕಾರದಲ್ಲಿ ಹಾರುತ್ತ ಕುಂಟೊ-ಬಿಲ್ಲೆಯಾಟವನ್ನು ಆಡುವ ಹುಡುಗಿಯ ಆಟ ಆಕಾಶದ ಉದ್ದಗಲಕ್ಕೂ ಹರಡುತ್ತದೆ. ಈ ಕಲಾಕೃತಿಯನ್ನು ನೋಡುತ್ತ ನಿಂತಹಾಗೆ; ಆ ಆಟ ನಮ್ಮದಾಗುತ್ತದೆ, ನಮ್ಮೊಳಗಿರುವ ಆ ಹುಡುಗಿ ನಮಗೆ ಗೋಚರವಾಗುತ್ತಾಳೆ.

ಕಲಾವಿದರನ್ನೂ ಕಲಾಕೃತಿಯ ಒಂದು ಭಾಗವಾಗಿಸಿಕೊಂಡಂಥದ್ದು 'Reaching Myself' ಎಂಬ ಇನ್ಸ್ಟಲೇಷನ್. ಈ ಕೃತಿಯಲ್ಲಿ, ಸಮುದ್ರದಲೆಗಳು ಅಪ್ಪಳಿಸುತ್ತ, ಆ ಬಿರುಸಿಗೆ ಸಿಕ್ಕ ಈ ಕಲಾವಿದರ ದೇಹ ಹೊರಳುತ್ತ ಉರುಳುತ್ತ ದಿಕ್ಕಾಪಾಲಾಗಿ ಹೋಗುತ್ತಿರುವ ಚಿತ್ರವನ್ನು ಚಾಚಿಕೊಂಡ ಗೋಡೆಯ ಅಂಚಿಗೆ ಪ್ರೊಜೆಕ್ಟ್ ಮಾಡಲಾಗುತ್ತದೆ. ಪ್ರೊಜೆಕ್ಟ್ ಆಗುತ್ತಿರುವ ಈ ದೇಹಗಳ ಚಿತ್ರಗಳು ಕ್ರಮೇಣ ಕೋಣೆಯ ಮಧ್ಯದಲ್ಲಿ ಮಲಗಿರುವ ಕಲಾವಿದರ ದೇಹದತ್ತ ಸರಿಸರಿದು ಅದರಲ್ಲಿ ಬೆರೆತು ಹೋಗುತ್ತದೆ. ನಾವೆಂಬ ನಮ್ಮ ದೇಹದ ವೈಶಿಷ್ಟ್ಯದಷ್ಟೇ ಮುಖ್ಯ ನಮ್ಮ ದೇಹವೆಂಬ ನಮ್ಮ ಅಸ್ತಿತ್ವ. ಮಹಿಳಾ ಪ್ರತಿನಿಧೀಕರಣದ ಪ್ರತಿಮೆಗಳನ್ನೇ ಕೃತಿಕಟ್ಟುವ ಸಲಕರಣೆಗಳನ್ನಾಗಿ ಕಲಾವಿದರು ಬಳಸಿಕೊಂಡಿದ್ದಾರೆ.

ಅರ್ಥವಂತಿಕೆ ಮತ್ತು ಅಸ್ತಿತ್ವಗಳ ತಾಕಲಾಟದ ಸುತ್ತ ಮೂಡುತ್ತದೆ ಶಾಂತಾಮಣಿಯವರ ಕಲಾಕೃತಿಗಳು. ಅರೆ ಸುಟ್ಟ ಬಸುರಿ ಹೆಂಗಸಿನ ಶಿಲ್ಪ, ಮೂರು ಜಾಡಿಗಳು, ಹಲವು ಇನ್ಸ್ಟಲೇಷನ್ನುಗಳನ್ನೊಳಗೊಂಡ ಶಾಂತಾಮಣಿಯವರ ಇತ್ತೀಚಿನ ಕಲಾ ಪ್ರದರ್ಶನ 'Frozen Phoenix'ನ್ನು ನಾನು ನೋಡಿದ್ದೇನೆ. ದುರಂತಗಳನ್ನು, ಆ ದುರಂತಗಳು ಬಿಟ್ಟುಹೋದ ವಿಕೃತಿಯನ್ನು ಅಷ್ಟೇ ತೀವ್ರವಾಗಿ ಹಿಡಿದಿಡಲು ತಕ್ಕ ಸರಕನ್ನು ಕಲಾವಿದರು ಬಳಸುತ್ತಾರೆ. ಆ ಸರಕಿನ ಅಂಗವಾಗಿ ಬರುವ ವಸ್ತುವಿಗೂ ಆ ದುರಂತದ ಸಹಜ ಪರಿಚಯವಿರಬೇಕು, ಆಗಲೇ ಆ ವಸ್ತುವನ್ನು ಬಳಸಿ ಹೇಳಬೇಕಾದ್ದನ್ನು ಹೇಳಿದಾಗ ಹೇಳಬೇಕಾದ್ದಕ್ಕೆ ಹೇಳುವ ಸಹಜ ಶಕ್ತಿ ಬಂದೀತು ಅನ್ನುವುದನ್ನು ಇವರ ಕಲಾಕೃತಿಗಳು ಸ್ಪಷ್ಟಪಡಿಸುತ್ತವೆ. ತಾನು ಸುಟ್ಟಾಗಲೇ ಸುಡುವ ಅನುಭವವನ್ನು ಹೇಳಲಾದೀತು ಎಂಬಂತೆ ಇದ್ದಿಲ ಚೂರುಗಳನ್ನು ಸಮೀಕರಿಸಿ, ಜೋಡಿಸಿ, ಕಲಾಕೃತಿಗಳನ್ನು ಸೃಷ್ಟಿಸಲಾಗಿದೆ. ಈ ಕಲಾಕೃತಿಗಳಲ್ಲಿ ಕೃತಿಯ ಅಂತಿಮ ರೂಪಕ್ಕೆ ರೂಪುಕೊಡುವುದು ಅದನ್ನು ಒಡಮೂಡಿಸಲು ಬಳಸಲಾದ ಸರಕು. ಕೃತಿಯ ಸಾರ್ಥಕತೆ ಅಡಗಿರುವುದೂ ಅದರ ನಿರ್ಮಾಣದಲ್ಲಿ ಬಳಸಲಾದ ಸಾಮಗ್ರಿಯಲ್ಲೇ. ಸಾಮಗ್ರಿಯನ್ನೊಳಗೊಂಡ ಕಲಾಕೃತಿಯೋ ಅಥವ ಕಲಾಕೃತಿಯನ್ನೊಳಗೊಂಡ ಸಾಮಗ್ರಿಯೋ ಅಥವಾ ಈ ಎರಡರ ಜಕ್ಸ್ಟಪೊಸಿಷನ್ನೋ ಬಿಡಿಸಿ ಹೇಳಲಾಗದು. ಒಳಗೊಳ್ಳುವಿಕೆ ಹಾಗೂ ಒಡಮೂಡಿಸುವಿಕೆಗಳ ನಡುವಿನ ಅಂತರವನ್ನು ಸಂಪೂರ್ಣವಾಗಿ ತೊಡೆದುಹಾಕಿದಂತೆ ಮೂಡಿಬರುತ್ತವೆ ಶಾಂತಾಮಣಿಯವರ ಕಲಾಕೃತಿಗಳು. ಇಂಥ ಅಮೂರ್ತತೆ ಕಲಾಕೃತಿಗೆ ಹೆಚ್ಚಿನ ಆಯಾಮವನ್ನು ತಂದುಕೊಡುತ್ತದೆ.

ಪೈಂಟಿಂಗ್, ಶಿಲ್ಪ, ಇನ್ಸ್ಟಲೇಷನ್ನುಗಳು, ಫೋಟೋಗ್ರಫಿ, ವಿಡಿಯೊ, ವಿಡಿಯೋ ಇನ್ಸ್ಟಲೇಷನ್ನುಗಳು ಹೀಗೆ ದೃಶ್ಯಕಲೆಯ ಎಲ್ಲ ಆಯಾಮಗಳಲ್ಲೂ ತೊಡಗಿಸಿಕೊಂಡಿರುವ ಈ ಕಲಾವಿದರು ತಾಂತ್ರಿಕವಾಗಿ ಪ್ರಖರವಾದ ಪರಿಣತಿಯನ್ನುಳ್ಳವರು. ಮಹಿಳಾ ಪ್ರತಿನಿಧೀಕರಣಕ್ಕೆ ಮುಖ್ಯಧಾರೆಯಿಂದ ವಿಶೇಷವಾಗಿ ಭಿನ್ನವಾದ ಸ್ಥಾನವನ್ನು ಆಗ್ರಹ ಮಾಡುವುದರ ಬದಲು ಈ ಕಲಾವಿದರು ಅದನ್ನೂ ಮುಖ್ಯಧಾರೆಯಲ್ಲೇ ಮುಖ್ಯ ಧ್ವನಿಯಾಗಿ ಸೇರ್ಪಡಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಭಾಷೆ ಹಾಗೂ ಅದರ ಬಳಕೆಗೆ ಈ ಗುಣವನ್ನು ಮೈಗೂಡಿಸಿಕೊಳ್ಳುವ ಅವಶ್ಯಕತೆಯಿದೆ. ❑

# ಸುರೇಖ ಅವರ ಕಲಾಕೃತಿಗಳು

ವಿಡಿಯೋ ಇನ್‌ಸ್ಟಲೇಷನ್ – 'ಬಿಟ್ವೀನ್ ಫೈರ್ ಅಂಡ್ ಸ್ಕೈ'



ತ್ರೀ ಫ್ರಾಗ್ಮೆಂಟೆಡ್ ಆ್ಯಕ್ಷನ್ಸ್ ಆಫ್ ಸೈಲೆನ್ಸ್

# ದಿಟ್ಟಿಸಿ ನೋಡುವ 'ವಸ್ತು'ಗಳಿಂದ ಮರು ದಿಟ್ಟ ನೋಟ



• *ಜಿ. ಸು. ಕೃಷ್ಣಸೆಟ್ಟಿ*

**ಶ**ತಮಾನಗಳಿಂದಲೂ ಮಹಿಳೆಯರನ್ನು 'ದಿಟ್ಟಿಸಿ ನೋಡುವ ವಸ್ತುಗಳು' (object of gaze) ಎಂಬುದಾಗಿ ಪರಿಗಣಿಸಿದ್ದುದೇ ಹೆಚ್ಚು. ತನ್ನ 'ವೇಸ್ ಆಫ್ ಸೀಯಿಂಗ್' ಪುಸ್ತಕದಲ್ಲಿ ಜಾನ್ ಬರ್ಜರ್ 'ಹೆಣ್ಣು ನೋಡಲ್ಪಡುತ್ತಾಳೆ ಮತ್ತು ನೋಡುತ್ತಿರುವ ಕಣ್ಣು ಗಂಡು' ಎಂದು ಹೇಳುವ ವ್ಯಾಖ್ಯೆಯೂ ಇದೇ ಧಾಟಿಯಲ್ಲಿದೆ. ಹೀಗೆ ದಿಟ್ಟಿಸಿದ ನೋಟಕ್ಕೆ ತುತ್ತಾದ (ಆ ಕುರಿತ ಚರ್ಚೆ ಇಲ್ಲಿ ಅನವಶ್ಯಕ) ಮಹಿಳೆಯರು ಈ ಹಿಂದೆ ಪುರುಷರಿಗೆ ಸಮಾನವಾಗಿಯಲ್ಲದಿದ್ದರೂ (ಇದಕ್ಕೆ ಹಲವಾರು ಕಾರಣಗಳಿವೆ) ತಮ್ಮ ಮಿತಿಗಳ ನಡುವೆಯೂ ಚಿತ್ರ, ಶಿಲ್ಪಗಳ ಅಭಿವ್ಯಕ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ನಡುವೆ ಕುತೂಹಲಕಾರಿಯಾದ, ಆದರೆ ಅಷ್ಟೇನೂ ಪ್ರಚಾರ ಪಡೆದಿರದ ಒಂದು ಅಂಶವನ್ನು ಉಲ್ಲೇಖಿಸಲು ಬಯಸುತ್ತೇನೆ. ನಮ್ಮ ದೇಶದ ಚಿತ್ರಕಲೆಯಲ್ಲಿ ಮಿಥಿಲಾ ಸಂಪ್ರದಾಯ ಎನ್ನುವ ಪಂಥವೊಂದಿದೆ. ಇದರಲ್ಲಿ ಕೇವಲ ಮಹಿಳೆಯರು ಮಾತ್ರವೇ ದೇವ-ದೇವತೆಗಳ ಚಿತ್ರಗಳನ್ನು ರಚಿಸುವ ಸಂಪ್ರದಾಯವಿದೆ. ಹೀಗೆ ಸುಮಾರು ಮೂರುಸಾವಿರ ವರ್ಷಗಳ ಹಿಂದಿನಿಂದಲೂ ಈ ಸಂಪ್ರದಾಯದಲ್ಲಿ ಮಹಿಳೆಯರು ಮಾತ್ರವೇ ಚಿತ್ರಗಳನ್ನು ರಚಿಸಿ, ಅವುಗಳನ್ನು ದೇವಾಲಯಕ್ಕೆ ಬರುವ ಭಕ್ತಾದಿಗಳಿಗೆ ಸ್ಮರಣಿಕೆಯಾಗಿ ಮಾರಾಟ ಮಾಡುತ್ತಿದ್ದಾರಲ್ಲದೆ, ಅದು ಇಂದಿಗೂ ಮುಂದುವರಿದಿದೆ ಎಂಬುದಾಗಿ ವೆಬ್‌ನಲ್ಲಿ ಹೇಳಲಾಗಿದೆ. ನವದೆಹಲಿಯ ಕನಾಟ್ ಪ್ಲೇಸ್ ಮತ್ತಿತರ ಕಡೆಗಳಲ್ಲಿ ಇಂದಿಗೂ ಮಹಿಳೆಯರು ಈ ಬಗೆಯ ಕೃತಿಗಳ ಮಾರಾಟ ಮಾಡುತ್ತಿರುವುದನ್ನು ನಾವು ಇದರ ಮುಂದುವರಿದ ಭಾಗವಾಗಿ ನೋಡಬಹುದಾಗಿದೆ. ಪ್ರಾಯಶಃ ವಿಶ್ವದ ಕಲಾಸಂಪ್ರದಾಯಗಳಲ್ಲಿಯೇ ಅದ್ವಿತೀಯವಾದುದು ಎನ್ನಬಹುದಾದ ಇದು ನಮ್ಮ ದೇಶದ ಪದ್ಧತಿ ಎಂದರೆ ಆಶ್ಚರ್ಯವೆನಿಸದಿರದು. ಹೀಗಿರುವಾಗ ಇಂದಿನ ಸನ್ನಿವೇಶದಲ್ಲಿ ಪಾಶ್ಚಾತ್ಯ ದೇಶಗಳಲ್ಲಿರುವ (ನಮ್ಮ ದೇಶದಲ್ಲಿಯೂ ಇದ್ದರೂ ಅದನ್ನು ಇಲ್ಲಿ ಚರ್ಚಿಸುತ್ತಿಲ್ಲ) ಫೆಮಿನಿಸ್ಟ್ ಕಲಾ ಚಳವಳಿಯಲ್ಲಿನ ಕೆಲವೊಂದು ಅಂಶಗಳನ್ನು ಮಾತ್ರವೇ ಪ್ರಸ್ತಾಪಿಸುವುದು ಇಲ್ಲಿ ನನ್ನ ಆಶಯವಾಗಿದೆ.

ನಮ್ಮ ಕಲೆಗಳ ಇತಿಹಾಸವನ್ನು ನೋಡಿದರೆ, ಶತಮಾನಗಳಿಂದಲೂ ಚಿತ್ರರಚನೆಯಲ್ಲಿ ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ (ವಿಶೇಷವಾಗಿ ಜನಪದ ಪ್ರಕಾರದಲ್ಲಿಯೂ ಕೂಡ) ನಮ್ಮ ಕಲಾ ಇತಿಹಾಸ ಅದನ್ನು ಉಪೇಕ್ಷಿಸಿದೆ ಎನಿಸುತ್ತದೆ. ಕೆಲವೊಮ್ಮೆಯಂತೂ 'ಅಡಿಗೆ ಮನೆಯ ಸಾಹಿತ್ಯ' ಎಂಬಂತೆ ಅವರಿಗೆ ಸಲ್ಲಬೇಕಾದ ನಿಜ ಸಾಂಸ್ಕೃತಿಕ ಗೌರವವನ್ನು ಈ 'ಸೆಕೆಂಡ್ ಸೆಕ್ಸ್'ಗೆ ಪುರುಷಪ್ರಧಾನ ಸಮಾಜಗಳು ನೀಡಿಲ್ಲ, "ಹಿಂದೆ, ಮುಂದೆ, ಎಂದೆಂದಿಗೂ ಶೇಕ್ಸ್‌ಪಿಯರ್‌ನಂತಹ ಪ್ರತಿಭಾವಂತ

ಮನಸ್ಸು ಹೆಣ್ಣಿನಲ್ಲಿ ಮೂಡಲು ಸಾಧ್ಯವೇ ಇಲ್ಲ" ಎಂದು ಬಿಷಪ್ ಒಬ್ಬ ಹೇಳಿದ್ದನಂತೆ. ಅಂತೆಯೇ 1973ರಲ್ಲಿ ರಚಿಸಲ್ಪಟ್ಟ ತಮ್ಮ 'ಆರ್ಟ್ ಅಂಡ್ ಸೆಕ್ಷುಯಲ್ ಪಾಲಿಟಿಕ್ಸ್' ಪುಸ್ತಕದಲ್ಲಿ ಲಿಂಡಾ ನಾಕ್ಲಿನ್ ಒಂದು ಪ್ರಶ್ನೆಯನ್ನು ಮುಂದಿಡುತ್ತಾರೆ. ಅದೆಂದರೆ "(ಇತಿಹಾಸದಲ್ಲಿ) ಮಹಾನ್ ಮಹಿಳಾ ಕಲಾವಿದರು ಏಕಿರಲಿಲ್ಲ?" ಜೊತೆಗೆ 1982ರಲ್ಲಿ ಅವರೇ ಬರೆದ ಇನ್ನೊಂದು ಲೇಖನದಲ್ಲಿ "ಮಹಾನ್ ಪುರುಷ ಕಲಾವಿದರು (ಮಾತ್ರ) ಏಕಿದ್ದರು?" ಎನ್ನುವ ಪ್ರಶ್ನೆಯನ್ನು ಎತ್ತಿ, ಅದಕ್ಕೆ ಉತ್ತರವನ್ನು ನೀಡುತ್ತಾರೆ. ಮುಂದುವರಿದ ಅವರು "ಸಾಂಸ್ಕೃತಿಕ-ಐಡಿಯಲಾಜಿಕಲ್ ಮಿತಿಗಳನ್ನು ಛಿದ್ರಗೊಳಿಸಲು ಮಹಿಳೆ ಕುರಿತಂತೆ ಪಕ್ಷಪಾತತನಗಳು ಮತ್ತು ಕೊರತೆಗಳ ಬಗ್ಗೆ ಮಾತ್ರವೇ ಅಲ್ಲ, ಪೂರ್ಣವಾಗಿ ಕಲಾಶಿಸ್ತೊಂದರ ಪ್ರಮುಖ ಪ್ರಶ್ನೆಗಳನ್ನು ಸೂತ್ರೀಕರಿಸಲೂ ಕೂಡ ಈ ಕಲಾಶಿಸ್ತಿನಲ್ಲಿ ಫೆಮಿನಿಸ್ಟ್ ವಿಮರ್ಶೆಗಳು ಬೇಕು.." ಎಂಬುದಾಗಿ ಒತ್ತಾಯಿಸುತ್ತಾರೆ. ಹೀಗೆ ಹೆಣ್ಣಿನ ಮನಸ್ಸನ್ನು, ಸಂವೇದನೆಗಳನ್ನು, ಅಭಿವ್ಯಕ್ತಿಗಳನ್ನು ಕಲಾ ಇತಿಹಾಸವು ನಿರ್ಲಕ್ಷಿಸಿದುದರ, ತುಳಿದುದರ (ಸೌದಿ ಅರೇಬಿಯಾದ ಕಲಾವಿದೆ ರೀಮ್ ಅಲ್ ಫರ್ಮ್ ಇಂದಿಗೂ ತನ್ನ ಕಲಾಕೃತಿಗಳನ್ನು ಕದ್ದು-ಮುಚ್ಚಿ ರಚಿಸುತ್ತಿದ್ದಾರೆ) ಕಾರಣವೋ ಎಂಬಂತೆ ಇತ್ತೀಚಿನ ವರ್ಷಗಳಲ್ಲಿ ಮಹಿಳಾಪರ ನಿಲುವು ಎಲ್ಲೆಡೆ ಜಾಗೃತಗೊಳ್ಳುತ್ತಿದೆ. ಕೇವಲ ಸುಮಾರು ಒಂದು ನೂರು ವರ್ಷಗಳಿಂದಷ್ಟೇ ಚಲಾವಣೆಗೆ ಬಂದಿರುವ 'ಫೆಮಿನಿಸ್ಟ್', 'ಹೋಮೊ ಸೆಕ್ಷುಯಲ್' ಪದಗಳು ಕೂಡ ಇದನ್ನೇ ಸೂಚಿಸುತ್ತವೆ. ಸಲಿಂಗಕಾಮಿಗಳಾದ ರಾಬರ್ಟ್ ರಾಶೆನ್‌ಬರ್ಗ್, ಜಾಸ್ಪರ್ ಜೋನ್ಸ್, ಆಂಡಿವರ್ಹೋಲ್, ಡೇವಿಡ್ ಹಾಕ್ನಿ ಮುಂತಾದವರು ಅತ್ಯಂತ ಪ್ರಸಿದ್ಧ ಕಲಾವಿದರಾಗಿದ್ದರೂ ಕೂಡ, ಅವರ ಕೃತಿಗಳಿಗೆ ಹೋಲಿಸಿದರೆ ಅವರ ಲಿಂಗೀಯ ಐಡೆಂಟಿಟಿಯನ್ನು ಇತಿಹಾಸದಲ್ಲಿ ನಿರ್ಲಕ್ಷಿಸಲಾಗಿದೆ.

ಫೆಮಿನಿಸ್ಟ್ ಕಲಾ ಚಳವಳಿಯು, ಅಂತರರಾಷ್ಟ್ರೀಯ ಮಟ್ಟದಲ್ಲಿ ಮಹಿಳೆಯರ ಜೀವನ ಮತ್ತು ಅನುಭವಗಳನ್ನು ಅಭಿವ್ಯಕ್ತಿಸುವಂತಹ ಕಲೆಗೆ ಒತ್ತಾಸೆ ನೀಡುವ ಹಾಗೂ ಸಮಕಾಲೀನ ಕಲೆಯಲ್ಲಿ ಮಹಿಳಾ ಕಲಾವಿದರಿಗೆ ಸ್ಥಾನಮಾನಗಳನ್ನು ದೊರಕಿಸಿ ಕೊಡುವ ದಿಸೆಯಲ್ಲಿನ ಚಳವಳಿ ಎಂದು ಸರಳವಾಗಿ ಹೇಳಬಹುದು. ಕಲಾ ಇತಿಹಾಸದಲ್ಲಿ ಹಾಗೂ ಕಲೆಯ ಕ್ಷೇತ್ರದಲ್ಲಿ ಮಹಿಳೆಯರನ್ನು ಹೆಚ್ಚು ಹೆಚ್ಚಾಗಿ ನೋಡುವಂತಹ ಆಶಯವನ್ನು ಇದು ಹೊಂದಿದೆ. ಇದೇ ಆಶಯಗಳು ಬಹು ಹಿಂದಿನಿಂದಲೂ ಇದ್ದರೂ ಅದು ಒಂದು ಪ್ರಬಲ ಚಳವಳಿಯಾಗಿ ರೂಪುಗೊಂಡದ್ದು 1960ರ ದಶಕದಲ್ಲಿ. 1970ರ ದಶಕದಲ್ಲಿ ಥರ್ಡ್ ವೇವ್ ಫೆಮಿನಿಸಂ ಎಂದು ಕರೆಸಿಕೊಂಡು, ಅಂದಿನಿಂದ ಇಂದಿಗೂ ಈ ಚಳವಳಿಯು ಕೇವಲ ಅಮೆರಿಕದಲ್ಲಿ ಮಾತ್ರವೇ ಅಲ್ಲ. ವಿಶ್ವಾದ್ಯಂತ ವಿವಿಧ ನೆಲೆಗಳಲ್ಲಿ ಚಲಾವಣೆಯಲ್ಲಿದೆ. 'ಮ್ಯಾಪಿಂಗ್ ದಿ ಪೋಸ್ಟ್-ಮಾಡರ್ನಿಸಂ' ಎಂಬ ತಮ್ಮ ಪ್ರಬಂಧವೊಂದರಲ್ಲಿ ಆಂಡ್ರಿಯಾಸ್ ಹ್ಯೂಸೆನ್ ಪೋಸ್ಟ್ ಮಾಡರ್ನಿಸಂನ ಸಂದರ್ಭದಲ್ಲಿನ ನಾಲ್ಕು ಮುಖ್ಯ ಐಡೆಂಟಿಗಳನ್ನು ಗಮನಿಸುತ್ತಾರೆ. ಅವುಗಳೆಂದರೆ ರಾಷ್ಟ್ರೀಯ ಐಡೆಂಟಿಟಿಗಳು, ಅದರಲ್ಲಿಯೂ ಇಂಪೀರಿಯಲಿಸಂಗೆ ಪ್ರತಿಕ್ರಿಯೆಯಾಗಿ ರೂಪುಗೊಂಡವು. ಲಿಂಗೀಯ ಐಡೆಂಟಿಟಿಗಳು, ಪರಿಸರೀಯ ಐಡೆಂಟಿಟಿಗಳು ಹಾಗೂ ಜನಾಂಗೀಯ ಐಡೆಂಟಿಟಿಗಳು. ಅದರಲ್ಲಿಯೂ ಪಾಶ್ಚಾತ್ಯೇತರ ಎಂಬುದಾಗಿ ಗುರುತಿಸುತ್ತಾರೆ. ಅದರಲ್ಲಿಯೂ ಮುಖ್ಯವಾಗಿ ಏರುಮುಖವಾಗಿರುವ ಫೆಮಿನಿಸ್ಟ್ ಕಲೆ ಅಥವಾ ಲಿಂಗ ಸಂಬಂಧೀ ಅಭಿವ್ಯಕ್ತಿಯನ್ನು ಅವರು ಗುರುತಿಸುತ್ತಾರೆ. ಅಂದರೆ ಥರ್ಡ್‌ವೇವ್ ಫೆಮಿನಿಸಂನ ಆರಂಭ ಹಾಗೂ ಪೋಸ್ಟ್ ಮಾಡರ್ನಿಸಂನ ಆರಂಭಗಳೆರಡೂ ಏಕಕಾಲದಲ್ಲಿ ಆದುದರಿಂದ, ಈ ಸಂದರ್ಭದಲ್ಲಿ ಫೆಮಿನಿಸ್ಟ್ ಕಲೆಯು ವಿಶ್ವಾದ್ಯಂತ ಮುಂಚೂಣಿಯಲ್ಲಿದೆ ಎನ್ನಬಹುದು. ಏಕೆಂದರೆ ಅದು ಕೆಲವೊಮ್ಮೆ ಫೆಮಿನಿಸ್ಟ್ ಎಂಬ ಹಣೆಪಟ್ಟಿ ಹೊತ್ತುಕೊಂಡರೂ, ಆ ಹಣೆಪಟ್ಟಿ ಹಚ್ಚಿಕೊಳ್ಳದೆ ಕೂಡಾ ಬಹಳಷ್ಟು ಕೃತಿಗಳು ರಚನೆಯಾಗುತ್ತಿವೆ. ಹೀಗೆ ಸುಮಾರು 1970ರಿಂದ ಆರಂಭವಾದ ಫೆಮಿನಿಸ್ಟ್ ಹಾಗೂ ಸಲಿಂಗ ಕಾಮದ ಚಳವಳಿಗಳು ಲಿಂಗೀಯತೆಯ ಸಾಂಪ್ರದಾಯಿಕ ಕಲ್ಪನೆಗಳಿಗೆ ಸವಾಲು ಒಡ್ಡಿವೆಯಷ್ಟೇ ಅಲ್ಲ, ನಮ್ಮ ಸಮಕಾಲೀನ ಮನಸ್ಸುಗಳನ್ನು ಬಹುತೇಕ ಬದಲಾಯಿಸಿವೆ.

ಫೆಮಿನಿಸ್ಟ್ ಕಲಾಚಳವಳಿಯಲ್ಲಿ ಬಹಳಷ್ಟು ಮಹಿಳೆಯರು (ಅಷ್ಟೇಕೆ ಕೆಲವು ಪುರುಷರೂ) ಇದ್ದಾರಾದರೂ ಪಾಶ್ಚಾತ್ಯ ಸಂದರ್ಭದಲ್ಲಿ ಪ್ರಮುಖವಾಗಿ ಈ ಕೆಲವು ಹೆಸರುಗಳನ್ನು ಉಲ್ಲೇಖಿಸಬಹುದು. ಜೂಡಿ ಚಿಕಾಗೊ ಮತ್ತು ಮಿರಿಯಂ ಷಾಪಿರೊ (ಕ್ಯಾಲಿಫೋರ್ನಿಯಾದಲ್ಲಿ ಫೆಮಿನಿಸ್ಟ್ ಆರ್ಟ್ ಪ್ರೋಗ್ರಾಂ ಸ್ಥಾಪಕರು), ಸುಜಾನ್ ಲೇಸಿ, ಫೈತ್ ವಿಲ್ಡಿಂಗ್, ಮಾರ್ಥಾ ರಾಸ್ಲರ್, ಮೇರಿ ಕೆಲ್ಲಿ, ಕೇಟ್ ಮಿಲೆಡ್, ನ್ಯಾನ್ಸಿ ಸ್ಪೆರೊ, ಫೈತ್ ರಿಂಗ್ಗೋಲ್ಡ್, ಜೂನ್ ವೇಯ್ನೆ, ಶೈಲಾ ಲೆವ್ರಂಟ್, ದಾರಾ ಬಿರ್ನ್‌ಬೌಮ್ ಅವುಗಳಲ್ಲಿ ಮುಖ್ಯವಾದವು. ಮೆಕ್ಸಿಕೊ ದೇಶದ ಫ್ರೈಡಾಕಹ್ಲೊ ಅವರಂತೂ ಫೆಮಿನಿಸ್ಟ್ ಕಲೆಯಲ್ಲಿ ದಂತಕತೆ ಎನಿಸಿದ್ದಾರೆ. ಜೊತೆಗೆ ಲ್ಯೂಸಿ ಲಿಪ್ಪರ್ಡ್, ಗ್ರಿಸೆಲ್ಡಾ ಪೊಲಾಕ್, ಆರ್ಲೆನ್ ರ್‍ಯಾವೆನ್, ಕ್ಯಾಥರಿನ್ ಡಿ ಜೆಗೆರ್ ಮತ್ತು ಎಲಿಯನಾರ್ ಟುಫ್ಸ್‌ರಂತಹ ಕಲಾ ವಿಮರ್ಶಕರು, ಇತಿಹಾಸಕಾರರು ಮತ್ತು ಕ್ಯೂರೇಟರ್‌ಗಳು ಸೇರಿದ್ದಾರೆ. ಇಂದಿಗೂ ಕ್ರಿಯಾತ್ಮಕವಾಗಿರುವ 1970ರಲ್ಲಿ ನ್ಯೂಯಾರ್ಕ್ ನಗರದಲ್ಲಿ ಪ್ರಾರಂಭವಾದ ದಿ ವುಮನ್ ಇಂಟರ್‍ಯಾಕ್ಟ್ ಸೆಂಟರ್ ಕೂಡ ಈ ದಿಸೆಯಲ್ಲಿ ಮುಖ್ಯವಾದುದಾಗಿದ್ದು, ಅದು 1970ರಿಂದಲೂ ವುಮನ್ಸ್ ವಿಡಿಯೊ ಫೆಸ್ಟಿವಲ್ ನಡೆಸಿಕೊಂಡು ಬರುತ್ತಿದೆ.

ಬೋಸ್ಟನ್‌ನ ಇನ್‌ಸ್ಟಿಟ್ಯೂಟ್ ಫಾರ್ ಕಂಟೆಂಪರರಿ ಆರ್ಟ್‌ನಲ್ಲಿ (ಐಸಿಎ) ಕ್ಯಾಥರಿನ್ ಡಿ ಜೆಘರ್ 1996ರಲ್ಲಿ ಕ್ಯೂರೇಟ್ ಮಾಡಿದ 'ಇನ್‌ಸೈಡ್ ದಿ ವಿಸಿಬಲ್' ಪ್ರದರ್ಶನವೂ ಕೂಡ ಫೆಮಿನಿಸ್ಟ್ ಚಳವಳಿಯ ದೃಷ್ಟಿಯಿಂದ ಗಮನಾರ್ಹವಾದುದು. ಇದರಲ್ಲಿ ಕಳೆದ ಶತಮಾನದ 30ರ ದಶಕದಿಂದ ಇತ್ತೀಚಿನವರೆಗಿನ ಅಂತರರಾಷ್ಟ್ರೀಯವಾಗಿ ಪ್ರಸಿದ್ಧರಾದ 35 ಮಹಿಳೆಯರ ಕೃತಿಗಳನ್ನು ಪ್ರದರ್ಶಿಸಲಾಗಿತ್ತು. 2007ರಲ್ಲಿ ಲಾಸ್‌ಏಂಜಲಿಸ್‌ನ ಗೆಫೆನ್ ಸೆಂಟರ್‌ನಲ್ಲಿ ಕಾನ್ನೀ ಬಟ್ಲರ್ ಕ್ಯೂರೇಟ್ ಮಾಡಿದ 'ವ್ಯಾಕ್! ಆರ್ಟ್ ಅಂಡ್ ದಿ ಫೆಮಿನಿಸ್ಟ್ ರೆವೊಲ್ಯೂಶನ್' ಪ್ರದರ್ಶನವು ಕೂಡ ಫೆಮಿನಿಸ್ಟ್ ಕಲೆಯ ದೃಷ್ಟಿಯಿಂದ ಇತ್ತೀಚಿನ, ಸಮಗ್ರ ಮತ್ತು ಐತಿಹಾಸಿಕ ಕಲಾ ಪ್ರದರ್ಶನವಾಗಿದ್ದು, ಅಂತರರಾಷ್ಟ್ರೀಯ ಬುನಾದಿಯ ಬಗ್ಗೆ ಪರಿಶೀಲಿಸುವಂಥಾದ್ದಾಗಿದೆ. ಏಪ್ರಿಲ್ 2008ರಲ್ಲಿ ನ್ಯೂಯಾರ್ಕ್‌ನ ಪಿಎಸ್1ರಲ್ಲಿ ನಡೆದ ಪ್ರದರ್ಶನದಲ್ಲಿ ಅಮೆರಿಕದ ಕಲಾವಿದೆಯರ ಕೃತಿಗಳು ಮಾತ್ರವೇ ಅಲ್ಲದೆ, ಯೂರೋಪು, ಕೆನಡಾ, ಲ್ಯಾಟಿನ್ ಅಮೆರಿಕ, ಏಷ್ಯಾ, ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡ್ ಕಲಾವಿದರ ಕೃತಿಗಳನ್ನು ಒಳಗೊಂಡಿತ್ತು. ಇಲ್ಲಿದ್ದ ನೂರು ಕೃತಿಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚಿನವು ಅಮೆರಿಕದಿಂದ ಹೊರಗಿನವರದಾಗಿತ್ತು. ಹೀಗೆ ಫೆಮಿನಿಸ್ಟ್ ಚಳವಳಿಯು ಕೇವಲ ಅಮೆರಿಕಕ್ಕೆ ಸೀಮಿತವಾಗದೆ ಅದಕ್ಕಿರುವ ಭೌಗೋಳಿಕ ವ್ಯಾಪ್ತಿಯನ್ನು ಈ ಪ್ರದರ್ಶನ ಸೂಚಿಸುವಂತಿತ್ತು. 2001ರಲ್ಲಿ ಪ್ರಿನ್ಸ್‌ಟನ್ ಯೂನಿವರ್ಸಿಟಿಯಲ್ಲಿ ಕಲಾ ಇತಿಹಾಸಕಾರರ ಮತ್ತು ಕಲಾವಿದರ ಸಮ್ಮೇಳನವು ನಡೆದು, ಅಲ್ಲಿನ ನಡೆವಳಿಗಳನ್ನು ಆಧರಿಸಿ 'ವುಮನ್ ಆರ್ಟಿಸ್ಟ್ಸ್ ಅಟ್ ದಿ ಮಿಲೇನಿಯಂತೆ' (ಕ್ಯಾರಲ್ ಆರ್ಮ್‌ಸ್ಟ್ರಾಂಗ್ ಮತ್ತು ಡಿ ಜೆಘರ್, ಎಂಐಟಿ ಪ್ರೆಸ್/2006) ಪುಸ್ತಕವು

ಹೊರಬಂದಿದ್ದು ಅದು ಈ ಚಳವಳಿಯ ಮೇಲೆ ಸಾಕಷ್ಟು ಬೆಳಕು ಚೆಲ್ಲುತ್ತದೆ.

ಬ್ರೂಕ್‌ಲಿನ್ ಮ್ಯೂಸಿಯಂನಲ್ಲಿ 2006ರಲ್ಲಿ ಪ್ರಾರಂಭವಾದ ಎಲಿಜಬೆತ್ ಸೆಂಟರ್ ಫಾರ್ ಫೆಮಿನಿಸ್ಟ್ ಆರ್ಟ್ ಈ ಕಲಾಚಳವಳಿಗೆ ಬದ್ಧವಾದ ಗ್ಯಾಲರಿಯಾಗಿದೆ. ಮ್ಯೂಸಿಯಂನ ನಾಲ್ಕನೆಯ ಅಂತಸ್ತಿನಲ್ಲಿ ಡಿಸೈನರ್ ಸುಸಾನ್ ರೊಡ್ರಿಗಸ್ ವಿನ್ಯಾಸಗೊಳಿಸಿದ ಈ ಫೆಮಿನಿಸ್ಟ್ ಗ್ಯಾಲರಿಯು 8300 ಚದರಡಿಗಳಷ್ಟಿದ್ದು, ಅಲ್ಲಿ ಫೆಮಿನಿಸ್ಟ್ ಕೃತಿಗಳ ಶಾಶ್ವತ ಪ್ರದರ್ಶನಾಲಯ, ಸಂಗ್ರಹಾಲಯ, ಲೈಬ್ರರಿ ಇತ್ಯಾದಿಗಳಿವೆ. ಇಲ್ಲಿನ ಶಾಶ್ವತ ಪ್ರದರ್ಶನದಲ್ಲಿ ಹಲವಾರು ಗಮನಾರ್ಹ ಕೃತಿಗಳಿದ್ದು, ಅದರಲ್ಲಿ ಒಂದು ಕೃತಿಯನ್ನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ. 1979ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೊ ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್‌ನಲ್ಲಿ ಪ್ರದರ್ಶಿಸಲ್ಪಟ್ಟ ಕೃತಿಯೊಂದು ಭಾರೀ ಅಲ್ಲೋಲಕಲ್ಲೋಲವುಂಟು ಮಾಡಿತು. ಜೂಡಿ ಚಿಕಾಗೊ ರಚಿಸಿದ 'ಡಿನ್ನರ್ ಪಾರ್ಟಿ' ಹೆಸರಿನ ವಾತಾವರಣ ಶಿಲ್ಪವು 48 ಅಡಿ ಉದ್ದದ ತ್ರಿಕೋನಾಕಾರದ ಟೇಬಲ್‌ನಂತಿದೆ. ಅದರ ಮೇಲೆ 39 ಪ್ಲೇಟುಗಳಿದ್ದವು. ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಸಿದ್ಧರಾದ 39 ಮಹಿಳೆಯರ ಯೋನಿಗಳನ್ನು ಆ ಪ್ಲೇಟುಗಳ ಆಕಾರದಲ್ಲಿ ರೂಪಿಸಲಾಗಿತ್ತು. ಈ ಯೋನಿಗಳ ಆಕೃತಿಯಲ್ಲಿ ಊಟ ಮಾಡುವಂತಹ ಪ್ಲೇಟುಗಳನ್ನು ರಚಿಸಿ ಊಟದಂತೆ ಬಡಿಸಿದುದೇ ಭಾರಿ ಚರ್ಚೆಗೆ ಕಾರಣವಾಗಿತ್ತು. ವಿಲೇಜ್ ವಾಯ್ಸ್ ಇದನ್ನು 'ಅನಾಗರಿಕ, ಬರೋಕ್ (ಒಂದು ಕಲಾ ಸಂಪ್ರದಾಯ) ಹಾಗೂ ನಿಷಿದ್ಧವಾದುದು" ಎಂದು ಹೇಳಿದರೆ, ಪ್ರಖ್ಯಾತ ಕಲಾವಿಮರ್ಶಕ ರಾಬರ್ಟ್ ಹ್ಯೂಗ್ಸ್ ಅದನ್ನು 'ಬರಿಯ ಒಣ ಬೆಡಗು (kitsch)' ಎಂದು ಕರೆದ. ಆ ನಂತರ ಸುಮಾರು ಎರಡು ದಶಕಗಳ ಕಾಲ ನ್ಯೂಮೆಕ್ಸಿಕೊದಲ್ಲಿ ತಲೆಮರೆಸಿಕೊಂಡಿದ್ದ ಈ ಕೃತಿಯು ಈ ಪ್ರದರ್ಶನದಲ್ಲಿ ಪ್ರಮುಖ ಸ್ಥಾನ ಪಡೆದಿದೆ.

ಬ್ರಿಟನ್ನಿನಲ್ಲಿ ಅತ್ಯಂತ ಪ್ರತಿಷ್ಠಿತ ಟರ್ನರ್ ಪ್ರಶಸ್ತಿಗಾಗಿ ಪ್ರದರ್ಶನವೊಂದು ನಡೆಯುತ್ತದೆ. ಆಸ್ಕರ್ ಸಿನಿಮಾ ಪ್ರಶಸ್ತಿಯ ಹಾಗೆಯೇ ಅದಕ್ಕಾಗಿ ಆಯ್ದ ನಾಮಾಂಕಿತಗೊಂಡವರ ಕೃತಿಗಳು ಮಾತ್ರವೇ ಅಲ್ಲಿ ಪ್ರದರ್ಶಿಸಲ್ಪಡುತ್ತವೆ. ಹೀಗೆ 1996ರಲ್ಲಿ ಬ್ರಿಟಿಷ್ ಕಲಾವಿದೆ ಟ್ರೇಸಿ ಎಮಿನ್ 'ಮೈ ಬೆಡ್' ಎಂಬ ಕೃತಿಯನ್ನು ಪ್ರದರ್ಶಿಸಿದ್ದರು. ಬೆಡ್‌ರೂಮಿನಂತಹ ಪರಿಸರದಲ್ಲಿ ಅವರು ಬಳಸುವ ಸ್ವಂತ ಹಾಸಿಗೆಯನ್ನು ಅದು ಒಳಗೊಂಡಿತ್ತು. ಅದರ ಹೊದಿಕೆಗಳು ದೇಹದಿಂದ ಒಸರುವ ಕಲೆಗಳನ್ನು ಹೊಂದಿದ್ದು, ಕಲಾವಿದೆಯು ಸ್ವಂತ ಕೋಣೆಯಿಂದ ತಂದ ಕಾಂಡೂಮ್‌ಗಳು, ಋತುಸ್ರಾವದ ಅವಧಿಯ ಕಲೆಗಳನ್ನು ಹೊಂದಿದ್ದ ಚಡ್ಡಿ ಮುಂತಾದ ಈ ಎಲ್ಲವನ್ನು ಅದು ಒಳಗೊಂಡಿತ್ತು. ಆ ಹಾಸಿಗೆಯು ಕಲಾವಿದೆ ಎಮಿನ್‌ಳು ಬಾಂಧವ್ಯದ ತೊಂದರೆಯಿಂದ ಖಿನ್ನತೆಗೆ ಒಳಗಾಗಿ ಹಲವಾರು ದಿನ ಮಲಗಿದ್ದು, ಆಗ ತಾನೇ ಅದರಿಂದ ಎದ್ದುದನ್ನು ಸೂಚಿಸುವಂತಿತ್ತು. ಅಲ್ಲಿನ ಒಟ್ಟಾರೆಯಾದ ಜೋಡಣೆ. ಪ್ರದರ್ಶನ ಆರಂಭವಾದಾಗ ಪ್ರದರ್ಶಕ ಕಲಾವಿದರಾದ ಯ್ವಾನ್ ಚಾಯ್ ಮತ್ತು ಜಿಯಾನ್ ಜೂನ್ ಕ್ಸಿ ಆ ಹಾಸಿಗೆಯ ಮೇಲೆ ಹಾರಿ ತಮ್ಮ ನಗ್ನ ದೇಹಗಳನ್ನು ಹೊರಳಾಡಿಸಿದರು. ಆ ಪ್ರದರ್ಶನವನ್ನು ಅವರು 'ಇಬ್ಬರು ನಗ್ನ ಪುರುಷರು ಟ್ರೇಸಿಯ ಹಾಸಿಗೆಯ ಮೇಲೆ ಹಾರುವುದು' ಎಂದು ಕರೆದರಲ್ಲದೆ, ಸುಮಾರು 15 ನಿಮಿಷ ಅದರ ಮೇಲೆ ಹೊರಳಾಡುತ್ತ ದಿಂಬಿನ ಜಗಳವನ್ನು (ಕೊಲವೊಮ್ಮೆ ದಂಪತಿಗಳು ಜಗಳವಾಡುವಂತೆ) ಮಾಡಿದರು. ನೆರೆದ ಜನ ಚಪ್ಪಾಳೆ ಹೊಡೆಯುತ್ತಿರುವಷ್ಟರಲ್ಲಿ ಸೆಕ್ಯುರಿಟಿ ಗಾರ್ಡ್‌ಗಳು ಬಂದು ಅವರನ್ನು ಬಂಧಿಸಿದರು. ಕೊನೆಗೆ ಆ ಕೃತಿಗೆ ಟರ್ನರ್ ಪ್ರಶಸ್ತಿಯೂ ಬರಲಿಲ್ಲ.

ಅಮೆರಿಕದ ಅನಾ ಮೆಂಡೀಟಾ ಅವರು ಫೆಮಿನಿಸ್ಟ್ ನೆಲೆಯ ಹಲವು ಕೃತಿಗಳಿಂದ ಪ್ರಸಿದ್ಧರಾಗಿದ್ದಾರೆ. ಈ ದಿಸೆಯಲ್ಲಿ ಡೆತ್ ಆಫ್ ಎ ಚಿಕನ್, ಫೆದರ್ಸ್ ಆನ್ ಎ ವುಮನ್ ಹಾಗೂ 1972ರಲ್ಲಿನ ಫೇಶಿಯಲ್ ಹೇರ್ ಪ್ಲಾಂಟ್ ಕೃತಿಗಳನ್ನು ಹೆಸರಿಸಬಹುದಾಗಿದೆ. ಅವರ ಅತ್ಯಂತ ವಿವಾದಾತ್ಮಕ ಕೃತಿಯೆಂದರೆ ರೇಪ್ ಸೀನ್ (1973). ಹಲವು ಕಡೆಗಳಲ್ಲಿ ಮರುಪ್ರದರ್ಶನ ಮಾಡಿದ ಈ ಕೃತಿಯಲ್ಲಿ ಮೆಂಡೀಟಾ ಅವರು ತಮ್ಮ ದೇಹವನ್ನೇ ಒಡ್ಡಿಕೊಳ್ಳುತ್ತಾರೆ. ಯೂನಿವರ್ಸಿಟಿ ಆಫ್ ಅಯೊವಾದಲ್ಲಿ ವಿದ್ಯಾರ್ಥಿನಿಯೋರ್ವಳ ಮೇಲೆ ಅತ್ಯಾಚಾರ ನಡೆಸಿ, ಕೊಲೆ ಮಾಡಿದ್ದಕ್ಕೆ ಪ್ರತಿಕ್ರಿಯೆಯಾಗಿದೆ ಅವರ ಈ ಕೃತಿ. ಇದರಲ್ಲಿ ಮೆಂಡೀಟಾ ಅವರು ತಮ್ಮ ಸ್ನೇಹಿತರು ಮತ್ತಿತರರನ್ನು ತಮ್ಮ ಅಪಾರ್ಟ್‌ಮೆಂಟಿಗೆ ಆಹ್ವಾನಿಸುತ್ತಾರೆ. ಅಲ್ಲಿನ ಬಾಗಿಲು ತೆರೆದಿರುತ್ತದೆ. ವೀಕ್ಷಕರು ಒಳಗೆ ಹೋದಾಗ ಕಲಾವಿದೆಯ ದೇಹವು ರಕ್ತಸಿಕ್ತವಾಗಿದ್ದು ಅಲ್ಲಿನ ಟೇಬಲ್ಲೊಂದಕ್ಕೆ ಕಟ್ಟಿಹಾಕಲ್ಪಟ್ಟಿರುತ್ತದೆ. ನಿಶ್ಚಲ ಸ್ಥಿತಿಯಲ್ಲಿರುವ ದೇಹದ ಸುತ್ತಲೂ ರೇಪ್ ನೆನಪಿಸುವಂತೆ ಗಾಜಿನ ಚೂರುಗಳು ಹಾಗೂ ರಕ್ತ ಚೆಲ್ಲಿರುತ್ತದೆ. ಅವರ ಇನ್ನೊಂದು ಕೃತಿ 'ಫೇಶಿಯಲ್ ಹೇರ್ ಟ್ರಾನ್ಸ್‌ಪ್ಲಾಂಟ್'ನಲ್ಲಿ ಅವರು ಮಾರ್ಸೆಲ್ ಡ್ಯೂಷಾಂಪ್‌ನ ಕಲ್ಪನೆಯನ್ನು (1919) ವಿಸ್ತರಿಸುತ್ತಾರೆ. ಸ್ತ್ರೀ ದೇಹವನ್ನು ಪುರುಷರಿಗೆ ಸಮಾನವಾಗಿ ತೋರಿಸುವ ಆಶಯವುಳ್ಳ ಇದರಲ್ಲಿ ಈ ಕಲಾವಿದೆ ತನ್ನ ಸ್ನೇಹಿತನೋರ್ವನ ನಿಜ ಗಡ್ಡವನ್ನೇ ಕತ್ತರಿಯಿಂದ ಕತ್ತರಿಸಿ ತನ್ನ ಮುಖಕ್ಕೆ ಅಂಟಿಸಿಕೊಳ್ಳುತ್ತಾಳೆ. ಇಡೀ ಪ್ರಕ್ರಿಯೆಯನ್ನು ಹಂತ ಹಂತದ ಛಾಯಾಗ್ರಹಣದ ಮೂಲಕ ದಾಖಲಿಸುತ್ತಾರೆ. ಹೀಗೆ ಒಂದೆಡೆ ಪುರುಷರನ್ನು ವಿರೋಧದ ದೃಷ್ಟಿಯಿಂದ ನೋಡಿದರೆ, ಇನ್ನೊಂದೆಡೆ ಪುರುಷರೇ ಆಗುವ ಆಶಯ ಇಲ್ಲಿದೆ.

ಈ ಮೇಲಿನ ನಿದರ್ಶನಗಳು ಪಾಶ್ಚಾತ್ಯ ಫೆಮಿನಿಸಂನಲ್ಲಿರುವ ಲಕ್ಷಾಂತರ ಕೃತಿಗಳಲ್ಲಿ ಕೆಲವು ಮಾತ್ರ. ಏಕೆಂದರೆ ಪ್ರಸ್ತುತ ಮುಂಚೂಣಿಯಲ್ಲಿರುವ ಪೋಸ್ಟ್ ಮಾಡರ್ನಿಸಂನಲ್ಲಿ ಫೆಮಿನಿಸ್ಟ್ ಆಶಯಗಳು ಭಾರಿ ಪ್ರಮಾಣದಲ್ಲಿ ಕಂಡುಬರುತ್ತಿರುವುದು ಮಾತ್ರವೇ ಅಲ್ಲ, ಅದರ ಪ್ರಭಾವವೂ ಈ ಚಳವಳಿಯ ಮೇಲೆ ಆಗಿದೆ. ಅಮೆರಿಕದ ಫೆಮಿನಿಸ್ಟ್ ಲ್ಯೂಸಿ ಲಿಪ್ಪರ್ಡ್ 1980ರ ದಶಕದ ಸಂದರ್ಭದಲ್ಲಿನ ಕಲೆಗೆ ಫೆಮಿನಿಸ್ಟ್ ಕೊಡುಗೆಗಳನ್ನು ಪರಿಶೀಲಿಸುವಾಗ ಅಂದಿನ ಒಟ್ಟಾರೆಯಾದ ಕಲೆಯ ಮೇಲೆ ಬಾಡಿ ಆರ್ಟ್, ವಿಡಿಯೊ ಆರ್ಟ್, ಆರ್ಟಿಸ್ಟ್ಸ್ ಬುಕ್ ಮತ್ತು ಸಾಂಪ್ರದಾಯಿಕ ಕಲೆಯ ರೂಪಗಳಾದ ಕಸೂತಿ, ಹೊಲಿಗೆ ಮತ್ತು ಚೀನಾ ಪೈಂಟಿಂಗ್‌ನಂತಹ ಫೆಮಿನಿಸ್ಟ್ ಪ್ರಭಾವಗಳು ಗಾಢವಾಗಿ ಕಾಡಿವೆ ಎಂಬುದಾಗಿ ಅಭಿಪ್ರಾಯಪಡುತ್ತಾರೆ.

ಇತ್ತೀಚೆಗಂತೂ ಸ್ತ್ರೀದೇಹ ಕುರಿತ ಸಾಮಾಜಿಕ ನಿಷೇಧಗಳ ಬಗ್ಗೆ ಕುತೂಹಲಕರವಾದ ಬೆಳವಣಿಗೆಗಳು ನಡೆಯುತ್ತಿವೆ. ಕಲೆಯ ವಲಯವು ಈ ದೇಹವನ್ನು ಕುರಿತು ಮುಜುಗರರಹಿತವಾಗಿ ವರ್ತಿಸುತ್ತಿರುವಲ್ಲಿ ಫೆಮಿನಿಸ್ಟ್ ಚಳವಳಿಯ ಪಾತ್ರವೂ ಇದೆಯೆಂದರೆ ತಪ್ಪಲ್ಲ. ಅದೇನೆ ಇರಲಿ ಪಾಶ್ಚಾತ್ಯ ಫೆಮಿನಿಸ್ಟ್ ಕಲಾ ಚಳವಳಿಯು ಇಂದಿನ ಒಟ್ಟಾರೆಯಾದ ಸಮಕಾಲೀನ ಕಲೆಗೇ ಹೊಸ ದೃಷ್ಟಿಕೋನವನ್ನು ಹೊಸ ಆಯಾಮವನ್ನು ನೀಡಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

❑



# ಅಕ್ಕನ ವಚನಗಳಲ್ಲಿ ದೇಹ ಮತ್ತು ಲೈಂಗಿಕತೆ

## ಮುಂದುವರೆದ ಆಲೋಚನೆಗಳು

● *ಡಾ. ಸುಧಾ. ಸೀತಾರಾಮನ್*

ಅಕ್ಕ ಮಹಾದೇವಿ – 12ನೆ ಶತಮಾನದ ವಚನ ಸಾಹಿತ್ಯ ಪ್ರಕಾರದ ಪ್ರಮುಖ ಶರಣೆಯೆಂದು ಗುರುತಿಸಲ್ಪಟ್ಟಿದ್ದಾಳೆ. ಇನ್ನಿತರ ತನ್ನ ಸಮಕಾಲೀನ ಮಹಿಳೆಯರಿಗೆ ಹೋಲಿಸಿದರೆ ಅಕ್ಕ ಮಹಾದೇವಿಯ ವಚನಗಳು ಮತ್ತು ಆಕೆಯ ಜೀವನದ ಬಗೆಗಿನ ಅಧ್ಯಯನಗಳು ಸಾಕಷ್ಟು ನಡೆದಿದೆಯೆಂಬುದನ್ನು ನಾವು ಗಮನಿಸಬಹುದು. ನವ್ಯದವರು ಅಕ್ಕನ ವಚನಗಳನ್ನು ಅತ್ಯುತ್ತಮ ಕಾವ್ಯ ಪ್ರಕಾರವೆಂದು ಚರ್ಚಿಸಿದ್ದರೆ, ಸಮಾಜಶಾಸ್ತ್ರಜ್ಞರು ಅಕ್ಕನನ್ನು ತಮ್ಮ ಅಧ್ಯಯನಗಳಲ್ಲಿ ವೈದಿಕಶಾಹಿ ವಿರೋಧಿ ಧ್ವನಿಯಾಗಿ ಗುರುತಿಸಿದ್ದಾರೆ; ಸಾಂಪ್ರದಾಯಿಕ ಅಧ್ಯಯನಕಾರರು ವೀರಶೈವ ಧರ್ಮದ ಶಾಸ್ತ್ರೀಯ ಬುನಾದಿಯನ್ನು ರೂಪಿಸುವ ಹಿನ್ನೆಲೆಯಲ್ಲಿ ಆಕೆಯನ್ನು ಕಾಣಲು ಪ್ರಯತ್ನಿಸಿದ್ದಾರೆ; ಆಧುನಿಕ ಸ್ತ್ರೀವಾದಿ ಪರಂಪರೆ ಅಕ್ಕನಲ್ಲಿ ವ್ಯಕ್ತವಾಗುವ ಪ್ರೇಮ, ಲೈಂಗಿಕ ಸಂಬಂಧಗಳು, ಪರಂಪರಾನುಗತ ಕೌಟುಂಬಿಕ ಚೌಕಟ್ಟಿನಾಚೆಗಿನ ಅಂಶಗಳ ಬಗ್ಗೆ ಅಕ್ಕನನ್ನು ಒಂದು ಹೆಣ್ಣು ಧ್ವನಿಯಾಗಿ ಮಾತ್ರವಲ್ಲದೆ, ಲಿಂಗ ತಾರತಮ್ಯ, ಕುಟುಂಬ, ಲೈಂಗಿಕತೆ ಇನ್ನಿತ್ಯಾದಿ ಪುರುಷಾಧಿಪತ್ಯವನ್ನು ವ್ಯವಸ್ಥಿತಗೊಳಿಸುವ ಎಲ್ಲಾ ಚೌಕಟ್ಟುಗಳನ್ನು ತಿರಸ್ಕರಿಸಿದ ಸ್ತ್ರೀವಾದಿ ಬಂಡಾಯಗಾರ್ತಿಯೆಂದು ಗುರುತಿಸಿದ್ದಾರೆ. ಹೀಗೆ ಅಕ್ಕನನ್ನು ತಮ್ಮ ತಮ್ಮ ನಿಲುವಿಗನುಗುಣವಾಗಿ ಒಗ್ಗಿಸಿಕೊಳ್ಳುವ ಪ್ರಯತ್ನ ಕಾಣಬಹುದಾಗಿದೆ. ಇಷ್ಟಾದರೂ, ಅಕ್ಕನ – ಕುಟುಂಬ, ಲೈಂಗಿಕ ಪ್ರಶ್ನೆಗಳನ್ನು ಒಪ್ಪುತ್ತಲೆ ಮೇಲಿನ ರೀತಿಯಲ್ಲಿ ಗ್ರಹಿಸಲು ಸಾಧ್ಯವಿಲ್ಲವೆಂಬುದು ನನ್ನ ವಾದ. ಭವಸಂಸಾರದಲ್ಲಿ ಸಾಮಾಜಿಕ ರಚನೆಗಳ ಬಗ್ಗೆ ಅಕ್ಕನಿಗಿದ್ದ ಅಸಮಾಧಾನ/ವಿರೋಧಗಳೆಲ್ಲ ನಿಸ್ಸಂದೇಹವಾದದ್ದು. ಆದರೆ, 'ಭಾವ ಹಾಗೂ ಅಭಿವ್ಯಕ್ತಿ' , 'ಪ್ರೇಮ ಹಾಗೂ ಲೈಂಗಿಕ ಸಂಬಂಧಗಳ' ಬಗ್ಗೆ ಕಟ್ಟಿಕೊಂಡಿದ್ದ ನಂಬಿಕೆಗಳ ವಿರುದ್ಧ ತಿರಸ್ಕಾರವನ್ನು ಏಕಪ್ರಕಾರವಾಗಿ ಸೂಚಿಸಿಲ್ಲ ಅಥವಾ ಕುಟುಂಬ ರಚನೆಯ ಪರಂಪರಾನುಗತ ಸ್ವರೂಪಕ್ಕೆ ಕಾರಣವಾದಂತಹ ಎಲ್ಲಾ ವ್ಯಕ್ತಿಗತ ಸಂಬಂಧಗಳನ್ನು ತಿರಸ್ಕರಿಸಿಲ್ಲವೆಂಬುದು ನನ್ನ ವಾದ. ಇದು ಅಕ್ಕನ ವ್ಯಕ್ತಿ ಮಿತಿಯೇ ಅಥವಾ ಆಗಿನ ಸಾಮಾಜಿಕ ಸಂದರ್ಭದ ಮಿತಿಯೇ ಅಥವಾ ಅದು ಪ್ರಗತಿಪರವೆ ಅಲ್ಲವೇ; ಮಹಿಳೆಯರ ಪರವೆ ಅಲ್ಲವೇ ಎಂಬುದು ನನ್ನ ವಾದವಲ್ಲ. ಅಕ್ಕನ ವಚನಗಳ ಮೂಲಕ ನಮಗೆ ದಕ್ಕುವ ಲಿಂಗ, ಲೈಂಗಿಕತೆ, ಕೌಟುಂಬಿಕ ಸಂಬಂಧಗಳು ಬೇರೆಯದೇ ಆದ ಸ್ತರದಲ್ಲಿ ಪುನರಾವಿಷ್ಕರಣ ಮಾಡಲು ಅಕ್ಕ ಪ್ರಸ್ತಾಪಿಸಿರುವಂತೆ ಕಾಣುತ್ತದೆ. ಅಕ್ಕನ ವಚನಗಳಲ್ಲಿನ ಸಂಕೀರ್ಣತೆಯಿಂದಾಗಿ ಒದಗಿ ಬರುವ ಹಲವಾರು ವಿಪರ್ಯಾಸ–ತೊಡಕು–ದ್ವಂದ್ವಗಳಲ್ಲಿ ಸಿಲುಕಲೇಬೇಕಾದ ಅನಿವಾರ್ಯತೆಯನ್ನು ಸೂಚಿಸುತ್ತವೆ.

## ಅಕ್ಕನಲ್ಲಿ ಕಾಯದ ನಿರ್ವಚನಗಳು

ಅಕ್ಕನಲ್ಲಿ ವಿಶಿಷ್ಟವಾಗಿರುವಂತಹ ಕಾಯದ ಕಲ್ಪನೆಯ ಬಗ್ಗೆ ಹಲವಾರು ಕಡೆ ಚರ್ಚಿಸಲಾಗಿದೆ. ಅಕ್ಕನಲ್ಲಿ ಏಕಕಾಲಕ್ಕೆ ಶರೀರದ ಶೃಂಗಾರ ಸಾಧ್ಯತೆಗಳನ್ನು ಮತ್ತು ಅದರ ಮೂಲಕ ತಲುಪಬಹುದಾದ ಆಧ್ಯಾತ್ಮಿಕ ಸಾಧ್ಯತೆಗಳು, ಇನ್ನೊಂದು ಕಡೆ ಶರೀರವನ್ನು ತುಚ್ಛೀಕರಿಸಿ, ಕಡೆಗಣಿಸುವ ಪ್ರತಿಮೆಗಳು ಗಮನೀಯ ಅಂಶವಾಗಿರುವುದನ್ನು ನಾವು ಕಾಣಬಹುದು. ಅಕ್ಕನಲ್ಲಿ ಕಾಯದ ಕಲ್ಪನೆ ಎಷ್ಟರಮಟ್ಟಿಗೆ ವಿಸ್ತೃತವಾಗಿರುವಂಥದ್ದು ಎಂದರೆ ನಮಗೆ ಒಟ್ಟಿಗೆ 'ಸ್ವೀಕಾರ' ಮತ್ತು 'ತಿರಸ್ಕಾರ'ವನ್ನು ಬಿಂಬಿಸುವ ವಚನಗಳು ಸಿಗುತ್ತವೆ. ಅಕ್ಕನಲ್ಲಿ ಸಾಮಾನ್ಯವಾಗಿ ಎಲ್ಲೆಡೆ ಕಂಡುಬರುವ ಕಾಯದ ಕಲ್ಪನೆಯಲ್ಲಿ ಕೂಡಾ ನಾವು ದೇವರನ್ನು ಹೊಂದಲು ಬೇಕಾಗುವ ಪೂರ್ವ ಸಿದ್ಧತೆಯ ಸಾಧನವಾಗಿ ಕಾಯವನ್ನು ಪರಿಗಣಿಸಿರುವುದನ್ನು ಕಾಣುತ್ತೇವೆ. ಅಕ್ಕನಲ್ಲಿ ದೇಹ, ಒಂದೇ ಕಾಲಕ್ಕೆ ಪ್ರಕೃತಿಯ ಭಾಗವೂ ಹೌದು, ಸಂಸ್ಕೃತಿ ಮತ್ತು ಸಮಾಜದ ಭಾಗವೂ ಹೌದು. ಅಕ್ಕನಲ್ಲಿ ಈ ಪರಸ್ಪರ ಕ್ರಿಯೆ ತುಂಬಾ ಕುತೂಹಲ ಮೂಡಿಸುವಂತಹುದ್ದು. ಹೀಗಾಗಿ ಅಕ್ಕ ಸದ್ಯದ ಸಂದರ್ಭಗಳಿಗೂ ಪ್ರಸ್ತುತಳಾಗುತ್ತಾಳೆ. ಇಂತಹ ಸನ್ನಿವೇಶದಲ್ಲಿ ಉಡುಗೆ, ತೊಡುಗೆ, ವೇಷ ಭೂಷಣದ ಬಗ್ಗೆ ಹೊಸ ಆಯಾಮವನ್ನು ಅಕ್ಕನಲ್ಲಿ ಕಾಣಲು ಸಾಧ್ಯ. ಉಡುಗೆಯು ಆಳವಾಗಿ ನಮ್ಮ ದೇಹದ ಮತ್ತು ಆಚರಣೆಯ ಒಂದು ಭಾಗವಾಗಿ ದಿನನಿತ್ಯದ ರೂಢಿಯೊಳಗೆ ಹಾಸುಹೊಕ್ಕಾಗಿರುವುದು. ಈ ಪ್ರಬಂಧದಲ್ಲಿ ನಾನು ಆಕೆಯ ಕಾಯದ ಕಲ್ಪನೆ, ಅದರಲ್ಲೂ ವೇಷ ಭೂಷಣಗಳಿಂದ ದೊರಕುವ ಕಾಯದ ಚಿತ್ರಣವನ್ನು ಹಿನ್ನೆಲೆಯಾಗಿಟ್ಟುಕೊಂಡು ಚರ್ಚಿಸುವ ಪ್ರಯತ್ನವನ್ನು ಮಾಡಿದ್ದೇನೆ.

ಮಹಿಳೆಯರ ದೇಹ ಹಾಗೂ ರೂಪ ಕಲ್ಪನೆಗಳು, ದೇಹದ ಶೃಂಗಾರ ಪರಿಕಲ್ಪನೆಗಳಿಲ್ಲದ ಸಂಸ್ಕೃತಿಯೇ ವಿಶ್ವದಲ್ಲಿಲ್ಲ. ಮಾನವ ಶಾಸ್ತ್ರಜ್ಞರು ಹೇಳುವ ಪ್ರಕಾರ–ಉಡುಗೆಯ ಮೂಲ ಐಂದ್ರಜಾಲಿಕವಾದಂತಹುದು (ಮ್ಯಾಜಿಕಲ್). ಅದರ ಆಳದಲ್ಲಿ, ಅದು ಪ್ರಾಣಿಯ ಶಕ್ತಿಗಳನ್ನು ನೀಡುವುದೆಂಬ ನಂಬಿಕೆಗಳು. ಇದರಿಂದ ನಾವು ತೊಡುವ ಉಡುಗೆ ದೇಹವನ್ನು ಬೆಚ್ಚಗಿಡುವದಕ್ಕಷ್ಟೆ ಅಲ್ಲ, ಅದರ ಮೂಲಕ ನಮ್ಮ ಲೈಂಗಿಕತೆ, ವಯಸ್ಸು, ನಮ್ಮ ಸಾಮಾಜಿಕ ಸ್ಥಾನ–ಮಾನ, ರಾಜಕೀಯ ನಂಬಿಕೆಗಳಿಗನುಗುಣವಾಗಿ ಇರುತ್ತವೆ. ಹಾಗೆ ನೋಡಿದರೆ ವಸ್ತ್ರ, ಆಭರಣ ನಮ್ಮ ದೇಹದ ಅಂಶವೂ ಹೌದು, ಅದೇ ಸಮಯಕ್ಕೆ ನಮ್ಮ ದೇಹದ ಭಾಗವಲ್ಲ ಕೂಡಾ. ಬಟ್ಟೆಯನ್ನು ಕಳಚಲೂಬಹುದು, ಬಟ್ಟೆ ತೊಟ್ಟು ಪರಿಪೂರ್ಣತೆಯನ್ನು ತರಲೂ ಬಹುದು. ನಾನು ತೊಟ್ಟ ಉಡುಗೆ, ನನ್ನ ದೇಹ ಬೇರೆಯದಕ್ಕಿಂತ ಹೇಗೆ ಭಿನ್ನವೆಂಬುದನ್ನು ತಿಳಿಯಪಡಿಸುತ್ತದೆ, ಜೊತೆಗೆ ಅದೇ ರೀತಿಯ ವಸ್ತ್ರ ತೊಟ್ಟವರೊಂದಿಗಿನ ಸಂಪರ್ಕ ಸಾಧಿಸುವ ಮಾಧ್ಯಮವೂ ಆಗಬಹುದು. ವಸ್ತ್ರ ದೇಹಕ್ಕೆ ಚೌಕಟ್ಟು ಒದಗಿಸುವುದರ ಜೊತೆಗೆ, ಸಂಪರ್ಕದ ಸಾಧನವೂ ಆಗುವುದು. ಅಂದರೆ ಅದರ ಮಿತಿಯು(ಬೌಂಡರಿ) ದ್ರವ್ಯವಾಗಿರುವುದು ಎಂಬುದನ್ನು ಸೂಚಿಸುವುದು.

ಅಕ್ಕ ಲಿಂಗತ್ವದ ಅನುಭವದ ಹಿನ್ನೆಲೆಯಲ್ಲಿ ತಾನು, ತನ್ನ ದೇಹ, ಮತ್ತಿತರ ವಸ್ತುಗಳಿರಬಹುದು, ಉಡುಗೆ–ತೊಡುಗೆಯಲ್ಲಿರಬಹುದು, ಎಲ್ಲವನ್ನೂ ಪೂರ್ವ ತಯಾರಿಗೆ ಅಣಿಗೊಳಿಸುವವಳು. ಗಂಡನಾದ ಚೆನ್ನಮಲ್ಲಿಕಾರ್ಜುನನನ್ನು ಬರಮಾಡಿಕೊಳ್ಳುವ ಬಗೆ ನೋಡುವುದಾದರೆ–

> ಇಂದೆನ್ನ ಮನೆಗೆ ಗಂಡ ಬಂದಹನೆಲೆಗವ್ವ,
> ನಿಮನಿಮಗೆಲ್ಲಾ ಶೃಂಗಾರ ಮಾಡಿಕೊಳ್ಳಿ.
> ಚೆನ್ನಮಲ್ಲಿಕಾರ್ಜುನನೀಗಳೆ ಬಂದಿಹನು,
> ಇದಿರುಗೊಳ್ಳಿ ಬನ್ನಿರವ್ವಗಳಿರಾ.

ಇಲ್ಲಿ ಅಕ್ಕ ಸೂಚಿಸುವ ಪೂರ್ವ ತಯಾರಿ ಯಾವುದಕ್ಕೆ? ಅಂತಿಮವಾಗಿ ಗಂಡನನ್ನು 'ಸೇರಲು'. ಈ ವಚನವನ್ನು ಗಮನಿಸಿದರೆ, ಅಕ್ಕ ತನ್ನ ಗಂಡನನ್ನು ಬರಮಾಡಿಕೊಳ್ಳಲು (ಚೆನ್ನ ಮಲ್ಲಿಕಾರ್ಜುನ ಎಲ್ಲರ ಗಂಡನಾಗಿ) ತಯಾರಾಗುತ್ತಾಳೆ. ಹೇಗೆ? ಸಿಂಗಾರ ಮಾಡಿಕೊಂಡು. ಅಂದರೆ ಅವನನ್ನೊಂದುಗೂಡಲು(ಐಕ್ಯವಾಗಲು) 'ಹೆಣ್ತನದ ಪಾತ್ರ ಪೋಷಣೆ' ಅನಿವಾರ್ಯವಾಗಿದೆ. ಅದು ಯಾವ ರೀತಿಯದು? ಅದು ಶರಣತ್ವದ ಮೂಲಧಾತುವಾಗಿದೆ. "ಚೆನ್ನಮಲ್ಲಿಕಾರ್ಜುನ ಬಂದಿಹನು ನಿಮನಿಮಗೆಲ್ಲಾ ಶೃಂಗಾರ ಮಾಡಿಕೊಳ್ಳಿ" ಎಂದು ಹೇಳುವಲ್ಲಿ ಆಸಕ್ತಿಕರವಾಗಿರುವುದು ಏನೆಂದರೆ ಕಾವ್ಯರೂಪದ ಮೌಲ್ಯಮಾಪನವಲ್ಲ, ಸಮಾಜ ಶಾಸ್ತ್ರಜ್ಞೆಯಾಗಿ ನನಗೆ ಇದು ಸಾಮುದಾಯಿಕ ಪ್ರಜ್ಞೆಯು ಅನಾವರಣಗೊಳ್ಳುವ ಪರಿಯಾಗಿ ಕಾಣುವುದು.

ಹನ್ನೆರಡನೆಯ ಶತಮಾನದ ವ್ಯಕ್ತಿ ಕಲ್ಪನೆಗೂ ಮತ್ತು ಆಧುನಿಕ ಕಾಲದಲ್ಲಿ ನಮಗೆ ದಕ್ಕುವ ಕಲ್ಪನೆಗೂ ಇರುವ ವ್ಯತ್ಯಾಸಗಳನ್ನು ನಾವು ಇಲ್ಲಿ ಗಮನಿಸಬೇಕು. ಆಧುನಿಕ ಕಾಲದಲ್ಲಿನ 'ವ್ಯಕ್ತಿ'ಯ ಅರ್ಥೈಸುವಿಕೆ ಹೇಗಿದೆ ಎಂದರೆ, ವ್ಯಕ್ತಿ ಬೇರೆಯವರಿಗಿಂತ/ಸಮುದಾಯದಿಂದ ಹೇಗೆ ಭಿನ್ನ, ವಿಶಿಷ್ಟ ಎಂಬುದನ್ನು ತಿಳಿಯಪಡಿಸುವ ರೀತಿಯಲ್ಲಿರುವುದು. ಆಧುನಿಕ ಕಾಲದ ಇಂತಹ ಅರ್ಥೈಸುವಿಕೆಯು ದಾರ್ಶನಿಕ ಚಳವಳಿಯ ನಂತರದ ಬೆಳವಣಿಗೆಯಾಗಿದೆ. ಆದರೆ, ನಮಗೆ ಇಲ್ಲಿ ಕಾಣುವ ವ್ಯಕ್ತಿ ಸಮುದಾಯದಿಂದ ಭಿನ್ನವಾಗಿ ಕಂಡುಬರುವುದಿಲ್ಲ. ವ್ಯಕ್ತಿ ಎಂದರೆ ಇಲ್ಲಿ ಮೂಲಭೂತವಾಗಿರುವಂತಹ ಮಾನವನ ಗುಣಸ್ವಭಾವದ ಕಲ್ಪನೆಯಾಗಿದೆ. ಬೇರೆಯವರೊಂದಿಗೆ ಅತ್ಯಂತ ವೈಯಕ್ತಿಕವೆನ್ನುವ ಧಾಟಿಯಲ್ಲಿ ಬೆಳೆಯುವ ಈ ವಚನ ವೈಯಕ್ತಿಕ ನೆಲೆಯನ್ನು ದಾಟಿ ಇನ್ನೊಂದು ಹೆಣ್ಣಿಗೂ ಅನ್ವಯವಾಗುವ ಗುಣವಾಗಿ ಪರಿವರ್ತನೆಗೊಳ್ಳುತ್ತದೆ. ಸಿಂಗಾರವ ಮಾಡಿಕೊಳ್ಳುವುದು – ಪಾಲಿಸಲೇಬೇಕಾದ ನಿಯಮದಂತೇನೂ ವ್ಯಕ್ತವಾಗಿರುವುದಲ್ಲ. ತಾನು ಇನ್ನೊಬ್ಬರಿಗೆ ಹೇಳುತ್ತಿರುವುದಾದರೂ ತನ್ನ ಅನುಭವವನ್ನು ನಿಖರವಾಗಿ ಅಭಿವ್ಯಕ್ತಿಸುವ ಪ್ರಯತ್ನದ ಜೊತೆಗೆ, ಇಲ್ಲಿ ತನಗಾಗುವ ಅನುಭವ ಬೇರೆಯವರಿಗೂ ಆಗಿದೆ/ಆಗುತ್ತದೆ/ಆಗಲೆಂಬ ಆಶಯವಿದೆ. ವ್ಯಕ್ತಿಯಾಗಿ ತನ್ನ ಹಂಬಲ, ಎಲ್ಲರ ಹಂಬಲವೂ ಹೌದು. ಇಲ್ಲಿ ಚಿಂತನೆ(ನುಡಿ) ಮತ್ತು ಆಚಾರದಲ್ಲಿ (ನಡೆ) ಅಂತಹ ದ್ವಂದ್ವ ಕಂಡುಬರುವುದಿಲ್ಲ. ಆದುದರಿಂದ ಇಲ್ಲಿ ಚಿಂತನೆಯೇ ಆಚಾರ, ಆಚಾರವೇ ಚಿಂತನೆ. ಅಕ್ಕನ ಈ ವಚನ ಆಂತರಂಗಿಕ ಸಂವಾದವೆಂಬಂತೆ/ ಅಂತರ್ಮುಖಿಯೆಂಬಂತೆ ಕಂಡರೂ ಬಹಿರ್ಮುಖ ವ್ಯಾಪ್ತಿಯಲ್ಲಿ ಅನಾವರಣಗೊಳ್ಳುತ್ತದೆ.

ಮೊದಲನೆಯದಾಗಿ, ಅಕ್ಕ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವುದು ದೈವದ ಜೊತೆಗಿನ ಸಂಬಂಧದ ಮೇರೆಗೆ. ಈ ಸಂದರ್ಭದಲ್ಲಿ ತನ್ನನ್ನು ತಾನು ಅಲಂಕರಿಸಿಕೊಳ್ಳುವುದು ಮಹಿಳೆಯ ವೇಷಭೂಷಣದ ಪ್ರತೀಕವಾಗಿರುವ ಒಡವೆ, ವಸ್ತ್ರ, ಅಲಂಕಾರದೊಂದಿಗೆ. ಎರಡನೆಯದಾಗಿ ತನ್ನ ಗಂಡನಿಗಾಗಿ ತಾನು ಅಲಂಕರಿಸಿಕೊಂಡು, ಗಂಡನನ್ನು ಇದಿರು

ಗೊಳ್ಳುವುದು, ಅಂದರೆ ಬರಮಾಡಿಕೊಳ್ಳುವುದು. ಇದು ಒಬ್ಬ 'ಆದರ್ಶೀಕೃತ ಸದ್ಗೃಹಸ್ಥೆಯ ಲಕ್ಷಣ'. ಸಂದರ್ಭಕ್ಕನುಸಾರವಾಗಿ (ವಚನಗಳಲ್ಲಿ ಸಂದರ್ಭಗಳನ್ನು ಶರಣತ್ವದ ವಿಕಸನದ ಹಿನ್ನೆಲೆಯಲ್ಲಿ ಶರಣಳ/ನ ಪೂರ್ವ ಸಿದ್ಧತೆಯನ್ನು ಹಲವು ಪರಿಯಾಗಿ ವಿವರಿಸಲಾಗಿದೆ) ಲಿಂಗತ್ವವಾದಂತಹ (gender) ಪಾತ್ರ ಪೋಷಣೆ, ಲಿಂಗಸಂಬಂಧಿ (gender related) ಆಚಾರ, ಭಾವಾಭಿವ್ಯಕ್ತಿ, ನಡೆ(ಆಚಾರ), ನುಡಿ(ವಿಚಾರ), ಅನಾವರಣಗೊಳ್ಳುತ್ತಲೇ ಹೋಗುವುದನ್ನು ನೋಡ ಬಹುದು. 'ಮನೆ'ಯಂತೂ ಹೆಣ್ಣಿನ(ಗೃಹಿಣಿಯ) ಕಾರ್ಯಾಚರಣೆಯ ಒಂದು ವಲಯ (phere)ವಾಗಿ ಪರಿಗಣಿತವಾಗಿರುವುದು.

ಇಲ್ಲಿ ಅಕ್ಕ ಹೆಣ್ತನದ ಪರಿಧಿಯಲ್ಲಿಯೇ ವ್ಯವಹರಿಸುವುದನ್ನು ಕಾಣಬಹುದು. ಮಲ್ಲಿಕಾರ್ಜುನನೊಡನೆ 'ಸೇರಲು' ಶರೀರವನ್ನು ಅಲಂಕೃತಗೊಳಿಸಿಕೊಂಡು, ಶರೀರದ ಮೂಲಕವೇ ಲೌಕಿಕವಾಗಿ ಅನಿವಾರ್ಯವಾಗಿರುವಂತಹ ಎಲ್ಲಾ ಪ್ರತಿಮೆಗಳನ್ನು ಇಲ್ಲಿ ಬಳಸಿ ಕೊಳ್ಳಲಾಗಿದೆ. ಅಕ್ಕನ ಕಾಯದ ವಿಜೃಂಭಣೆ ಅನುಸಂಧಾನವನ್ನು ಇಲ್ಲಿ ಹೀಗೆ ಕಂಡರೆ, ಇನ್ನೊಂದೆಡೆ, ದೇಹದ ಬಗ್ಗೆ ಭಿನ್ನವಾದ ಕಲ್ಪನೆಯನ್ನು ನಾವು ನೋಡಬಹುದು.

**ಯುದ್ಧ ಮತ್ತು ಯೋಧಳ/ನ ರೂಪಕಗಳು**

ಮೇಲ್ಕಂಡ ವಚನದಲ್ಲಿ ಅಕ್ಕ ವರ್ಣಿಸುವಂತಹ ಆಭರಣಗಳು ಉಡುಗೆ-ತೊಡುಗೆ, ತನ್ನ ಬೇರೆ ವಚನಗಳಲ್ಲಿ ವ್ಯಕ್ತವಾಗುವುದಕ್ಕಿಂತ ಭಿನ್ನವಾಗಿದೆ. ಉಡುಗೆ-ತೊಡುಗೆ ಬದಲಾದಂತೆ ಹಲವು ರೂಪ-ಸ್ವರೂಪಗಳು ಸಾಂದರ್ಭಿಕವಾಗಿ ಮೈದಾಳುವುವು. ಉದಾಹರಣೆಗೆ:

**ಆಳುತನದ ಮಾತನೇರಿಸಿ ನುಡಿದೆಡೆ**
**ಆಗಳೆ ಕಟ್ಟಿದೆನು ಗಂಡುಗಚ್ಚೆಯ.**
**ತಿಗುರನೇರಿಸಿ ತಿಲಕವನ್ನಿಟ್ಟು**
**ಕೈದುವ ಕೊಂಡು ಖಳನೇರಿದ ಬಳಿಕ**
**ಕಟ್ಟಿದ ನಿರಿ ಸಡಿಲಿದೆಡೆ ಇನ್ನು ನಿಮ್ಮಾಣೆ**
**ಕಾಣಾ ಮಲ್ಲಿಕಾರ್ಜುನ.**

ಗುಣಶೀಲೆಯಾದ ವೀರಶೈವ ಮಹಿಳೆಯಾಗಲು ನಾಯಕಪ್ರಧಾನ ಗುಣಗಳನ್ನು ಅವಧರಿಸಿಕೊಳ್ಳಬೇಕಾಗುವುದು. ತನ್ನಲ್ಲಿರುವ ಆಸೆ ಆಮಿಷ ಮೀರಲು ಉಡುಗೆಯೇ ಸಹಾಯಕವಾಗುವಂತಹ ಸಂಕೇತವಾಗುವುದು. ತನ್ಮೂಲಕ ಸ್ಥೈರ್ಯ, ದೃಢತೆ, ಸಶಕ್ತ ಮನಸ್ಸನ್ನು ಪ್ರತಿನಿಧಿಸುವುದು. ಯುದ್ಧದ ಆಲಂಕಾರಿಕತೆ, ಸನ್ನದ್ಧತೆಗೆ ಪೂರಕವಾದಂತಹ ಅಂಶವಾಗಿ ಹೊರಹೊಮ್ಮಿರುವುದು. ಶತ್ರುವಿನ ಧ್ವಂಸವೆಂದರೆ, ತನ್ನಲ್ಲಿರುವ ಭವಿತನದ ಕೊಲ್ಲುವಿಕೆ, ತನ್ನನ್ನು ತಾನೇ ಗೆಲ್ಲುವ ಪರಿಯದು.

**ಮುಂಗೈಯಲ್ಲಿ ವೀರಗಂಕಣವಿಕ್ಕಿ,**
**ಮುಂಗಾಲಲ್ಲಿ ತೊಡರು ಬಾವಲಿಯ ಕಟ್ಟಿದೆ.**
**ಗಂಡುಡುಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದೆನು.**
**ಚೆನ್ನಮಲ್ಲಿಕಾರ್ಜುನ,**
**ನಿಮ್ಮಾಣೆಗೆ ಊಣೆಯವ ತಂದೆನಾದಡೆ,**
**ನಿಮ್ಮ ತೊತ್ತಿನ ಮಗಳಯ್ಯಾ.**

ಶರಣನ ವಿಕಸನದ ಪ್ರಕ್ರಿಯೆಯ ಹಿನ್ನೆಲೆಯಲ್ಲಿ 'ಭವಿತ್ವದ ಗುಣಗಳು' (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇತ್ಯಾದಿ) ಶರಣ ನನ್ನು ಅಧಃಪತನಕ್ಕೆ ತಳ್ಳುವಂತಹುದು. ಇದರ ಬಗ್ಗೆ ಅಕ್ಕ ತನ್ನ ಆತಂಕವನ್ನು ವ್ಯಕ್ತಪಡಿಸುತ್ತಾಳೆ. ಅಲ್ಲಿ ಅಕ್ಕ ತನ್ನ ಭೌತಿಕ ವಾಸ್ತವವಾದ ಸ್ತ್ರೀಲಿಂಗವನ್ನು ಮೀರಿ ಪುರುಷತ್ವದ ನೆಲೆಯಲ್ಲಿ ಭವಿತ್ವವನ್ನು ಎದುರಿಸಲು ಅಣಿಯಾಗುತ್ತಾಳೆ. ಯುದ್ಧದ ಹಿನ್ನೆಲೆಯಲ್ಲಿ ಶರಣೆಯ, ಶರಣತ್ವದ ವಿಚಾರಗಳನ್ನು ಪ್ರಸ್ತಾಪಿಸಿ, ಅಪಾಯವನ್ನೆದುರಿಸಬೇಕಾದಾಗ ಒಬ್ಬ ಯೋಧ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ವಿವರಿಸುತ್ತಲೇ, ತನ್ನ ನಿಲುವನ್ನು ಪ್ರಕಟಪಡಿಸುತ್ತಾಳೆ. ತನ್ನಲ್ಲಿ ಅಡಕವಾಗಿರುವಂತಹ ಭವಿತ್ವ ಮತ್ತು ಅದಕ್ಕೆ ಸಂಬಂಧಪಟ್ಟಿರುವಂತಹ ಅಪಾಯಗಳನ್ನು ಗೆಲ್ಲಬೇಕಾದರೆ, ತಾನು ತನ್ನನ್ನು ಸಮರಕ್ಕೆ ಸಿದ್ಧಳಾದ ಯೋಧನಂತೆ('ಯೋಧೆಯಂತಲ್ಲ') ಚಿತ್ರಿಸಿಕೊಳ್ಳುತ್ತಾಳೆ.

ಮೇಲ್ಕಂಡ ಎರಡು ಮತ್ತು ಮೂರನೆಯ ವಚನಗಳಲ್ಲಿರುವ ಸಂಕೇತಗಳು ಪುರುಷತ್ವದ ಸಂಕೇತಗಳೇ ಆಗಿವೆ. ಇಲ್ಲಿ ಯುದ್ಧ, ರಕ್ಷಣೆ, ಹೆದರದಿರುವಿಕೆ, ನಿಷ್ಠೆ, ದೃಢತೆ, ಗೆಲ್ಲುವುದು, ಹಿಮ್ಮೆಟ್ಟದಿರುವುದು, ಮುಂತಾದುವು ಸಾಮಾನ್ಯವಾಗಿ ಪುರುಷತ್ವವನ್ನು ಪ್ರತಿನಿಧಿಸುವ ಗುಣಗಳನ್ನು ಬಳಸಿರುವಂತಹ ಯುದ್ಧ ಮತ್ತು ಯೋಧಳ/ನ ರೂಪಕ ಗಳಲ್ಲಿ ನಾವು ಕಾಣಬಹುದು. ಗಮನಿಸಬೇಕಾದ ಅಂಶವೆಂದರೆ, ಸಮುದಾಯವು ತಾನು ನಂಬಿರುವಂತಹ ಆಚರಣೆಗಳನ್ನು, ಅದರ ಮೂಲಕ ತಾನು ಸೇರಿರುವ ವೀರಶೈವ ಸಮುದಾಯವನ್ನು ಪ್ರತಿನಿಧಿಸಲು ಸದರಿ ಪ್ರತಿಮೆಗಳನ್ನು ಅಕ್ಕ ಬಳಸಿದ್ದಾಳೆ. ಐಕ್ಯದ ಸ್ಥಿತಿಯನ್ನು ತಲುಪಲು, ಸಮುದಾಯದ ಆಚರಣೆಗಳನ್ನು ಯಾವುದೇ ಕುಂದಿಲ್ಲದೆ ಪರಿಪಾಲಿಸ ಬೇಕಾದರೆ, ಬೇಕಾಗುವಂತಹ 'ವೀರತ್ವ'ದ ಗುಣಗಳು 'ಪುರುಷತ್ವ'ದ ಗುಣಗಳೇ ಆಗಿವೆ. ಅಂದರೆ ಹಂತ ಹಂತವಾಗಿ ಷಟ್ ಸ್ಥಲದ ಹಾದಿಯನ್ನು ಕ್ರಮಿಸುವಾಗ ಮೊದಲ ಹೆಜ್ಜೆಯಾಗಿ ಕಾಣಿಸುವಂತಹ ಭವದ ಗುಣಗಳ ಗೆಲುವಿಗೆ ಪೂರಕವಾಗಿ ಮತ್ತು ಧಾರ್ಮಿಕ ಆಚಾರದ ಒಂದು ಭಾಗವಾಗಿ ಗಣಾಚಾರವನ್ನು ಅಕ್ಕ ಪುರಷತ್ವದ ನೆಲೆಯಲ್ಲಿ ಇಲ್ಲಿ ವರ್ಣಿಸುತ್ತಾಳೆ. ಸಮುದಾಯಕ್ಕೆ ಅಪಖ್ಯಾತಿ ಬಂದಾಗ, ಅದನ್ನು ಉಳಿಸಿಕೊಳ್ಳಲು ವೀರ ಪುರುಷತ್ವದ ವೇಷ ತೊಟ್ಟು, ಶರಣತ್ವದ ಘನತೆ, ಗೌರವವನ್ನು ಕಾಪಾಡುವ 'ಗಣಾಚಾರಿ' ಕಂಕಣಬದ್ಧಳಾಗುತ್ತಾಳೆ.

ಚಾರಿತ್ರಿಕವಾಗಿ ವಿಶ್ಲೇಷಿಸುವುದಾದರೆ, ಹನ್ನೆರಡನೆಯ ಶತಮಾನದಲ್ಲಿ ಬೇರೆ ಬೇರೆ ಧರ್ಮಗಳಿಂದ ವೀರಶೈವ ಧರ್ಮಕ್ಕೆ ಸೇರಿದವರು ಸಾಕಷ್ಟು ಜನರಿದ್ದರು. ಈ ಹಿಂದಿನ ಸಂಪ್ರದಾಯದ 'ವಾಸನೆ'ಯನ್ನು ತೊರೆದು ವೀರಶೈವನಾಗುವಂತಹ ಪ್ರಕ್ರಿಯೆ ಘಟಿಸುವಾಗ, ನಿಜವಾದ ವೀರಶೈವ ನಾಗುವುದು ಹೇಗೆಂದರೆ, ತನ್ನೊಳಗಡೆಯಿರುವಂತಹ ಭವದ ಅಂಶಗಳು, ಮತ್ತು ಬಹಿರಂಗದ ಆಚರಣೆಯಲ್ಲಿ ಕಾಣಿಸುವಂತಹ ಹಿಂದಿನ ಸಂಪ್ರದಾಯಗಳ ಭವದ ವಾಸನೆಯ ಅಂಶಗಳು, ಎರಡನ್ನೂ ಏಕ ಕಾಲಕ್ಕೆ ಗೆಲ್ಲಬೇಕಾದರೆ, ಅಕ್ಕ ಬಳಸುವಂತಹ ಪ್ರತಿಮೆಗಳು ಯುದ್ಧದ ರೂಪಕದ ಮೂಲಕ ಅನಾವರಣಗೊಳ್ಳುವುವು. ಈ ಅಂಶಗಳನ್ನು ಗೆಲಿದು, ಎರಡರ್ಥಗಳ ಭವವನ್ನು ತನ್ನಿಂದ ಸಂಪೂರ್ಣವಾಗಿ ದೂರ ತಳ್ಳಿ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯವಾಗಬೇಕಾದ ಸಂದರ್ಭದಲ್ಲಿ ಮನೆಯ ವಾತಾವರಣ ಮತ್ತು ಮಹಿಳೆಯ ಸಂಕೇತವಾಗಿರುವ ಉಡುಗೆ-ತೊಡುಗೆಯ ಬಗೆಯನ್ನು ನಾವು ಕಾಣುತ್ತೇವೆ.

'ಶರಣಸತಿ, ಲಿಂಗಪತಿ' ಎಂಬ ಪರಿಕಲ್ಪನೆ ಶರಣರಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವುದು. ಕೆಲವರು ಇದನ್ನು ಗಮನದಲ್ಲಿರಿಸಿಕೊಂಡು ಅಕ್ಕ ಹೆಣ್ಣೇ ಆಗಿರುವುದರಿಂದ ಸತಿ ಭಾವವನ್ನು ಆರೋಪಿಸಿಕೊಳ್ಳಬೇಕಾದ ಪ್ರಮೇಯವೆ ಬರುವುದಿಲ್ಲವೆಂದು ವಾದಿಸುತ್ತಾರೆ. ಆದರೆ, ಈ ಮೇಲ್ಕಂಡ ಮೂರು ವಚನಗಳಲ್ಲಿ ನಾವು ಕಾಣಬಹುದಾದದ್ದು ಏನೆಂದರೆ, ಎರಡು ಅರ್ಥದಲ್ಲಿ ಭವವನ್ನು ಗೆಲ್ಲುವುದಕ್ಕೆ ಪ್ರಯತ್ನಗಳು ಕಂಡುಬರುವುದು, ಭವಿತನ ಮೀರುವಾಗೆಲ್ಲ ಪುರುಷನಾಗುವುದರ ಮೂಲಕ ಪುರುಷತ್ವವನ್ನು ಸಮರ್ಥಿಸುವುದು ಮತ್ತು ದೇವರಲ್ಲಿ ಐಕ್ಯವಾಗುವುದಕ್ಕೆ ಅತ್ಯವಶ್ಯಕವಾಗಿ ಬೇಕಾಗಿರುವಂತಹ ಸತಿತ್ವವನ್ನು ಸೃಷ್ಟಿಸಲಾಗಿದೆ. ಇಲ್ಲಿ ನಾವು ಕಾಣುವ ಸ್ತ್ರೀತ್ವದ ಕಲ್ಪನೆ ತನ್ನನ್ನು ತಾನು ಅರ್ಪಿಸಿಕೊಂಡಿರುವಂತಹ ಸತಿಯಂತಾಗಿದೆ. ಮತ್ತೂ ದೈವವನ್ನು ಸತೀತ್ವದ ಉಭಯವಾಗಿರುವ (ಬೈನರಿಯಾಗಿರುವಂತಹ) 'ಪರ'ವಾಗಿ, ನಾವು ಇಲ್ಲಿ ಕಾಣುತ್ತೇವೆ.

ಆಧುನಿಕ ಸ್ತ್ರೀವಾದಿ ವಿಮರ್ಶೆಯಲ್ಲಿ ದೇಹ ಮತ್ತು ಲಿಂಗತ್ವವನ್ನು ಬೇರ್ಪಡಿಸಿ, ಲಿಂಗತ್ವ ಸಾಮಾಜಿಕ ನಿರ್ಮಿತಿಯೆಂದು ಪರಿಗಣಿಸುತ್ತಾ, ದೇಹವನ್ನು ಗಂಡು ಮತ್ತು ಹೆಣ್ಣು ಎಂಬುದಾಗಿ ವಿಭಾಗೀಕರಿಸಲಾಗಿದೆ. ಇಲ್ಲಿ ದೇಹವನ್ನು ಸಹಜವೆಂಬಂತೆ ನೋಡಲಾಗಿದೆ. ಇಲ್ಲಿ ದೇಹ–ಜೈವಿಕ, ಲಿಂಗತ್ವ–ಸಾಮಾಜಿಕವಾದುದೆಂಬ ಪರಿಗಣನೆ, ರಾಜಕೀಯವಾಗಿ ಮುಕ್ತಿ ನೀಡುವಂತಹುದ್ದು. ಆದರೂ, ಅದರಲ್ಲಿ ಅಡಕವಾಗಿರುವಂತಹ ಮುಖ್ಯ ಸಮಸ್ಯೆಯೇನೆಂದರೆ, ದೇಹವನ್ನು ನಿಗದಿತವಾಗಿ(Natural and Fixed), ನೀಡಲ್ಪಟ್ಟಿರುವಂತೆ ನೋಡಲಾಗಿರುವುದು. ಅಕ್ಕನಲ್ಲಿ ಜೈವಿಕವಾಗಿರುವಂತಹುದ್ದರ ಮೂಲಕವೇ ನಿಗದಿಗೊಳಪಡದೆ, ಸ್ತ್ರೀತ್ವ ಮತ್ತು ಪುರುಷತ್ವ ನಿರ್ಮಾಣಗೊಳ್ಳುವುದು. ಆದರೆ, ಅಕ್ಕನಲ್ಲಿ ನಾವು ಕಾಣುವುದೇನೆಂದರೆ, ಸಾಮಾಜಿಕ ನಿರ್ಮಿತಿಯಲ್ಲಿ ನೀಡಲ್ಪಟ್ಟಿರುವಂತೆ, ಅಕ್ಕನಲ್ಲಿ ದೇಹದ ಪ್ರತಿಮೆ ನಿಗದಿತವಾಗಿರುವಂತಹುದಲ್ಲ. ಅಲ್ಲಿ ಸ್ತ್ರೀತ್ವ ಮತ್ತು ಪುರುಷತ್ವದ ಸಂಕೀರ್ಣತೆಯನ್ನು ನಾವು ಕಾಣಬಹುದು. ಎರಡರ್ಥದ, ಅಂದರೆ ಅಂತರಂಗದ ಆಮಿಷಗಳು– 'ಮಾನಸಿಕ'ವಾಗಿರುವಂತಹುದ್ದು, ಬಹಿರಂಗದ ಆಮಿಷಗಳು–ಪಾರಂಪರಿಕ ಭವಕ್ಕೆ ಸಂಬಂಧಿಸಿರುವುದು. ಇವೆರಡನ್ನೂ ಮೀರುವ– ಸಾಮಾಜಿಕ ಸ್ತ್ರೀತ್ವವನ್ನು ಧಾರ್ಮಿಕ ಸ್ತ್ರೀತ್ವದಲ್ಲಿಟ್ಟು ಆದರ್ಶೀ/ವೈಭವೀಕರಿಸಲಾಗಿದೆ. ಹಾಗೆಂದರೆ, ನಾನಿಲ್ಲಿ ಹೇಳುತ್ತಿರುವುದು, ಪ್ರಾಚೀನ ಭಾರತದಲ್ಲಿ, ಆಧುನಿಕ ಭಾರತದ ಎಲ್ಲಾ ಅಂಶಗಳು ಅಡಕವಾಗಿದ್ದವು ಎಂದಲ್ಲ, ಬದಲಾಗಿ ಅಕ್ಕನಲ್ಲಿ ಕಾಣಿಸಿಕೊಳ್ಳುವ ಸಂಕೀರ್ಣವಾದಂತಹ ಸ್ತ್ರೀತ್ವದ ಕಲ್ಪನೆಗಳ ಬಗೆಗೆ. ಕಾಯ ನಿರಂತರವಾಗಿ, ಸಾರ್ವಜನಿಕವಾಗಿ, ಬದಲಾಗದಿರುವಂತೆ ಕಾಣಿಸಿಕೊಳ್ಳದೆ ಬೇರೆ ಬೇರೆ ಸಂದರ್ಭದಲ್ಲಿ ಪರಿವರ್ತಿಸಬಹುದಾದ ಸಾಧನವಾಗಿ ಕಾಣಿಸಿಕೊಂಡಿರುವುದು ಮತ್ತು ಆ ಸಾಧನದ ಮೂಲಕ, ಅತೀ ಎತ್ತರವಾದಂತಹ ದೇವರನ್ನು ಮುಟ್ಟುವ ಗುರಿ ಹೊಂದಿರುವುದು. ಲಿಂಗೈಕ್ಯ ಸಾಧಿಸಲು ಬೇಕಾಗಿರುವಂತಹ'– ಸ್ತ್ರೀತ್ವ, ಶರಣತ್ವ, ಕಿಂಕರಭಾವ, ಅರ್ಪಣಾ ಮನೋಭಾವದ ಮೂಲಕ ಆತ್ಯಂತಿಕ ಮಟ್ಟದ ಸ್ತ್ರೀತ್ವವನ್ನು ಪಡೆಯುವುದು. ಈ ಸನ್ನಿವೇಶದಲ್ಲಿ ಸ್ತ್ರೀತ್ವದ ಅವಕಾಶ ಮತ್ತು ಪುರುಷತ್ವದ ಅವಕಾಶ ಮತ್ತು ಅವುಗಳ ನಡುವಿರುವ ನೈತಿಕ ಅಂತರ್ ಪ್ಲೇ/ಸ್ತರವು ಒಂದರ್ಥದಲ್ಲಿ ಅತ್ಯಂತ ಉತ್ಕೃಷ್ಟವಾಗಿರುವಂತಹ ಸ್ತ್ರೀತ್ವವನ್ನು ಪ್ರಸ್ತಾಪಿಸಿದರೂ, ಕಿಂಕರ ಭಾವದ ಸ್ತ್ರೀತ್ವದ ನಿರ್ಮಿತಿಯನ್ನು ನಾವು ಕಾಣುತ್ತೇವೆ. ಅಕ್ಕನಲ್ಲಿ ಸ್ತ್ರೀತ್ವದ ಕಲ್ಪನೆ ಉತ್ತುಂಗವೂ ಹೌದು, ಶಿಥಿಲವೂ ಹೌದು. ಇದನ್ನು ಏಕಕಾಲದಲ್ಲಿ ಅವಳು ಅಭಿವ್ಯಕ್ತಪಡಿಸುತ್ತಾಳೆ ಕೂಡಾ. ಸಾಮಾಜಿಕವಾಗಿರುವಂತಹ ಸ್ತ್ರೀತ್ವವನ್ನು ಧಾರ್ಮಿಕ ವಲಯಕ್ಕೆ ತಂದು ಅದನ್ನು ಉನ್ನತಗೊಳಿಸಿದರೂ, ಅದೇ ತರಹದ ಅಸಮಾನ ಸಂಬಂಧಗಳನ್ನು ಧಾರ್ಮಿಕ ನೆಲೆಯಲ್ಲೂ ಕಾಣುತ್ತಾಳೆ. ಮೂಲಭೂತವಾಗಿ ಅಕ್ಕನಲ್ಲಿ ದೇಹದ ಕಲ್ಪನೆ ನಿಗದಿಗೊಳಪಡದಿದ್ದರೂ, ಅದರ ಸಾಮಾಜಿಕ ನಿರ್ಮಿತಿಯ ಹಿನ್ನೆಲೆಯಲ್ಲಿಯೇ ಸ್ತ್ರೀತ್ವ ಪುನರೂಪುಗೊಳ್ಳುವುದು.

'ಸ್ತ್ರೀ'ತ್ವ ಎನ್ನುವುದು ಗುರಿ ಮುಟ್ಟಲು ಒಂದು ಸಾಮರ್ಥ್ಯ ಮತ್ತು ಸುಗುಣವಾಗಿ(virtue) ನೋಡಲಾಗಿದೆ. ಗಂಡಾಗಲಿ ಹೆಣ್ಣಾಗಲಿ ಈ ಸ್ತ್ರೀತ್ವವನ್ನು ಎಲ್ಲರೂ ಪಡೆಯುವ ಸಾಧ್ಯತೆ ಇದೆ. ಅದನ್ನು ಎಲ್ಲರೂ ಆಚರಿಸಬಹುದಾದ ಗುಣವಾಗಿದೆ. ಹೀಗೆ ಸ್ತ್ರೀತ್ವ ಅಕ್ಕನಲ್ಲಿ ಒಂದು ಸಾಮರ್ಥ್ಯವೂ(potentiality), ಶಕ್ತಿಯೂ(power) ಹೌದು. ಹೀಗಾಗಿ ಅಕ್ಕನಲ್ಲಿ ನಾವು ಕಾಣಬಹುದಾದಂತಹ ದೇಹದ ಮೂಲಕ ನಿರ್ಮಿತವಾಗುವಂತಹ ಸ್ತ್ರೀತ್ವ ಸಾಧನೆಯೂ ಹೌದು. ಸಾಧನೆಯ ಒಂದು ವಿಧಾನವೂ ಹೌದು ಮತ್ತು ಗುರಿಯೂ ಅದೇ ಆಗಿದೆ.

ಇದರಲ್ಲಿ ಇನ್ನೂ ಮುಖ್ಯವಾದ ಅಂಶವೇನೆಂದರೆ, ಮೊದಲನೆಯ ವಚನದಲ್ಲಿ ನಾವು ಕಾಣುವಂತಹ 'ಮನೆ' ಮತ್ತು ಎರಡು ಮತ್ತು ಮೂರನೆಯ ವಚನಗಳಲ್ಲಿ ಕಾಣುವಂತಹ ಯುದ್ಧದ ವಿಜೃಂಭಿಸುವಿಕೆಯನ್ನು ಗಮನಿಸಬೇಕು. ಸ್ತ್ರೀವಾದಿ ವಿಮರ್ಶೆಯಲ್ಲಿ ಕಂಡುಬರುವಂತಹ 'ಖಾಸಗಿ ಮತ್ತು ಸಾರ್ವಜನಿಕ' ಎಂಬ ಪ್ರತ್ಯೇಕವಾದ ವಲಯಗಳನ್ನು ನಾವು ಕಾಣುವ ದ್ವಂದ್ವ ಪರಿಸ್ಥಿತಿಗಿಂತ ಭಿನ್ನವಾಗಿ ಇಲ್ಲಿ ನಿರ್ಮಾಣಗೊಳ್ಳುವುದೇ ಇಲ್ಲ. ಏಕೆಂದರೆ, ಖಾಸಗಿ ವಲಯದಲ್ಲಿ – ಶಿಶುಪಾಲನೆ, ಅಡಿಗೆ, ಹೆರುವುದು, ಅಧಿಕಾರ ಮತ್ತು ನಿಯಂತ್ರಣಗಳು ಇಲ್ಲದಿರುವ ಕಾರಣ ಅದನ್ನು ಕೆಳಸ್ತರದಲ್ಲಿ ಇಡಲಾಗಿದೆ. ಆದರೆ ಇಲ್ಲಿ ನಾವು ಕಾಣುವುದೇನೆಂದರೆ ಮನೆ(ಖಾಸಗಿ) ಮತ್ತು ರಣರಂಗ(ಸಾರ್ವಜನಿಕ) ವಲಯಗಳು 'ಪ್ರಬಲ' ಮತ್ತು 'ದುರ್ಬಲ' ಎಂಬ ವೈರುಧ್ಯವನ್ನು ತೊಡೆದು ಹಾಕುತ್ತವೆ. ಏಕೆಂದರೆ ಖಾಸಗಿ ವಲಯದಲ್ಲಿ ಮಹತ್ವಾಕಾಂಕ್ಷಿಯಾದ ಐಕ್ಯವನ್ನು ಸಾಧಿಸುವುದಕ್ಕೆ ಬೇಕಾದಂತಹ ವ್ಯಕ್ತಿತ್ವ ಸತೀತ್ವದ್ದಾಗಿದೆ.

ಅಕ್ಕನ ವಚನಗಳಲ್ಲಿ, ಮೇಲೆ ಸೂಚಿಸಿರುವ ಹಾಗೆ ನಾವು ಕಾಣಬಹುದಾದ ಅನೇಕ ವೈರುಧ್ಯಾತ್ಮಕ ಆಯಾಮಗಳ ಬಗೆಗಿನ ಗಂಭೀರ ಸಾಂಸ್ಕೃತಿಕ ಅಧ್ಯಯನ ಮತ್ತು ಅದು ಒಡ್ಡುವ ವಿಪುಲ ಅರ್ಥ ಸಾಧ್ಯತೆಗಳ ಹಿನ್ನೆಲೆಯಲ್ಲಿ ಅಕ್ಕನ ವಚನಗಳನ್ನು ಮರು ಓದಿಗೆ ಒಳಪಡಿಸುವುದು; ಮನನ ಮಾಡಿಕೊಳ್ಳುವುದು; ಹೊಸ ಒಳ ನೋಟಗಳನ್ನು ಕಂಡುಕೊಳ್ಳುವ ಪ್ರಯತ್ನ ಇನ್ನೂ ಆಗಬೇಕಾಗಿದೆ ಮತ್ತು ಆಕೆಯನ್ನು ಹೊಸದಾಗಿ ವಿಶ್ಲೇಷಿಸಬಹುದಾದ ಅಧ್ಯಯನಗಳ ಅಗತ್ಯವಿದೆ. ಏಕ ಮಾದರಿಯಲ್ಲಿ ಪರಿಭಾವಿಸುವ ಮತ್ತು ಏಕ ರೂಪಿ ಆಲೋಚನಾ ಕ್ರಮದಿಂದ ಅಕ್ಕನನ್ನು ಮುಕ್ತಗೊಳಿಸುವ ಪ್ರಯತ್ನಗಳು ಆಗಬೇಕಿದೆ. ಅಕ್ಕನ ವಚನಗಳನ್ನು ಆಂಶಿಕವಾಗಿ ತಮ್ಮ ತಮ್ಮ ಧೋರಣೆಯ ಹಿನ್ನೆಲೆಯಲ್ಲಿ ಓದಲಾಗಿರುವುದರಿಂದ, ಇಂತಹ ಮರು ಓದು ಪ್ರಸ್ತುತವಾಗಿದೆ.

❑



# ಕರ್ನಾಟಕದ ಮಹಿಳಾ ಸೂಫಿಗಳು: ಒಂದು ಟಿಪ್ಪಣಿ

● *ರಹಮತ್ ತರೀಕೆರೆ*

**ಭಾ**ರತದಲ್ಲಿ ಸೂಫಿಸಂತರ ಪ್ರಭಾವ ಇರುವ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಆದಿಲಶಾಹಿ ಮತ್ತು ಬಹಮನಿಗಳ ಕಾಲದಲ್ಲಿ ನೆಲೆಸಿದ್ದ ಗುಲಬರ್ಗೆಯ ಬಂದೇನವಾಜ್, ಆಳಂದೆಯ ಲಾಡ್ಲೆ ಮಶಾಯಿಕ, ಬಿಜಾಪುರದ ಅಮೀನುದ್ದೀನ್ ಅಲಾ, ಬಿಜಾಪುರದ ನಂಗಾಶಾಹ ಮುಂತಾದ ಪ್ರಸಿದ್ಧ ಸೂಫಿಗಳು ಇಲ್ಲಿದ್ದರು.  ಆದರೆ ಕರ್ನಾಟಕದಲ್ಲಿ ಮಹಿಳಾ ಸೂಫಿಗಳು ಹಾಗೆ ದೊಡ್ಡ ಪ್ರಮಾಣದಲ್ಲಿ ಸಿಗುವುದಿಲ್ಲ. ಕರ್ನಾಟಕವೇ ಯಾಕೆ, ಒಟ್ಟು ಭಾರತದಲ್ಲಿಯೇ ಸ್ತ್ರೀಸೂಫಿಗಳ ಪ್ರಮಾಣ ಕಡಿಮೆ. ಆದರೆ ಅರಬಸ್ಥಾನದಲ್ಲಿ–ಸೂಫಿಸಂನ ಮೊದಲ ಘಟ್ಟದಲ್ಲಿ–ಅನೇಕ ಸಾಧಕಿಯರು ಬಂದರು. ಅವರಲ್ಲಿ ರಾಬಿಯಾ ಬಸ್ರಾ ಒಬ್ಬಳು. 8ನೇ ಶತಮಾನದಲ್ಲಿದ್ದ ಈಕೆ ಈಗಿನ ಇರಾಕಿನಲ್ಲಿರುವ ಬಸ್ರಾ ನಗರದವಳು. ದೈವವನ್ನು ಪ್ರೀತಿಯ ಮಾರ್ಗದಿಂದಲೇ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು ಎಂದು ಪ್ರತಿಪಾದಿಸುತ್ತಿದ್ದ ದಾರ್ಶನಿಕಳು ಅವಳು. ರಾಬಿಯಾ ಜಗತ್ತಿನ ಸೂಫಿಪಂಥದ ಚರಿತ್ರೆಯಲ್ಲಿಯೇ ಬಹಳ ದೊಡ್ಡ ತಾರೆ. ಆಕೆಯನ್ನು ಕುರಿತು ನೂರಾರು ಕಲಾವಿದರು ಚಿತ್ರಗಳನ್ನು ರಚಿಸಿದರು. ಅವಳೊಬ್ಬ ದಂತಕತೆ. ಅವಳು ಇಸ್ಲಾಮಿಕ್ ಸಂಪ್ರದಾಯವಾದಿ ಧರ್ಮವು ಹೇಳುವ ಭಯ ಮತ್ತು ಆಮಿಷಮೂಲವಾದವನ್ನು ದಿಟ್ಟವಾಗಿ ಟೀಕಿಸಿದವಳು. ಸ್ವರ್ಗವನ್ನು ಬೆಂಕಿಹಚ್ಚಿ ಸುಡಬೇಕೆಂದೂ ನರಕದ ಬೆಂಕಿಯನ್ನು ನೀರುಹಾಕಿ ಸುಡಬೇಕೆಂದೂ ಹೇಳುತ್ತಿದ್ದ ಅವಳು ನೀರನ್ನೂ ಬೆಂಕಿಯನ್ನೂ ಹಿಡಿದು ಓಡಾಡುತ್ತಿದ್ದಳು ಎಂದು ಐತಿಹ್ಯವಿದೆ. ಬಹುಶಃ ಚರಿತ್ರೆಯಲ್ಲಿ ಮತ್ತೆ ಇಷ್ಟೊಂದು ದೊಡ್ಡ ಯೋಗಿನಿ ಬರಲಿಲ್ಲ.

ಭಾರತದ ಮಟ್ಟಿಗೆ ಸೂಫಿಗಳಲ್ಲಿ ಮಹಿಳೆಯರು ಕಡಿಮೆ ಇರಲು ಕಾರಣ ಸೂಫಿ ದರ್ಶನದಲ್ಲಿಯೇ ಇದೆಯೊ, ಈ ಸೂಫಿಪಂಥವು ಬದುಕುತ್ತಿರುವ ಭಾರತೀಯ ಸಾಮಾಜಿಕ ಸನ್ನಿವೇಶದಲ್ಲಿದೆಯೊ ಅಥವಾ ಇಸ್ಲಾಮಿಕ್ ಸಮಾಜದಲ್ಲಿದೆಯೊ? ಇದರ ಬಗ್ಗೆ ಆಳವಾದ ಚರ್ಚೆಯ ಅಗತ್ಯವಿದೆ. ಉದಾರವಾದಿ ಚಿಂತನೆಗಳನ್ನು ಒಳಗೊಂಡಿರುವ ಸೂಫಿ ಅನುಭಾವಿ ದರ್ಶನವು ಧಾರ್ಮಿಕ ದ್ವೇಷದ ಬದಲಿಗೆ ಪ್ರೀತಿತತ್ವವನ್ನು ಪ್ರತಿಪಾದಿಸುತ್ತದೆ. ಬಲಾಢ್ಯಶಕ್ತಿಯುಳ್ಳ  ದೈವಕ್ಕೆ ತಮ್ಮನ್ನು ಕುಗ್ಗಿಸಿಕೊಂಡು ಮಣಿಯುವ ಭಕ್ತಿಗಿಂತ ಸ್ವತಃ ಮಾನವರೇ ತಮ್ಮ ಸಾಧನೆಯ ಮೂಲಕ ದೈವಗಳಾಗಿ ಬದಲಾಗುವದನ್ನು

ಅದು ಹೇಳುತ್ತದೆ. ಹೀಗಾಗಿಯೇ ಅದು ಪುರೋಹಿತಶಾಹಿಯನ್ನು ನಿರಾಕರಿಸುತ್ತದೆ. ಆದರೂ ಈ ಪಥದಲ್ಲಿ ಸ್ತ್ರೀಯರು ಸಾಧಕಿಯರಾಗಿ ಯಾಕೆ ಬೆಳೆಯಲು ಆಗಲಿಲ್ಲ ಎಂಬ ಪ್ರಶ್ನೆ ಕಾಡುತ್ತದೆ. ಹಾಗೆ ಕಂಡರೆ ಸೂಫಿಗಳು ವಿರಕ್ತರಲ್ಲ. ಅವರಿಗೆ ಸಂಸಾರವಿತ್ತು. ಆದರೂ ಅವರು ಮಹಿಳೆಯರಿಗೆ ದೀಕ್ಷೆ ಮತ್ತು ಖಿಲಾಫತ್ ಕೊಟ್ಟ ನಿದರ್ಶನಗಳು ಕಡಿಮೆ. ಒಬ್ಬೊಬ್ಬ ಸಂತನ ಹೆಸರಲ್ಲಿ ಸೂಫಿಸಂ ಶಾಖೆಗಳಾಗಿ ವಿಭಜನೆಗೊಂಡು ಸ್ವತಂತ್ರ ಪರಂಪರೆಯಾಗಿ ಬೆಳೆಯತೊಡಗಿದ ಬಳಿಕ ಅದಕ್ಕೆ ಒಂದು ಬಗೆಯ ಸಾಂಸ್ಥಿಕತೆಯೂ ಪ್ರಾಪ್ತವಾಯಿತು. ಸೂಫಿಗಳು ರಾಜರಿಂದ ಇನಾಮು ಜಹಗೀರುಗಳನ್ನು ಪಡೆದು ದೊಡ್ಡ ಆಸ್ತಿವಂತರಾದ ಬಳಿಕ, ಆಧ್ಯಾತ್ಮಿಕ ಉತ್ತರಾಧಿಕಾರತ್ವವನ್ನು ಹಿರಿಯ ಮಗನಿಗೇ ಕೊಡುವ ಸಂಪ್ರದಾಯವು ಇನ್ನಷ್ಟು ಗಟ್ಟಿಯಾಯಿತು. ಭಾರತೀಯ ರಾಜಪ್ರಭುತ್ವದ ಸಂಪ್ರದಾಯದಲ್ಲಿ ಅರಸಿಯ ಹೊಟ್ಟೆಯಲ್ಲಿ ಹುಟ್ಟಿದ ಮೊದಲ ಮಗನಿಗೇ ಪಟ್ಟದ ಅಧಿಕಾರವು ಹೋಗುವ ಮಾದರಿಯು ಇಲ್ಲಿಯೂ ಮುಂದುವರೆಯಿತು. ಇದು ಖಾಸಗಿ ಆಸ್ತಿಯನ್ನು ದಾಟಿಸುವ ಭಾಗವಾಯಿತು.

ಭಾರತದ ಸೂಫಿಗಳನ್ನು ಕುರಿತು ಅಪೂರ್ವವಾದ ಎರಡು ಸಂಪುಟಗಳನ್ನು ಪ್ರಕಟಿಸಿರುವ ವಿದ್ವಾಂಸ ಸೈಯದ್ ಸತ್ತಾರ್ ಅಬ್ಬಾಸ್ ರಿಜ್ವಿಯವರು ತಮ್ಮ ಸಂಪುಟಗಳ ಕೊನೆಯಲ್ಲಿ ಮಹಿಳಾ ಸೂಫಿಗಳ ಮೇಲೆ ಚಿಕ್ಕ ಅನುಬಂಧಗಳನ್ನು ಕೊಟ್ಟಿದ್ದಾರೆ. ಅವರ ಪ್ರಕಾರ ಭಾರತದಲ್ಲಿ 16ನೇ ಶತಮಾನದ ನಂತರ ದೊಡ್ಡಮಟ್ಟದಲ್ಲಿ ಬೆಳೆದ ಮಹಿಳಾ ಸೂಫಿಗಳೇ ಇಲ್ಲ. ಆದರೂ ಭಾರತದ ಅನೇಕ ದೊಡ್ಡ ಸೂಫಿಗಳನ್ನು ಬೆಳೆಸುವಲ್ಲಿ ಅನೇಕ ಯೋಗಿನಿಯರು ಕಾರಣರಾಗಿದ್ದಾರೆ. ಕಾಶ್ಮೀರದ ಸೂಫಿ ನಂದಋಷಿ ಅರ್ಥಾತ್ ನೂರುದ್ದೀನನಿಗೆ ಗುರುವಾಗಿದ್ದವಳು ಶೈವಯೋಗಿನಿ ಲಲ್ಲಾದೇವಿ. ಕೆಲವು ಸೂಫಿಗಳ ಬಾಳಿನಲ್ಲಿ ಅವರ ತಾಯಂದಿರು ದೊಡ್ಡ ಪಾತ್ರ ವಹಿಸಿರುವುದರ ಬಗ್ಗೆ ಹಲವಾರು ಉಲ್ಲೇಖಗಳಿವೆ. ಇದಕ್ಕೆ ಸಂಬಂಧಪಟ್ಟಂತೆ, ದೆಹಲಿಯ ಶೇಕ್ ನಿಜಾಮುದ್ದೀನ್ ಅಬ್ದುಲ್ ಮೊಯಿದ್ ಎಂಬ ಸೂಫಿಯ ಜೀವನದಲ್ಲಿ ಬರುವ ಪ್ರಸಂಗವೊಂದು ಸ್ವಾರಸ್ಯಕರವಾಗಿದೆ. ಒಮ್ಮೆ ದೆಹಲಿಗೆ ಬರಗಾಲ ಬಿದ್ದಾಗ ಜನರು ಬಂದು ಇದಕ್ಕೆ ಏನಾದರೂ ಪರಿಹಾರ ಮಾಡಬೇಕೆಂದು ಸಂತನನ್ನು ಬೇಡಿದರಂತೆ. ಸಂತನು ತನ್ನ ತಾಯಿಯಾದ ಬೀಬಿಸಾರಾಳ ಹರಿದ ಉಡುಪಿನಿಂದ ಒಂದು ನೂಲೆಳೆಯನ್ನು ತೆಗೆದು ಪ್ರಾರ್ಥನೆ ಮಾಡಲು ಶುರುಮಾಡಿದನಂತೆ. ಮಳೆ ಧೋಧೋ ಎಂದು ಸುರಿಯಲಾರಂಭಿಸುತ್ತದೆಯಂತೆ.

ದೆಹಲಿಯ ಹಳೇ ಇಂದ್ರಪ್ರಸ್ಥದಲ್ಲಿ ಬೀಬೀ ಫಾತಿಮಾಳ ಸಮಾಧಿಯಿದೆ. ಆಕೆ ಹಸಿದವರಿಗೆ ಅನ್ನವನ್ನು, ನೀರಡಿಸಿದವರಿಗೆ ನೀರನ್ನು ಕೊಡುತ್ತ ಬದುಕಿದವಳು. ಭಾರತದ ದೊಡ್ಡ ಸಂತರಲ್ಲಿ ಒಬ್ಬನಾದ ಬಾಬಾ ಫರೀದನು ದೆಹಲಿಯ ಬೀಬಿ ಫಾತಿಮಾಳನ್ನು ತನ್ನ ಸೋದರಿಯೆಂದು ಗೌರವಿಸುತ್ತಿದ್ದನು. ದೆಹಲಿಯ ನಿಜಾಮುದ್ದೀನ್ ಔಲಿಯಾ ಆಕೆಯ ಸಮಾಧಿಗೆ ಹೋಗಿ ಗೌರವ ಸಲ್ಲಿಸುತ್ತಿದ್ದನು. ದೆಹಲಿಯ ಮತ್ತೊಬ್ಬ ಪ್ರಸಿದ್ಧ ಸೂಫಿ ಸಂತ ಶೇಕ್ ನಾಸಿರುದ್ದೀನ್ ಚಿಸ್ತಿಯ ಕಾಲದಲ್ಲಿ ಕೂಡ ಮತ್ತೊಬ್ಬ ಬೀಬಿ ಫಾತಿಮಾ ಎಂಬ ಸೂಫಿಯಿದ್ದಳು. ಮೂಲತಃ ಮನೆಸೇವಕಿಯ ಕೆಲಸ ಮಾಡುತ್ತಿದ್ದ ಫಾತಿಮಾ ದೊಡ್ಡ ಸಂತಳಾಗಿ ಬೆಳೆದವಳು. ಮಹಮದ್ ಬಿನ್ ತೊಘಲಕನ ಕಾಲದಲ್ಲಿ ಬೀಬಿ ಔಲಿಯಾ ಎಂಬ ಸಂತಳು ದೆಹಲಿಯಲ್ಲಿ ಇದ್ದಳೆಂದು ತಿಳಿದುಬರುತ್ತದೆ. ಲಾಹೋರಿನ ಮಿಯ್ಞಾಮೀರ್ ಎಂಬ ದೊಡ್ಡ ಸೂಫಿಯೊಬ್ಬನ ಸೋದರಿಯಾಗಿದ್ದ ಬೀಬೀ ಜಮಾಲ್ ಖಾತೂನ್ (1647) ತನ್ನ ಕಾಲದ ರಾಬಿಯಾ ಬಸ್ರಿ ಎಂದು ಖ್ಯಾತಳಾಗಿದ್ದವಳು. ಇವಳ ಬಗ್ಗೆ ಸೂಫಿ ಅನುಭಾವದಲ್ಲಿ ಬಹಳ ಪ್ರವೇಶವಿದ್ದ ಮೊಗಲ್ ರಾಜಕುಮಾರ ದಾರಾಶುಕು ಬರೆಯುತ್ತಾನೆ. ಬೀಬಿಜಮಾಲ್ ಖಾತೂನ್ ತನ್ನ ಆಧ್ಯಾತ್ಮಿಕ ಸಾಧನೆಗಳಿಂದ ಹೆಸರಾಗಿದ್ದಳು. ಮೊಗಲ್ ಚಕ್ರವರ್ತಿ ಶಹಾಜಹಾನನ ಮಗಳು, ದಾರಾಶುಕುವಿನ ಸೋದರಿ ಜಹನಾರಾ ಬೇಗಂ (1614–1681) ಕೂಡ ದೊಡ್ಡ ಸೂಫಿಯಾಗಿದ್ದಳು. ಅವಳು ತನ್ನ ಪ್ರಿಯ ಸೂಫಿಗಳ ಚರಿತ್ರೆಯನ್ನು ಬರೆದಳು.

ಕರ್ನಾಟಕದಲ್ಲಿ ಯೋಗಿನಿಯರ ಪರಂಪರೆಯು ದಟ್ಟವಾಗಿದೆ. ಶಿವಶರಣ ಪರಂಪರೆಯಲ್ಲಿ ಅಕ್ಕಮಹಾದೇವಿ, ಲಕ್ಕಮ್ಮ, ಮುಕ್ತಾಯಕ್ಕ ಮುಂತಾದವರಿಂದ ಇದು ಆರಂಭವಾಗುತ್ತದೆ. ಕರ್ನಾಟಕದ ಅವಧೂತ ಪಂಥದಲ್ಲಿ ಅನೇಕ ಯೋಗಿನಿಯರು ಕಾಣಬರುತ್ತಾರೆ. ಆದರೂ ವಿರಕ್ತ ಪ್ರಧಾನ ಪರಂಪರೆಯಾದ ಅಲ್ಲಿ ಕೂಡ ವಿಚಿತ್ರವಾದ ಸ್ತ್ರೀವಿರೋಧಿ ನಿಲುವು ಕಾಣಬರುತ್ತದೆ. ಅಕ್ಕಮಹಾದೇವಿ, ಮುಕ್ತಾಯಕ್ಕ, ಮುಂತಾದ 12ನೇ ಶತಮಾನದ ಶರಣೆಯರ ಬಳಿಕ ದೊಡ್ಡ ಯೋಗಿನಿಯರೇ ಕಾಣುವುದಿಲ್ಲ. ಇಟಗಿಯ ಭೀಮಾಂಬಿಕೆ, ಹರಪನಹಳ್ಳಿ ಭೀಮವ್ವ, ಬಾಗೂರಿನ ಕಲ್ಯಾಣಮ್ಮ, ಮಾಣಿಕ್ಯನಗರಿಯ ಮಾಣಿಕೇಶ್ವರಿ, ಸಜ್ಜಲಗುಡ್ಡದ ಶರಣಮ್ಮ ಹೀಗೆ ಅನೇಕರನ್ನು ಪಟ್ಟಿಮಾಡಬಹುದು.

ಇನ್ನು ಕರ್ನಾಟಕದಲ್ಲಿ ಅನೇಕ ಮಹಿಳಾ ಸೂಫಿಗಳ ಹೆಸರುಗಳು ಕಾಣಸಿಗುತ್ತವೆ. ಮಧ್ಯಕಾಲೀನ ಕರ್ನಾಟಕದಲ್ಲಿ ಅನೇಕ ಯೋಗಿನಿಯರ ಪ್ರಸ್ತಾಪವಿದೆ. ಅದರಲ್ಲಿ ಮಹಿಳಾ ಸೂಫಿಗಳ ಹೆಸರುಗಳೂ ಇವೆ. ಮಹಮದ್ ಇಬ್ರಾಹಿಂ ಎಂಬುವನು ರಚಿಸಿದ 'ರವುಜತುಲ್ ಔಲಿಯಾ ಬಿಜಾಪುರ್' ಕೃತಿಯಲ್ಲಿ ಇಂತಹ ಅನೇಕ ಮಹಿಳಾ ಸೂಫಿಗಳ ಹೆಸರುಗಳಿವೆ. ಉದಾ.ಗೆ ಬೀಬಿ ಖಾವಂದಮಾ. ಈಕೆ ಬಹಮನಿ ಕಾಲದ ಖ್ಯಾತ ಸೂಫಿ ಶೇಕ್ ಐನುದ್ದೀನ್ ಗಂಜ್‌ಎ ಇಲಂನ ಪುತ್ರಿ. ಬಿಜಾಪುರದ ಸೂಫಿ ಪ್ರಭಾವಿತ ದೊರೆಯಾಗಿದ್ದ ಎರಡನೇ ಇಬ್ರಾಹಿಂ ಕಾಲದಲ್ಲಿ ಬೀಬಿ ನಯೀಂ ಎಂಬ ಸೂಫಿ ಪ್ರಸಿದ್ಧಳಾಗಿದ್ದಳು. ಬೀಬಿ ಶಂಸಾ, ಬೀಬಿ ಸತೀಮಾ ಸಾಹೇಬಾ, ಪಾಂಚ್‌ಬೀ ಬಾಯಾ ಇವರಲ್ಲಿ ಪಾಂಚ್‌ಬೀ ಬಾಯಾ ಆದಿಲಶಾಹಿ ಸುಲ್ತಾನರಿಗೆ ರಾಜಗುರು ಎನಿಸಿದ್ದ ಸೂಫಿ ಚಂದಾಹುಸೇನಿಯ ಸೋದರಿ. ಈಕೆ ರಾಯಚೂರಿನ ಬೆಟ್ಟದ ಮೇಲೆ ವಾಸಿಸುತ್ತಿದ್ದಳು. ಈ ಬಗ್ಗೆ ಸ್ವಾರಸ್ಯಕರ ಮಾಹಿತಿಗಳನ್ನು ಕರ್ನಾಟಕದ ಯೋಗಿನಿಯರನ್ನು ಕುರಿತ ತಮ್ಮದೊಂದು ಲೇಖನದಲ್ಲಿ ನಿಗಂ ಅವರು ಮಂಡಿಸುತ್ತಾರೆ. ಈ ವಿವರಗಳನ್ನು ಕಂಡರೆ ಹೆಚ್ಚಿನ ಮಹಿಳಾ ಸೂಫಿಗಳು ಸಾಮಾನ್ಯವಾಗಿ ಗಣ್ಯ ಮನೆತನಗಳಿಂದ ಇಲ್ಲವೇ ಸೂಫಿ ಹಿನ್ನೆಲೆಯಿಂದ ಬಂದವರಾಗಿರುತ್ತಿದ್ದರು. ಅವರು ಊರಹೊರಗೆ ಸೂಫಿ ಖಾನಖಾ (ಮಠ)ಗಳಲ್ಲಿ ವಾಸಿಸುತ್ತಿದ್ದರು. ಇವರಿಗೆ ಎಲ್ಲ ಧರ್ಮದ ಜನರೂ ಗೌರವಿಸುತ್ತಿದ್ದರು. ಹಿಂದೂಗಳು ಇವರಿಗೆ ಸತಿ ಮಾ ಎಂದು ಕರೆಯುತ್ತಿದ್ದರು.

ಮಹಿಳಾ ಸೂಫಿಗಳ ಅನೇಕ ದರ್ಗಾಗಳು ಕರ್ನಾಕಟದಲ್ಲಿ ಇವೆ. ಅವೆಂದರೆ: ಅಮ್ಮಾಜಾನ್–ಮುರುಗಮಲೈ (ಕೋಲಾರ), ಜಮಾಲಬಿ–ಹೊಡಂಗಿ (ಅರಕಲಗೂಡು), ಜರೀನಾಬಿ–ಕಡೂರು, ಪಾಂಚಬೀಬಿ–ಮಾದನಹಿಪ್ಪರಗಿ (ಆಳಂದ), ಮಸ್ತಾನಿ ಮಾ–ಬಾಗೂರು (ಹೊಸದುರ್ಗ), ಮಾ ಸಾಹೇಬ–ಕುಚಚಿ (ರಾಯಬಾಗ), ಸೈದಾನಿ ಅಮ್ಮ–ಬಂಕಾಪುರ (ಸವಣೂರು) ಸೈದಾನಿ ಬೀಬಿ–ಮಂಗಳೂರು ಮತ್ತು



ಲಲ್ಲೇಶ್ವರಿ

ಬೆಂಗಳೂರು. ಈ ಸಮಾಧಿಗಳು ಆರಾಧನೆಗೆ ಒಳಗಾಗಿವೆ. ಇವರ ಉರುಸುಗಳು ನಡೆಯುತ್ತವೆ, ನಿಜ. ಆದರೆ ಇವರು ತಮ್ಮ ಜೀವಿತ ಕಾಲದಲ್ಲಿ ಸಂತರಾಗಿ ಕವಿಗಳಾಗಿ ಅನುಭಾವಿಗಳಾಗಿ ಯಾವ ಸಾಧನೆ ಮಾಡಿದರು ಎಂಬ ಬಗ್ಗೆ ಯಾವುದೇ ಮಾಹಿತಿ ಸಿಗುವುದಿಲ್ಲ. ಮಂಗಳೂರು ಮತ್ತು ಬೆಂಗಳೂರುಗಳಲ್ಲಿ ಇರುವ ಸೈದಾನಿ ಬೀಬಿ–ಈ ಹೆಸರುಗಳನ್ನು ನೋಡಿದರೆ, ಅನಾಮಧೇಯರಾಗಿದ್ದ ಇವರಿಗೆ ಸಂತರ ಜನರು ಕೊಟ್ಟಿರುವ ಹೆಸರುಗಳಿವು ಎಂದು ಅನಿಸುತ್ತದೆ.

ಕರ್ನಾಟಕದ ಸೂಫಿಪಂಥದಲ್ಲಿ ಮಹಿಳೆಯರು ಪುರುಷ ಸಂತರಿಗೆ ಸಮಾನ ಸಂಗಾತಿಯಾಗಿ ಸಾಧನೆ ಮಾಡಿರುವ ನಿದರ್ಶನಗಳು ಸಿಗದೆ ಹೋದರೂ, ಅವರಿಗೆ ಸೇವಕಿಯರಾಗಿ ಶಿಷ್ಯೆಯರಾಗಿ ತಾಯಿಯರಾಗಿ ಇದ್ದುಕೊಂಡು ಪ್ರಮುಖ ಪಾತ್ರ ವಹಿಸಿರುವ ನಿದರ್ಶನಗಳೂ ಸಿಗುತ್ತವೆ. ಬಾಬಾಬುಡನಗಿರಿಯಲ್ಲಿ ದಾದಾಹಯಾತ ಮೀರ ಖಲಂದರ್ ಸೂಫಿಗೆ ಶಿಷ್ಯೆಯಾಗಿ ಮಾಮಾಜಿಗನಿ ಎಂಬ ಯೋಗಿನಿ ಇದ್ದ ಬಗ್ಗೆ ತಿಳಿಯುತ್ತದೆ. ಜಿಗನಿ ಎನ್ನುವುದು ಜೋಗಿನಿಯ ಸವೆರೂಪ. ಮಾಮಾಜಿಗನಿ ತಪಸ್ಸು ಮಾಡುತ್ತಿದ್ದ ಜಾಗವನ್ನು ಅಲ್ಲಿ ಈಗಲೂ ತೋರುತ್ತಾರೆ. ಮುಂದೆ ಅವರು ತಿರುಚನಾಪಲ್ಲಿಗೆ ಹೋಗಿ ನೆಲೆಸಿದ ಬಗ್ಗೆ ಹೇಳಲಾಗುತ್ತದೆ. ಅಲ್ಲಿ ಮಾಮಾ ಜಿಗನಿಯ ಸಮಾಧಿಯಿದೆ. ಬೀಳಗಿಯ ಡೋಂಗ್ರಿಸಾಬ್ ಎಂಬ ಸೂಫಿಗೆ ಕ್ಷತ್ರಿಯ ಕುಲದ ಒಬ್ಬ ಶಿಷ್ಯೆ ಇದ್ದರು. ಡೋಂಗ್ರಿ ಸಾಬನ ದರ್ಗಾದ ಪಕ್ಕದಲ್ಲಿಯೇ ಈಕೆಯ ಸಮಾಧಿಯಿದೆ. ಆದರೆ ಮುಖ್ಯ ಸೂಫಿಗೆ ಜನ ನಡೆದುಕೊಳ್ಳುವಂತೆ ಈ ಶಿಷ್ಯೆಯರಿಗೆ ನಡೆದುಕೊಳ್ಳುವುದಿಲ್ಲ.

ರಿಜ್ವಿಯವರ ಪ್ರಕಾರ, ಪುರುಷಪ್ರಧಾನ ಸಮಾಜದ ಮನೋಧರ್ಮವೇ ಮಹಿಳೆಯರಲ್ಲಿ ಸೂಫಿಗಳು ಕಡಿಮೆಯಿರಲು ಮುಖ್ಯ ಕಾರಣ. ಇದು ಸೂಫಿಗಳಿಗೆ ಮಾತ್ರವಲ್ಲ, ಭಾರತದ ಎಲ್ಲ ಅನುಭಾವಿ ಚಳವಳಿಗಳಿಗೂ ಕೆಲಮಟ್ಟಿಗೆ ಅನ್ವಯವಾಗುತ್ತದೆ. ಬಸವಣ್ಣನಂತಹ ಬಸವಣ್ಣನೇ "ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ, ಕೂಟಕ್ಕೆ ಸತಿಯಾಗಿ ಕೂಡಿದಳು ಮಾಯೆ, ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ, ಇದ್ಯಾವ್ಯಾವ ಪರಿಯಲ್ಲಿ ಕಾಡಿತ್ತು ಮಾಯೆ ಕೂಡಲಸಂಗಮದೇವಾ" ಎಂದು ಹೇಳುವುದನ್ನು ಗಮನಿಸಬೇಕು. ಸೂಫಿಪಂಥದ ಚರಿತ್ರೆಯಲ್ಲಿ ಯಾವ ಸೂಫಿಯೂ ಮಹಿಳೆಯರನ್ನು ತನ್ನ ಆನುಭಾವಿಕ ಉತ್ತರಾಧಿಕಾರಿಯಾಗಿ ಸ್ವೀಕರಿಸಿ ತನ್ನ ಶಿಷ್ಯಪರಂಪರೆಯಲ್ಲಿ ಜಾಗ ಕೊಟ್ಟಿರುವಂತೆ ತೋರುವುದಿಲ್ಲ. ಖಾದ್ರಿಯಾ ಚಿಸ್ತಿಯಾ ಮುಂತಾಗಿ ಬೇರೆಬೇರೆ ಸೂಫಿ ಪರಂಪರೆಗಳು (ಸಿಲ್‌ಸಿಲಾ) ಇದ್ದು ಅವೆಲ್ಲವೂ ಪುರುಷ ಸೂಫಿಗಳ ಹೆಸರಲ್ಲಿವೆ. ಒಂದೂ ಮಹಿಳಾ ಸೂಫಿಯ ಹೆಸರಲ್ಲಿಲ್ಲ. ರಾಬಿಯಾಳಂತಹ ದೊಡ್ಡ ಸೂಫಿಸಾಧಕಳ ವಿಷಯ ಬಂದಾಗ. ಕೆಲವರು 'ಹೌದು. ಆದರೆ ಮಹಿಳೆಯರಲ್ಲಿ ಯಾರೂ ಪ್ರವಾದಿಗಳಾಗಲಿಲ್ಲವಲ್ಲ' ಎಂದು ಹೇಳುತ್ತಿದ್ದರಂತೆ. ಆಧ್ಯಾತ್ಮಿಕ ಸಾಧನೆಯಲ್ಲಿ ಮಹಿಳೆಯರಿಗೆ ಪುರುಷರಿಗೆ ಸರಿಸಮನಾದ ಸ್ಥಾನವಿರದ ಕಾರಣದಿಂದಲೇ ಅವರು ದೊಡ್ಡದಾಗಿ ಬೆಳೆಯಲು ಆಗಲಿಲ್ಲ. ಅವರನ್ನು ಸಮಾಜವು ಮನೆವಾರ್ತೆಗಳಿಗೆ ಸೀಮಿತಗೊಳಿಸಿಬಿಟ್ಟಿತು. ಜತೆಗೆ ಗರ್ಭಧರಿಸುವ, ಮಕ್ಕಳನ್ನು ಹೆರುವ, ಅವಕ್ಕೆ ಹಾಲೂಡುವ ಮಹಿಳೆಯ ಜೈವಿಕಸ್ಥಿತಿಯೂ ಅವಳನ್ನು ಜ್ಞಾನಕ್ಕಾಗಿ ಮಾಡುವ ಮಹಾ ದೇಶಾಂತರದ ತಿರುಗಾಟಗಳಿಗೆ ತಡೆಯಾದಂತೆ ತೋರುತ್ತದೆ. ಆದ್ದರಿಂದಲೊ ಏನೊ ಭಾರತದ ಬಹುತೇಕ ಯೋಗಿನಿಯರು ಸಂಸಾರವನ್ನೇ ಕಟ್ಟಿಕೊಳ್ಳಲಿಲ್ಲ ಅಥವಾ ಇದ್ದ ಸಂಸಾರವನ್ನು ಬಿಟ್ಟು ಬಂದರು. ಅಕ್ಕಮಹಾದೇವಿ, ಮೀರಾ, ಹರಪನಹಳ್ಳಿ ಭೀಮವ್ವ, ಬಾಗೂರಿನ ಕಲ್ಯಾಣಮ್ಮ ಎಲ್ಲರ ವಿಷಯದಲ್ಲಿಯೂ ಇದು ನಿಜ. ಹಾಗಾದರೆ ಲೌಕಿಕ ಸಂಸಾರವನ್ನು ಕೆಡಿಸಿಕೊಳ್ಳದೆ ಮಹಿಳೆಯರು ಯೋಗಿನಿಯರು ಆಗುವುದಕ್ಕೆ ದೊಡ್ಡ ಸಾಧನೆ ಮಾಡುವುದಕ್ಕೆ ಸಾಧ್ಯವೇ ಇಲ್ಲವೇ? ನೂರಾರು ಸಾಮಾಜಿಕ ಧಾರ್ಮಿಕ ಪ್ರತಿಬಂಧಗಳಿದ್ದರೂ ಭಾರತದಲ್ಲಿ ಅನೇಕ ಮಹಿಳೆಯರು ದೊಡ್ಡ ಸಾಧನೆಯನ್ನು ಮಾಡಿದರು ಎಂದು ರಿಜ್ವಿಯವರು ಅರೆಸಮಾಧಾನದಲ್ಲಿ ಹೇಳುತ್ತಾರೆ. ಆದರೆ ಈ ಪ್ರತಿಬಂಧಗಳು ಯಾಕೆ ಮಹಿಳೆಯರಿಗಿದ್ದವು ಮತ್ತು ಈಗಲೂ ಇವೆ ಎಂಬುದು ಮಾತ್ರ ಕಾಡುವ ಪ್ರಶ್ನೆಯಾಗಿಯೇ ಉಳಿಯುತ್ತದೆ.

❑

---

**ಟಿಪ್ಪಣಿಗಳು**


1. ಎಂ.ಎಲ್. ನಿಗಂ, ದಿ ಯೋಗಿನ್ಸ್ ಆಫ್ ದಖನಿ ಮಿನಿಯೇಚರ್ಸ್, ಲಲಿತಕಲಾ–23, ಸಂ. ಕಾರ್ಲ್ ಖಂಡೇಲವಾಲಾ, ಬಾಂಬೆ, 1988
2. ಎಸ್‌ಎಸ್ ಎ ರಿಜ್ವಿ, 'ಫೀಮೇಲ್ ಸೂಫೀಸ್', ಎ ಹಿಸ್ಟರಿ ಆಫ್ ಸೂಫಿಸಂ ಇನ್ ಇಂಡಿಯಾ–1, ಮುನಶಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನ್ಯೂಡೆಲ್ಲಿ, 1978
3. ಎಸ್‌ಎಸ್ ಎ ರಿಜ್ವಿ, 'ಫೀಮೇಲ್ ಸೂಫೀಸ್', ಎ ಹಿಸ್ಟರಿ ಆಫ್ ಸೂಫಿಸಂ ಇನ್ ಇಂಡಿಯಾ–2, ಮುನಶಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನ್ಯೂಡೆಲ್ಲಿ, 1983
3. ಕಲ್ಯಾಣಮ್ಮ, ಬೆಳಗೆರೆ ಕೃಷ್ಣಶಾಸ್ತ್ರೀ, ಮರೆಯಲಾದೀತೇ? ಅಭಿನವ ಪ್ರಕಾಶನ, ಬೆಂಗಳೂರು, 2005

# ಒಂದು ದಿನದ ಕಥೆ

**ಜಾ**ರಿ ಹೋಯಿತು ಆ ಒಂದು ದಿನ
ಹರಿವ ನೀರಲ್ಲಿ ಸರಿದು ಹೋದ ಕೂದಲೆಳೆಯಂತೆ

ಕಾರಣವಿಲ್ಲದೆ ಹೊರಬರುವ ನೆನಪುಗಳು
ಇಣುಕಿಣುಕಿ ಮರೆಯಾಗುತ್ತವೆ ಎಲ್ಲೂ ದಾಖಲಾಗದಂತೆ.

ಒಂದು ಮುಖ, ಒಂದು ನಗು, ಒಂದು ಕಲಕುವ ನೋಟ
ಕದಡುತ್ತದೆ ಏಕಾಂಗಿ ಮನವನ್ನು ಅಶಾಂತವಾಗಿಸುತ್ತದೆ.

ಒಂದನ್ನೊಂದು ಹಿಂಬಾಲಿಸುವ ಸೊನ್ನೆಯ ಚಲನೆಗೂ ಒಂದು ಗುರಿಯಿದೆ
ಗೆರೆಯ ಕೆಳಗೆ ಗೆರೆ ತ್ರಿಕೋನದ ಹೊಟ್ಟೆಯಲ್ಲೊಂದು ತ್ರಿಕೋನ
ನೆರಳೊಳಗೊಂದು ನೆರಳು, ನೆರಳೊಳಗೊಂದು ಅಸ್ಪಷ್ಟ ಚಹರೆ
ಹೇನುಗಳಂತೆ ಹರಿದಾಡುತ್ತಾರೆ ಅವರು ನಗರದ ದಟ್ಟ ಬೈತಲೆಯಲ್ಲಿ
ಹೆಗಲಿಗೆ ಹೆಗಲು ಸವರುತ್ತಾರೆ ಆಕಸ್ಮಿಕವೆಂಬಂತೆ
ಕಾರಣವಿಲ್ಲದೆ ಕಂಡವರ ಕಣ್ಣಲ್ಲಿ ಕಣ್ಣಿಟ್ಟು ಕೆದಕುತ್ತಾರೆ
ಎಲ್ಲ ಕಣ್ಗಳ ಹಿಂದೆ ಕಾರಣವಿಲ್ಲದೆ ಕೆಣಕುವ ನೋಟವಿದೆ
ಹಾಗೆಯೇ ಅನಾಥ ಪಕ್ಷಿಯೊಂದರ ಕಲರವವಿದೆ
ಎದೆನೋವಿನಿಂದ ನರಳುವ ಮುನ್ನಾಬಾಯಿಗೆ
ಉಸಿರುಕಟ್ಟಿದೆ ತಿಹಾರ್ ಜೈಲೆಂಬ ಜೈಲಲ್ಲಿ

ನಟ್ಟನಡು ಮಧ್ಯಾಹ್ನ ಮುಚ್ಚಿದ ಬಾಗಿಲುಗಳಿಂದ
ಒಂದು ನೆರಳು ಹೊರಬೀಳುತ್ತದೆ
ಹಿಂದೆ ಬಹುಹಿಂದೆ ತಾನು ಬಿಟ್ಟುಬಂದ
ವಾಸನೆಯನ್ನು ಅದು ಹುಡುಕಿಹೊರಡುತ್ತದೆ

ಈಗ ತಾನೆ ಕೊಯ್ದು ತಂದಂತಿದೆ ತರಕಾರಿ
ಗಾಡಿಯವನ ಎಳೆಸಿಳ್ಳು ವ್ಯಾಪಿಸುತ್ತಿದೆ ಓಣಿಯುದ್ದಕ್ಕೂ

ಬಾಗಿಲ ಒಳಗೆ ಸೋತ ಅಜ್ಜಿಯರು
ಮೊಮ್ಮಕ್ಕಳಿಂದ ತಪ್ಪಿಸಿ ಮಲಗಲು ಹವಣಿಸುತ್ತಾರೆ
ಟಿವಿಯಲ್ಲಿ ಎಂದಿನಂತೆ ಅದೇ ಸುದ್ದಿಗಳು
ವಿಕೃತಕಾಮಿಯೊಬ್ಬನಿಂದ ತನ್ನ ಪರಾಕ್ರಮದ ವರ್ಣನೆ
ಸದನದಲ್ಲಿ ಸೊಗಸಾಗಿ ನಿದ್ರಿಸುವ ರಾಜಕಾರಣಿ
ಮತ್ತೆ ಮತ್ತೆ ಕೊಳವೆ ಬಾವಿಯಲ್ಲಿ ಬೀಳುವ ಮಕ್ಕಳು
ರೈತರ ಹೆಣದ ಮುಂದೆ ಅಳುವ ಹೆಂಡತಿಯರು
ನಡುವೆ ಸರಕಾರ ಉಳಿಯುವುದೇ ಒಂದು ಸಮೀಕ್ಷೆ

ಕಳೆದು ಹೋಗುವ ಈ ಒಂದು ದಿನದಲ್ಲಿ
ಸದ್ದಿಲ್ಲದಂತೆ ದೂರಾಗುತ್ತಾರೆ ತಂದೆ ಮಕ್ಕಳು
ಸಂಬಂಧಗಳು ರಾರಾಜಿಸುತ್ತವೆ ಮೆಗಾಸೀರಿಯಲ್ಲಲ್ಲಿ
ಗಟ್ಟಿಯಾಗುತ್ತವೆ ಬಂಧನಗಳು ಫಾದರ್ಸ್‌ಡೇ
ಮದರ್ಸ್‌ಡೇಗಳ ಹೊಸಸರಪಳಿಗಳಲ್ಲಿ
ಪ್ರೀತಿ ಕುಡಿಯೊಡೆಯುತ್ತದೆ ಮಲ್ಲಿಗೆ
ಹಂಬಿನಂತೆ ಮೊಬೈಲ್ ಸಂದೇಶಗಳಲ್ಲಿ

ಹಳೆಕೊಂಡಿ ಕಳಚುತ್ತಾ, ಹೊಸಕೊಂಡಿ ಬೆಸೆಯುತ್ತಾ
ಸರಿದು ಹೋಗುತ್ತಿವೆ ಪುಟಗಳು ಭಾರದಲ್ಲಿ
ಸದ್ದಿಲ್ಲದೇ ನುಸುಳಬಿಟ್ಟಿದೆ ಹೊಸತೊಂದು ದಿನ
ಮತ್ತದೇ ಮಂದಹಾಸದ ಭಾರಹೊತ್ತು

● *ಡಾ॥ ಎಚ್.ಎಲ್. ಪುಷ್ಪ*



## Form IV (See Rule 8)

Statement about ownership and other particular about News Paper

***"Namma Manasa"***

As required to be published under section 19 of the press and Registration Book act read with the Rule 10 of the Press and Registration of News Papers(Central) 1956.

| | | | |
|---|---|---|---|
| 1) | Name of the Publication | : | Namma Manasa |
| 2) | Place of the Publication | : | Bangalore, Karnataka |
| 3) | Periodicity of Publication | : | Monthly |
| 4) | Language | : | Kannada |
| 5) | Name of the Editor | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 6) | Name of the Publisher & owner | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 7) | Name of the Printer | : | ILA Mudrana |
| | Address | : | No. 36, 40 Ft. Road, Raghavanagar<br>New Timberyard Layout, Bangalore - 560 026 |
| | Nationality | : | Indian |
| 8) | Registration No. | : | KARKAN/2007/22289 |

I, H.S. Rajeshwari here by declare that the particulars given above are true to the best of my knowledge and belief.

Sd/-

**H.S. Rajeshwari**

Publisher



## ಪ್ರಾಯೋಜಕರು

- ಶ್ರೀಮತಿ ಕಮಲಾ ಕೃಷ್ಣ, ಕೆನರಾ ಬ್ಯಾಂಕ್
- ಶ್ರೀಮತಿ ಪುಷ್ಪಾ ಮಂಜುನಾಥ್, ಕೆನರಾ ಬ್ಯಾಂಕ್
- ಶ್ರೀ ಟಿ.ಎಸ್. ಪ್ರಭಾಕರ್, ಕೆನರಾ ಬ್ಯಾಂಕ್
- ಶ್ರೀಮತಿ ಎಚ್.ಎಸ್. ಶಾರದಾಂಬಾ, ಕೆನರಾ ಬ್ಯಾಂಕ್
- ಶ್ರೀ ಚಂದ್ರಶೇಖರ್, ಡೆಕ್ಕನ್ ಕ್ರಾನಿಕಲ್
- ಶ್ರೀ ಮಹೇಶ್, ಮಿಡ್ ಡೇ
- ಶ್ರೀ ವೆಂಕಟೇಶ್ ಎಚ್., ಮಿಡ್ ಡೇ



# ಕರ್ನಾಟಕ

ಕರುನಾಡ ಸಿರಿನುಡಿ - ಕನ್ನಡ

ಕಸ್ತೂರಿ ಪರಿಮಳದ ಕುಡಿ - ಕನ್ನಡ ನುಡಿ

ಹಾಲ್ಜೇನಿನ ಮಧುರ ಝುರಿ - ಕನ್ನಡ ನಾಣ್ಣುಡಿ













ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ.

ಮಾದರಿ ಆಡಳಿತದ ಮಾರ್ಗದರ್ಶಿ ರಾಜ್ಯ ಕರ್ನಾಟಕ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ತವರೂರು.

ಕರ್ನಾಟಕದ ರಾಜಧಾನಿ ಬೆಂಗಳೂರು ವಿಶ್ವವಿಖ್ಯಾತಿಯ ನಗರ.

ಇಂತಹ ಭವ್ಯ ಪರಂಪರೆಯ ಮತ್ತು ಸಮೃದ್ಧಿಯ ನಾಡು, ಕನ್ನಡಿಗರ ಹೆಮ್ಮೆಯ ಬೀಡು.



ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09




# ಕೆ.ಪಿ.ಸಿ.ಎಲ್. : ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ಕರ್ನಾಟಕದಲ್ಲಿ ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವ ಸಲುವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ(ಕವಿನಿನಿ)ವು ನೂತನ ಉಪಕ್ರಮಗಳಿಗೆ ಚಾಲನೆ ನೀಡಿ ಈ ದಿಸೆಯಲ್ಲಿ ಸತತ ಮುಂಚೂಣಿ ಪಾತ್ರವಹಿಸಿರುವ ನಿಗಮ 5739 ಮೆಗಾವಾಟ್ (ಮೆ.ವಾ.) ಸ್ಥಾಪಿತ ಸಾಮರ್ಥ್ಯ ಹೊಂದಿದೆ ಮತ್ತು ರಾಜ್ಯದ ವಿದ್ಯುತ್ ಜಾಲದಲ್ಲಿರುವ ಪ್ರತಿಶತ 63ರಷ್ಟು ಪಾಲು ನಿಗಮದ್ದಾಗಿದೆ. ಪ್ರಸ್ತುತ ನಿಗಮ 34 ಅಣೆಕಟ್ಟುಗಳನ್ನು ಮತ್ತು 0.35 ಮೆ.ವಾ.ನಿಂದ 1470 ಮೆ.ವಾ.ವರೆಗೆ ವಿವಿಧ ಗಾತ್ರದ ಘಟಕಗಳನ್ನು ಹೊಂದಿರುವ 25 ವಿದ್ಯುದಾಗಾರಗಳನ್ನು ಹೊಂದಿದ್ದು ಇವುಗಳು ಕಾರ್ಯಾಚರಣೆಯಲ್ಲಿವೆ. ಇದರಲ್ಲಿ ತಲಾ 210 ಮೆ.ವಾ. ಸಾಮರ್ಥ್ಯದ 7 ಘಟಕ ಹೊಂದಿರುವ ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರ ಮತ್ತು 500 ಮೆ.ವಾ. ಸಾಮರ್ಥ್ಯದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ, ಕಪ್ಪತಗುಡ್ಡದಲ್ಲಿ 4.56 ಮೆ.ವಾ. ಪವನಶಕ್ತಿ ಕೇಂದ್ರ ಮತ್ತು ಯಲಹಂಕದಲ್ಲಿ 128 ಮೆ.ವಾ. ಸಾಮರ್ಥ್ಯದ ಒಂದು ಡೀಸಲ್ ಕೇಂದ್ರ ಒಳಗೊಂಡಿದೆ.

ನಿಗಮ, ಕರ್ನಾಟಕದ ವಿದ್ಯುತ್ ಯೋಜನೆಗಳನ್ನು ನಿರಂತರವಾಗಿ ಅಭಿವೃದ್ಧಿಗೊಳಿಸುವ ಮೂಲಕ ವಿದ್ಯುತ್ ವಲಯದಲ್ಲಿ ಅಗ್ರ ಸ್ಥಾನವನ್ನು ಅಲಂಕರಿಸಿದೆ. ತನ್ನ 38 ವರ್ಷಗಳ ಕಾಲಾವಧಿಯಲ್ಲಿ ಕವಿನಿನಿ ದಾಖಲೆಯ ಸಾಧನೆಗೈದಿರುವುದು ಸಂಸ್ಥೆಯ ಉತ್ಕೃಷ್ಟ ಕಾರ್ಯವೈಖರಿಗೆ ಹಿಡಿದ ಕೈಗನ್ನಡಿಯಾಗಿದೆ. ಪ್ರಸಕ್ತ ಕರ್ನಾಟಕ ಸರ್ಕಾರ ಕವಿನಿನಿಗೆ ಗುರುತರ ಜವಾಬ್ದಾರಿಯನ್ನು ವಹಿಸಿರುವ ಕಾರಣ ಮುಂದಿನ ಐದು ವರ್ಷಗಳಲ್ಲಿ ಈ ಹಿಂದೆಂದಿಗಿಂತ ಹೆಚ್ಚಿನ ಸಾಮರ್ಥ್ಯದ ವಿದ್ಯುತ್ತನ್ನು ಉತ್ಪಾದಿಸುವ ಗುರಿ ಹೊಂದಿದೆ. ಕವಿನಿನಿ ಇತ್ತೀಚೆಗೆ ಸ್ಥಾಪಿಸಿದ 500 ಮೆ.ವಾ. ಸಾಮರ್ಥ್ಯದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ ಮತ್ತು 230 ಮೆ.ವಾ. ಸಾಮರ್ಥ್ಯದ ವರಾಹಿ ಜಲವಿದ್ಯುತ್ ಯೋಜನೆ-ಎರಡನೇ ಹಂತ ಕಾರ್ಯಾಚರಣೆಯಲ್ಲಿವೆ.

* ನಿಗಮ, ಪ್ರಸ್ತುತ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರದ 500 ಮೆ.ವಾ. ಸಾಮರ್ಥ್ಯದ 2ನೇ ಘಟಕ ಮತ್ತು 250 ಮೆ.ವಾ. ಸಾಮರ್ಥ್ಯದ ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 8ನೇ ಘಟಕ, ನಾಗಝುರಿಯ 30 ಮೆ.ವಾ. ಸಾಮರ್ಥ್ಯದ ಆರ್ ಮತ್ತು ಎಂ, ಹಾಗೂ 9 ಮೆ.ವಾ. ಸಾಮರ್ಥ್ಯದ ಗ್ರಿಡ್ ಸಂಪರ್ಕಿತ ಸೋಲಾರ್ ಫೋಟೋ ವೋಲ್ಟಾಯಿಕ್ ಯೋಜನೆಗಳಿಂದ 2009-10ರೊಳಗೆ 789 ಮೆ.ವಾ. ಸೇರ್ಪಡಿಸಲಿವೆ.
* ಪ್ರಸ್ತಾಪಿತ ನೂತನ ಜಲ, ಕಲ್ಲಿದ್ದಲು ಆಧಾರಿತ ಶಾಖೋತ್ಪನ್ನ, ಪಿಟ್‌ಹೆಡ್ ಶಾಖೋತ್ಪನ್ನ, ಪಂಪ್ಡ್ ಸ್ಟೋರೇಜ್ ವಿದ್ಯುತ್ ಯೋಜನೆಗಳು, ಸೋಲಾರ್ ಫೋಟೋ ವೋಲ್ಟಾಯಿಕ್ ಮತ್ತು ಪವನಶಕ್ತಿ ಯೋಜನೆಗಳ ಪೂರ್ವ ಸಿದ್ಧತೆ ಮತ್ತು ಸ್ಥಾಪನಾ ಪೂರ್ವ ಕೆಲಸಗಳು ಪ್ರಗತಿಯಲ್ಲಿವೆ. 11ನೇ 12ನೇ ಯೋಜನಾ ಆರಂಭದ ಅವಧಿಯಲ್ಲಿ 9000ಕ್ಕೂ ಅಧಿಕ ಮೆ.ವಾ. ಸಾಮರ್ಥ್ಯವು ರಾಜ್ಯದಲ್ಲಿ ಸ್ಥಾಪನೆಗೊಳ್ಳಲಿದೆ.

ಕವಿನಿನಿ ಪ್ರಪ್ರಥಮ ಬಾರಿಗೆ ಛತ್ತೀಸ್‌ಘಢ ರಾಜ್ಯದಲ್ಲಿ ಅಲ್ಲಿನ ಸರ್ಕಾರದ ಸಹಕಾರದೊಂದಿಗೆ 1200 ಮೆ.ವಾ. ಸಾಮರ್ಥ್ಯದ ಪಿಟ್‌ಹೆಡ್ ಆಧಾರಿತ ಶಾಖೋತ್ಪನ್ನ ಯೋಜನೆಯನ್ನು ಸ್ಥಾಪಿಸಲು ಒಡಂಬಡಿಕೆ ಮಾಡಿಕೊಂಡಿದೆ. ಕರ್ನಾಟಕದ ಸನ್ಮಾನ್ಯ ಮುಖ್ಯ ಮಂತ್ರಿಗಳ ಘನ ಅಧ್ಯಕ್ಷತೆಯಲ್ಲಿ ಮತ್ತು ಮಾನ್ಯ ಇಂಧನ ಸಚಿವರ ಉಪಾಧ್ಯಕ್ಷತೆಯಲ್ಲಿ ಕವಿನಿನಿ ತನ್ನ ಕನಸನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಕ್ರಮವಹಿಸಿದೆ.

**ಕರ್ನಾಟಕ ವಿದ್ಯುತ್ ನಿಗಮ ನಿಯಮಿತ**

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

ನೋಂದಾಯಿತ ಕಚೇರಿ : ಶಕ್ತಿ ಭವನ, ನಂ.82, ರೇಸ್ ಕೋರ್ಸ್ ರಸ್ತೆ, ಬೆಂಗಳೂರು-560 001.

ದೂರವಾಣಿ : 080-22256568, 22269930-37, ಫ್ಯಾಕ್ಸ್: 080-22252144

E-mail: cccm@karnatakapower.com Website: www.karnatakapower.com